# ಹುಟ್ಟಿದಹಳ್ಳಿ—ಹಳ್ಳಿಯಹಾಡು




ಗ್ರಂಥಕರ್ತರು ಮತ್ತು ಪ್ರಕಾಶಕರು

**ಹೇಮಗಿರಿಯ ಅರ್ಚಕರು**

ಶ್ರೀ|| ಬಿ. ರಂಗಸ್ವಾಮಿಯವರು





ವರ್ಧಮಾನ ಪವರ್ ಪ್ರೆಸ್, ಮೈಸೂರು,

**1933.**

ಬೆಲೆ ೧-೨-೦.

# ವಿಷಯಾನುಕ್ರಮ



# ಮುನ್ನುಡಿ

ಹಳ್ಳಿಯ ವಾಸದಲ್ಲಿ ವ್ಯರ್ಥವಾಗಿ ಎಷ್ಟೋ ದಿನಗಳು ಕಳೆದಮೇಲೊಂದ್ದು ದಿನ "ವಿಶ್ವಕರ್ಣಾಟಕ" ಪತ್ರಿಕೆಯಲ್ಲಿ "ಪಾಮರಸಾಹಿತ್ಯವನ್ನು ಉದಾಸೀನ ಮಾಡಬೇಡಿ" ಎಂದು ಬರೆದಿದ್ದುದನ್ನು ಓದಿದೆನು. ಆಗ ಆ ವಾಕ್ಯದ ಮಹತ್ತ್ವದ ಕಡೆಗೆ ಲಕ್ಷ್ಯವು ಕಡಮೆಯಾಗಿಯೇ ಇತ್ತು. ಹಳ್ಳಿಗರ ರಾಗಿಬೀಸುವ ಪದ, ಕೋಲಾಟದ ಪದ, ಕಣಗಳಲ್ಲಿ ಹಾಡುವ ಪದ ಇವೆಲ್ಲವುಗಳ ಅರ್ಥದ ಕಡೆಗೆ ಲಕ್ಷ್ಯವಿಟ್ಟು ನೋಡಿದಾಗ ಮೇಲಿನ ವಾಕ್ಯವು ಹೃದಯದಲ್ಲಿ ತನ್ನದೇ ಒಂದು ರಾಜ್ಯವನ್ನು ಕಟ್ಟಿತು. ಅದರ ಕ್ರಮವೇ ಈ "ಹುಟ್ಟಿದ ಹಳ್ಳಿ" ಯಾಗಿ ಪರಿಣಮಿಸಿತು.

ಆಮೇಲೆ ಪಾಮರಸಾಹಿತ್ಯವನ್ನು ಸಂಗ್ರಹಿಸಿಟ್ಟರೆ ಸಾಹಿತ್ಯಸೇವೆಯ ಜೊತೆಗೆ ಹಳ್ಳಿಗರ ಅನೂಚಾನವಾದ ಆಚಾರವನ್ನು ಭದ್ರವಾದ ಬರೆಹವನ್ನಾಗಿ ಮಾಡಿಟ್ಟಂತೆ ಆಗುವುದೆಂದು ತೋರಿತು. ಹೆಸರಿಗೆ "ಪಾಮರಸಾಹಿತ್ಯ" ವೆಂಬುದು ದಿಟ. ಆದರೆ ರಸದ ಝರಿಯು ಪಂಡಿತಸಾಹಿತ್ಯದ ಜೊತೆಯಲ್ಲಿಯೇ ಹರಿಯುವುದು. ಮೇಲಿನ ತೊಗಟೆಯಾದ ಭಾಷೆಯು ಮಾತ್ರ ಹಳ್ಳಿಯದು. ಆದುದರಿಂದಲೇ ಆ ಹೆಸರು ಬಂದಿತು.

ಒಂದು ಜನಾಂಗದ ಸಾಹಿತ್ಯವು ಸರ್ವಾಂಗಪುಷ್ಟವಾಗಿ ಬೆಳೆದರೆ ಜನರ ಲಕ್ಷ್ಯವು ಆ ಕಡೆಗೆ ತಿರುಗುವುದು. ಆ ಸರ್ವತೋಭದ್ರವಾದ ಸಾಹಿತ್ಯವು ತನ್ನ ಸಂಸ್ಕೃತಿಯನ್ನು ಉಪಾಸಕರ ಹೃದಯದಲ್ಲಿ ತುಂಬುವುದು. ಒಡನೆಯೇ ಅಂತರಂಗ ಬಹಿರಂಗಗಳಲ್ಲಿ ಆ ಸಂಸ್ಕೃತಿಯು ಪ್ರಾದುರ್ಭಾವವಾಗುವುದು. ಪ್ರಕೃತ ಇಂಗ್ಲಿಷ್ ಸಾಹಿತ್ಯವನ್ನು ತೆಗೆದುಕೊಳ್ಳೋಣ: ಸಂಸ್ಕೃತಸಾಹಿತ್ಯದ ಸಂಪ್ರದಾಯವುಳ್ಳ ಆರ್ಯಾವರ್ತದ ಜನಾಂಗವನ್ನು ಇನ್ನಾವ ಸಾಹಿತ್ಯವೂ ತನ್ನದನ್ನಾಗಿ ಇಷ್ಟುಮಟ್ಟಿಗೆ ಮಾಡಿಕೊಳ್ಳಲಿಲ್ಲ. ರಾಜಕೀಯಬಲವಿದೆಯೆನ್ನುವಿರಿ. ಇತರರಿಗಿರಲಿಲ್ಲವೆ ?

ನಮ್ಮ ಸಾಹಿತ್ಯವು ಬೀಳಾಗಿದೆ. ಬೀಳೆಂದು ಬಿಟ್ಟುಬಿಡಲು ಸಾಧ್ಯವಿಲ್ಲ. ನಾವು ಇಂಗ್ಲಿಷ್ ಸಾಹಿತ್ಯವನ್ನು ನಮ್ಮ ಮಾತೃಭಾಷೆಯನ್ನಾಗಿ ಮಾಡಿಕೊಳ್ಳಲು ಸಾಧ್ಯವಿಲ್ಲ. ಆದುದರಿಂದ ನಮ್ಮದರಲ್ಲಿ ಮುರಿದ ಭಾಗವನ್ನು ಸರಿಪಡಿಸ

ಬೇಕು. ಸಾಹಿತ್ಯದೇವಿಗೆ ಹಳ್ಳಿಯ ವಿಚಾರರೂಪವಾದ ಉಡುಗೊರೆಯನ್ನು ನಮ್ಮ ಕನ್ನಡನಾಡಿನವರೇ ಕೊಡಬೇಕು. ಪಂಡಿತರು ತಮ್ಮ ಕೈಲಾದಷ್ಟು ಉತ್ತಮ ಕಾವ್ಯಗಳನ್ನು ಒರೆಯಲಿ. ಒಲು ಸಂತಸ. ಅದರ ಜೊತೆಯಲ್ಲಿ ಹಳ್ಳಿಯ ಪಾಮರ ಸಾಹಿತ್ಯವೂ ಬೆಳೆಯಲಿ. ಎರಡೂ ರಾಶಿರಾಶಿಯಾಗಿ ಬಿದ್ದಾಗ ಇದು ಚರಿತ್ರೆಯ ಭಾಗ. ಇದು ವೇದಾಂತಭಾಗ, ಇತ್ಯಾದಿಯಾಗಿ ಆರಿಸುವವರು ಆರಿಸಿ ಜೋಡಿಸಲಿ. ಅಂತು ಮುಂದೆ ಕನ್ನಡನಾಡಿನಲ್ಲಿ ಹುಟ್ಟಿದವನು ಪಾಙ್ಮಯದೃಷ್ಟಿಯಿಂದಲೂ ತಾನು ಕನ್ನಡನಾಡಿನಲ್ಲಿ ಹುಟ್ಟಿದುದು ಸಾರ್ಥಕವಾಯಿತೆಂದು ನಿಜವಾದ ಸಮಾಧಾನ ಹೊಂದುವಂತೆ ನಾವು ದುಡಿಯಬೇಕು.

ಈಗ ನಮ್ಮ ಸಾಹಿತ್ಯಝುರಿಗೆ ವರ್ಷಾಕಾಲವು ಪ್ರಾಪ್ತವಾಗಿದೆ ಆಂಗ್ಲ, ಸಂಸ್ಕೃತ, ಹಳೆಯದು, ಹೊಸದು, ಪಟ್ಟಣದ್ದು, ಹಳ್ಳಿಯದು, ಅರಮನೆ, ಗುರುಮನೆ, ಗುಡಿಸಲು, ದೇಶೀಯ, ವಿದೇಶೀಯ ಮುಂತಾದುವುಗಳ ವಿಚಾರಗಳೆಲ್ಲ ಕನ್ನಡದಲ್ಲಿ ಪ್ರಚಾರವಾಗುತ್ತಲಿದೆ. ಹೇಳಿದುದನ್ನೇ ಹೇಳಬೇಕಾದರೆ ಕರ್ಣಾಟಕಸಂಘಗಳೂ ಹಿರಿಯರೂ ಕನ್ನಡದ ಕಡೆಗೆ ಹೊರಳಿದುದು, ವಿದ್ಯಾಪೀಠದಲ್ಲಿ ಕನ್ನಡ ಸಾಹಿತ್ಯವು ಭದ್ರವಾಗಿ ನಿಲ್ಲದಿದ್ದರೂ ಹೋಗಿ ಒಂದು ಮಾಡುವ ಅಪ್ಪಣೆ ಸಿಕ್ಕಿದ್ದುದು ಇವೆಲ್ಲಾ ಸಕಾಲದಲ್ಲಿ ಒಂದೊಂದು ಹದವಾದ ಮಳೆಗಳು ಬಂದಂತೆ.

ಯಾವ ಭಾವವನ್ನು ತೆಗೆದುಕೊಂಡರೂ ತಾಳ್ಮೆಗಾರರು ಮಧ್ಯಸ್ಥಗಾರರು ಆವೇಶಯುತರು ಇದ್ದೇ ಇರುವರು. ಸಾಹಿತ್ಯಭಾಗದ ಆವೇಶಗಾರರಿಗೆ ನಖಶಿಖಾಂತವಾಗಿ ಕನ್ನಡಿಗರೆಂದು ಹೆಸರು. ಇವರದು ಒಂದೇ ದಾರಿ. ದೀಪಾವಳಿ ಹಬ್ಬವೆನ್ನುವುದಕ್ಕೆ ಸೊಡರ ಸಾಲಿನ ಹಬ್ಬವೆನ್ನುವರು. ಕೆಲವರು ಪಾಳುಕೋಟೆಯ ಕಲ್ಲನ್ನು ತಿದ್ದಿ ಹೊಸವಾಗಿ ಸೇತುವೆ ಕಟ್ಟಿಕೊಂಡಂತೆ ಹಳೆಯ ಸಾಹಿತ್ಯವನ್ನು ಕಾಲಕ್ಕೆ ತಕ್ಕಂತೆ ಛಂದಸ್ಸು ಆದಿಯಾಗಿ ಮಾರ್ಪಡಿಸಬೇಕೆನ್ನುವರು. ಛಂದಸ್ಸು ರಸಕ್ಕೆ ಅಡ್ಡಗಟ್ಟೆಂದು ಕೆಲವರು. ಇತರರು ಹಳೆಯದು ಸ್ವಲ್ಪ ಹೊಸದು ಸ್ವಲ್ಪ ಸೇರಿಸಿ ಅರಮನೆ ದರ್ಬಾರಿನ ಚಂದದಂತೆ ಸಾಹಿತ್ಯದೇವಿಯನ್ನು ಅಲಂಕರಿಸಬೇಕೆನ್ನುವರು. ಎಲ್ಲರಿಗೂ ಧನ್ಯವಾದಗಳು. ಎಲ್ಲರ ಸದುದ್ದೇಶಗಳೂ ಕೈಗೂಡಲಿ. ಹಳೆಯ ಸಂಸ್ಕೃತಿಯು ಅಂದರೆ ನಿಜವಾದ ಕನ್ನಡದ ಸಂಪ್ರದಾಯವು ಸಾಹಿತ್ಯಮಾರ್ಗದಲ್ಲೂ ಇರಬೇಕೆಂದು ನಮ್ಮ ಮತ.

ಸಾಹಿತ್ಯವು ಒಂದೇ ದಿನ ಸರ್ವತೋಮುಖವಾಗಿ ಸೊಗಸಾಗುವುದಿಲ್ಲ. ನೂರಾರು ವರ್ಷಗಳು ಕಳೆದನಂತರ ನವರಸಭರಿತವಾಗುವುದು. ಅಷ್ಟಾಗುವ ವರೆಗೆ

ಕನ್ನಡಿಗರು ದುಡಿಯಬೇಕಾಗಿದೆ. ಅಖಿಲ ಭಕ್ತಿ ಮಳಲ ಸೇವೆಯೆಂಬ ಗಾದೆಯಂತೆ ನಮಗೆ ಇನ್ನಾವ ರೀತಿಯಿಂದಲೂ ಸೇವೆಗನುಕೂಲವಿಲ್ಲದುದರಿಂದ ಹಳ್ಳಿಯ ವಿಚಾರವನ್ನೊಳಗೊಂಡ ಈ ಪುಟ್ಟ ಪುಸ್ತಕರೂಪವಾದ ಸೇವೆಯು ಒದಗಿದುದಕ್ಕಾಗಿ ಮನಸ್ಸಮಾಧಾನವಾಗಿದೆ.

ನಾವು ಹಳ್ಳಿಯ ಸಾಹಿತ್ಯವನ್ನು ಸಂಗ್ರಹಮಾಡಲು ಹೊರಟಾಗ ಬರೀ ಬೆಂಗಾಡಿನ ಪ್ರಯಾಣದಂತೆ ತೋರಿತು. ಬರುಬರುತ್ತ "ಬೆಳೆಯು ಬೇಕಾದಷ್ಟಿದೆ, ಕುಯ್ಯುವವರೇ ಇಲ್ಲವಲ್ಲ" ಎನ್ನುವ ಉದ್ಗಾರವು ಹೊರಡುವಂತಾಯ್ತು. ನೂರಿಪ್ಪತ್ತು ಮನೆಯಿರುವ ಸಮ್ಮೂರಿನಲ್ಲೇ ಇಷ್ಟು ವಿಚಾರಗಳು ದೊರೆತಿರುವಾಗ, ಡಕಣಾಚಾರಿಯ ಕಟ್ಟಡಗಳು ಕೋಟೆಕೊತ್ತಲುಗಳು ಶಾಸನ ಸಾಮಗ್ರಿಗಳು ಇತ್ಯಾದಿ ಅನೇಕಾನೇಕ ವಿಚಾರಗಳಿರುವ ಊರಿನಲ್ಲಿ ಇನ್ನೆಷ್ಟು ಸಾಹಿತ್ಯಕ್ಕೆ ಅನುಕೂಲಸನ್ನಿವೇಶವಿದೆಯೋ ಎಂದು ತೋರಿತು ಮುಖ್ಯವಾಗಿ ಕನ್ನಡ ನಾಡಿನ ಸಾಹಿತ್ಯಭಕ್ತರು ಹಳ್ಳಿಯ ಕಡೆಗೆ ಹೊರಳದಿದ್ದರೆ ಸ್ವಾರಸ್ಯವಿಲ್ಲ.

ಶಾಸನದ ಇಲಾಖೆಯವರು ಹಳ್ಳಿಗಳಿಗೆ ಬಂದು ತಮ್ಮ ಕಾರ್ಯರಂಗಕ್ಕಿಳಿದಾಗ ಅಟ್ಟಬೆಟ್ಟಗಳಲ್ಲಿ ಅಡಗಿದ್ದ ಓಲೆಯಗರಿ, ತಾಮ್ರ, ಕಂಚು, ಕರಡುಕಾಗದ, ಶಿಲಾ ಮುಂತಾದುವುಗಳ ಶಾಸನಗಳನ್ನು ಹೊರಗೆಡಹಿದರು. ಆದರೆ ಸಾಹಿತ್ಯ ಸೇವಕರಾದ ಜೋಗಿಗಳು ಬಂದಾಗ ಒಬ್ಬರೂ ಕೈಗೆ ಸಿಕ್ಕುವುದಿಲ್ಲ. ಅಷ್ಟಕ್ಕಾಗಿ ನಾವು ಹಿಂದಾದ ಮನಸ್ಸುಳ್ಳವರಾಗಬಾರದು. ನಾವು ಹಳ್ಳಿಯವರಿಗಿಂತ ಹಳ್ಳಿಯವರಾಗಿ ಅವರಲ್ಲೇ ಕಲೆತು ಪ್ರೀತಿಯಿಂದ ಕಾರ್ಯಸಾಧನೆಮಾಡಬೇಕು. ಕೆಲವರು ನಾಚಿಕೆಯಿಂದ ಹಾಡುಗಳನ್ನು ಹಾಡುವುದಿಲ್ಲ. ಕೆಲವರು ಅಯ್ಯೋ ಅರ್ಧ ಮರ್ಧ ವಿಚಾರಗಳನ್ನು ಏನು ಹೇಳುವುದೆಂದು ಸುಮ್ಮನಾಗುವರು. ಇತರರು ಇದೇನೋ ಗಂಡಾಂತರಬಂದಿತೆಂದು ಭಾವಿಸುವರು. ಹೀಗಾಗಿ ಹಳ್ಳಿಯ ಸಾಹಿತ್ಯಸಂಗ್ರಹವು ರೈಲಿಗೆ ಹೊತ್ತಾಗಿ ಓಡಿಹೋಗುವಾಗ ಟಿಕೀಟಿನ ದುಡ್ಡು ಕೆಳಗೆ ಬಿದ್ದುಹೋಗಿ ಅದನ್ನು ಹುಡುಕುತ್ತ ಹಿಂದಿರುಗುವವನ ಮನಸ್ಸಿನಷ್ಟು ಬೇಜಾರಾಗುವುದು. ಆದರೆ ದೇಶಸೇವೆಯನ್ನು ಮರೆಯುವುದಕ್ಕಾದೀತೇ ? ವೃತ್ತಿವಂತರು, ಜಹಗೀರ್ದಾರರು, ಹಳ್ಳಿಯ ಉಪಾಧ್ಯಾಯರು, ಗ್ರಾಮದ ಮುಖಂಡರು ಮುಂತಾದವರು ಈ ವಿಧವಾದ ಕಾರ್ಯರಂಗಕ್ಕಿಳಿದರೆ ಕರ್ಣಾಟಕಸಾಹಿತ್ಯವನ್ನು ತುಂಬಿಡಲು ಕಟ್ಟಡವನ್ನೆಲ್ಲಿ ತರೋಣ ?

ಈ ಪುಸ್ತಕದಲ್ಲಿ ಊರಿನ ಚಿತ್ರ, ಹೇಮಗಿರಿ ಬೆಟ್ಟದ ಮೇಲೆ ಕಾಣುವ ಸೊಬಗಿನ ರೂಪರೇಖೆ, ಸುಗ್ಗಿಯ ನೋಟ, ಹೇಮಾವತಿಯ ಭಾವಗಳ ಚಿತ್ರ ಇವುಗಳನ್ನಾದರೂ ಸೇರಿಸಬೇಕಾಗಿತ್ತು. ಈ ನವೀನಯುಗದಲ್ಲಿ ಚಿತ್ರಸಹಿತ ವಾದ ಸಾಹಿತ್ಯವು ಬೆಳೆದಷ್ಟೂ ಒಳ್ಳೆಯದು. ಆದರೆ ಆ ಅನುಕೂಲಗಳೆಲ್ಲ ಹಳ್ಳಿಯ ಹುಡುಗರಿಗೆಲ್ಲಿ ಬರಬೇಕು ? ಹಲ್ಲಿದ್ದರೆ ಕಡಲೆಯಿಲ್ಲ, ಕಡಲೆಯಿದ್ದರೆ ಹಲ್ಲಿಲ್ಲ.

ಪ್ರಪಂಚದ ಜನಾಂಗಗಳಲ್ಲಿ ಈಗ ನಮಗೆ ನಾಗರಿಕರೆಂದು ತೋರುವ ಪಾಶ್ಚಾತ್ಯರಲ್ಲಿರುವ ಮುಖ್ಯ ಗುಣ, ವ್ಯವಸ್ಥೆ, ಸೈನ್ಯಸಿದ್ಧತೆಗಳೆಷ್ಟು ವ್ಯವಸ್ಥೆಯೋ ಸಾಹಿತ್ಯಪ್ರಚಾರದಲ್ಲಿಯೂ ಅಷ್ಟೇ ವ್ಯವಸ್ಥಾಮಾರ್ಗವುಂಟು. ಪ್ರಕೃತ ಹಳ್ಳಿ ಯಲ್ಲಿ ನಮಗೆ ಒಡಕು ಪಾತ್ರೆಯಂತೆ ಸಿಕ್ಕುವ ಗದ್ಯ ಪದ್ಯದ ಚೂರುಗಳನ್ನು ಆರಿಸಿ ಸರಿಯಾದ ಒಂದು ರೂಪು ಕೊಡುವ ವ್ಯವಸ್ಥೆಯಾಗಬೇಕಾಗಿದೆ. ರಸಪ್ರ ಧಾನರು ಛಂದಸ್ಸುಗಳ ಅಡ್ಡಗಟ್ಟನ್ನು ಕಿತ್ತೊಗೆಯಬೇಕೆನ್ನುವರು. ಇದರ ಫಲ ವಾಗಿ ಕನ್ನಡ ಪದ್ಯದ ದ್ವಿತೀಯಾಕ್ಷರಪ್ರಾಸವು ಮಾಯವಾಗುತ್ತಿದೆ. ಇಷ್ಟೇ ಅಲ್ಲ. ಷಟ್ಪದಿಯು ಅಷ್ಟಪದ ನವಪದಿಯಾಗುತ್ತಿದೆ. ಹೀಗೆ ದಿಕ್ಕಾಪಾಲಾಗಿ ನೂತನಸಾಹಿತ್ಯವು ಓಡುವುದೊಂದು ಕಡೆ, ಒತ್ತಟ್ಟು ಹಳ್ಳಿಯ ಸಾಹಿತ್ಯದಲ್ಲಿ ಕಾಣುವ ವೃತ್ತಗಳು ಅದಾವ ಗುಂಪಿನವೋ ತಿಳಿಯದ ಹಾಗಿರುವುವು. ಇದ ಕ್ಕೆಲ್ಲ ಸಾಹಿತ್ಯಭಕ್ತರು ಏನಾದರೊಂದು ವ್ಯವಸ್ಥೆಮಾಡಿ ಒಂದು ಸಿಸ್ತನ್ನು ಏರ್ಪ ಡಿಸಿದರೆ ಎಷ್ಟೋ ಲಕ್ಷಣ. ಇಲ್ಲದಿದ್ದರೆ ಛಂದಸ್ಸಿಗೇ ಪ್ರಾಬಲ್ಯಬಂದಕಾಲ ದಲ್ಲಿ ಈಗಿನ ಕೃತಿಯು ಪುಡಿಯಾಗಿ ಉದುರಿ, ಕಾಡಿನಲ್ಲಿ ಉದುರಿ ಬಿದ್ದಿರುವ ಗುಲಾ ಬಿಯ ಹೂವಿನಂತಾಗಬಹುದು. ಹಾಗಾಗದಂತೆ ಮಾಡಲು ಹಿರಿಯರಿಗಿದೇನೂ ಅ ಷ್ಟು ಕಷ್ಟವಾದ ಕೆಲಸವಲ್ಲ. ಸಾರಾಂಶ—ಗುಣವುಳ್ಳ ಕೃತಿಗಳು ಹಳೆಯವಾಗಿರಲಿ, ಹೊಸವಾಗಿರಲಿ ಅವಕ್ಕೂ ಒಂದು ಶಾಸನಬದ್ಧವಾದ ಮುದ್ರೆಯಿದ್ದರೆ ಬೆಲೆಯಧಿಕ.

ನಾವು ಸಾಧ್ಯವಾದಷ್ಟು ಎಚ್ಚರಿಕೆಯಿಂದ ಹಳ್ಳಿಗರ ಬಾಯಿಂದ ಬಂದ ಪದ್ಯಗಳನ್ನೂ ಮತ್ತಿತರವಿಷಯಗಳನ್ನೂ ಸಾವಧಾನದಿಂದ ಯೋಚಿಸಿ ಬರೆದಿರು ವೆವು. ಆದರೆ ದೀಪದ ಹತ್ತಿರ ಕತ್ತಲೆಯಿರುವಂತೆ ಮನಸ್ಸಿನ ಹತ್ತಿರ ಮರೆವು ಇರುವುದುಂಟು. ಅದರಿಂದೇನಾದರೂ ವಿಷಯಗಳು ಬಿಟ್ಟುಹೋಗಿದ್ದರೆ ವಾಚ ಕರು ಮನ್ನಿಸಬೇಕು. ಗದ್ಯಪದ್ಯಗಳಲ್ಲಿ ಗಾದೆಯ ಮಾತುಗಳಲ್ಲಿ ಅತಿಭೀಭತ್ಸಿತ ರಸವುಳ್ಳ ಕೃತಿಯನ್ನು ಕೆಲವು ಕಡೆ ಮರ್ಯಾದೆಯ ಮಾರ್ಗಕ್ಕೆ ತಿರುಗಿಸಿ ಅಸಾ

ಧ್ಯವಾದುದನ್ನು ಬಿಟ್ಟುಬಿಟ್ಟಿರುವುದಾಗಿದೆ. ಹಳ್ಳಿಗರು ಕೋಲಾಟದ ಪದ್ಯಗಳನ್ನೂ ಹಾಡುಗಳನ್ನೂ ಕಲಿತುಕೊಳ್ಳಬಹುದು. ಆದರೀಗ ಯಕ್ಷಗಾನವು ಸಾಮಗಾನಕ್ಕೆ ತಿರುಗುವ ಕಾಲ. ಹೆಂಗುಸರು ಸಂಗೀತಪಾರಿಜಾತದ ಕಡೆಗೆ ತಿರುಗಿರುವರು. ಆದುದರಿಂದ ಇದೆಲ್ಲ ಸಾಹಿತ್ಯದಲ್ಲಿ ಸಂಗ್ರಹಿಸುವ ವಿಷಯವಾಗಿ ಕಾಲಾನುಕಾಲಕ್ಕೆ ಪರಿಣಮಿಸಬಹುದು. ಕಾಲಗತಿಯನ್ನು ತಡೆಯುವವರಾರು ?

ಯಾವ ಮಾತಿನಲ್ಲೂ ವ್ಯಂಗ್ಯಮರ್ಯಾದೆಯಿರಬಾರದು. ಅದರಲ್ಲೂ ದೇಶಾಭ್ಯುದಯಸಾಧಕಗಳಾದ ಗ್ರಂಥಗಳಲ್ಲಿ ವ್ಯಂಗ್ಯಮರ್ಯಾದೆಯು ಎಳ್ಳಿನ ಮೊನೆಯಷ್ಟೂ ಇರಬಾರದೆಂದು ಕೆಲವರ ಮತ. ಸರಿ—ಎಂತಹ ವ್ಯಂಗ್ಯವು ಇರಲೇ ಬಾರದು ? ಇನ್ನೊಬ್ಬರ ಮನಸ್ಸನ್ನು ಚುರುಚುರಿನ್ನಿಸುವುದು ಕೂಡದು. ಅದು ನಮಗೂ ಇಷ್ಟ. ಚಮತ್ಕಾರ ಸದುದ್ದೇಶ ಗಂಭೀರವಾಣಿಯಿಂದ ದೋಷದ ಸ್ವರೂಪವನ್ನು ಪ್ರಕಾಶಪಡಿಸುವ ವ್ಯಂಗ್ಯವು ಇಲ್ಲದ ಮಾತೆಂತಹುದು ? ಬಿ. ವೆಂಕಟಾಚಾರ್ಯರ ಅಡವಿಯ ಹುಡುಗಿಗಿಂತಲೂ ಕಾಡು ಕಗ್ಗಲ್ಲು ಹುಡುಗಿಯಂತಹುದೆಂದು ನಮ್ಮ ನಂಬಿಕೆ. ಅದಲ್ಲದೆ ಸರಸವಾಗಿ ವ್ಯಂಗ್ಯಮರ್ಯಾದೆಯಿಂದ ಮಾತಾಡುವುದು ಸ್ವಭಾವಗುಣ. ವಿದ್ಯಾರ್ಥಿವೇತನ ಕೊಡಿಸಿ ಕೊಡಿ ಎಂದು ಕೇಳಿದರೆ "ಹೋಗೋ ಕೊಡೋದಿಲ್ಲ" ಅನ್ನುವವರೂ ಇದ್ದಾರೆ. ನೀನು ಕೇಳುವುದು ಸರಿ. ನೀನು ಬುದ್ಧಿವಂತನೂ ಅಹುದು. ಆದರೆ ನಿನಗೆ ಓದುವುದಕ್ಕೇ ಪುರಸತ್ತು ಇಲ್ಲವಲ್ಲ, ಏನು ಮಾಡೋಣ ಎನ್ನುವವರಿಲ್ಲವೇ ಇಲ್ಲವೆಂದು ಹೇಳುವುದಕ್ಕಾದೀತೆ ? ಇದನ್ನೆಲ್ಲ ಏಕೆ ಹೇಳಬೇಕಾಯಿತೆಂದರೆ—ಈ ಪುಸ್ತಕದಲ್ಲೂ ವ್ಯಂಗ್ಯಗರ್ಭಿತವಾದ ಮಾತುಗಳಿಲ್ಲದೆ ಇಲ್ಲ. ಆದರವು ಸದುದ್ದೇಶದ ಗುರಿಯಿಟ್ಟುಕೊಂಡೇ ಹೊರಹೊರಟಿವೆ ಎಂದು ಹೇಳುವುದಕ್ಕಾಗಿ.

ಮನುಷ್ಯನಿಗೆ ಹೇಗೆ ವೇಷ ಭಾಷೆಗಳು ಅಚ್ಚುಗಟ್ಟಾಗಿರಬೇಕೋ ಅಂತೆಯೇ ಗ್ರಂಥಕ್ಕೂ. ಇಲ್ಲಿಯವರೆಗೆ ಈ ಪುಸ್ತಕದ ವೇಷದ ಸ್ವರೂಪವನ್ನು ಹೇಳಿದುದಾಯಿತು. ಇನ್ನು ಭಾಷೆ— ಇದರಲ್ಲಿ ಗ್ರಂಥದ ಹಳ್ಳಿಯ ವ್ಯವಹಾರಗಳ ಭಾಷೆಯೆಲ್ಲ ಸೇರಿಹೋಗಿದೆ. ಓದುಗರಿಗೆ ಸ್ವಲ್ಪ ಶ್ರಮವೇ ಆಗಬಹುದು. ಸಾರವೇನಾದರೂ ಇದ್ದರೆ ಗ್ರಹಿಸಿ. ಬಾಕಿಯ ಕಡೆ ಗಮನಕೊಡದಿದ್ದರೆ ಸರಿ. ಸಾರಾಂಶ— ಭಾಷೆ ಚೌಚೌ.

ಈ ಗ್ರಂಥದಲ್ಲಿ ವಿಶೇಷವಾಗಿ "ಹಿಂದೆ ಈ ರೀತಿಯಾಗಿತ್ತು. ಈಗ ಇಲ್ಲವೇ" ಎನ್ನುವ ಸಂದೇಹ ಬರುವಂತೆ ಅದ್ಯತನ ಭೂತಕಾಲವನ್ನು ಸೂಚಿಸುವ

ಕ್ರಿಯಾಪದಗಳೇ ಹೇರಳವಾಗಿವೆ, ನಾಟಕ ನೋಡಿದವರು ಅದರ ವಿಚಾರವನ್ನು ತಿಳಿಸುವಂತೆ ಈ ಮಾದರಿ ಇದೊಂದು ನಾಟಕ. ಜಗತ್ತು ರಂಗಭೂಮಿ.

ಇನ್ನೇನು ಹೇಳಬೇಕೋ, ಅದು ವಾಚಕರ ಅಧೀನ. ಈಗಿನ ಬರೆಹಗಾರರು ತಮ್ಮನ್ನು ತಾವೇ ತಿದ್ದಿಕೊಂಡು ಗದ್ಯಪದ್ಯಗಳಲ್ಲಿ ಔಚಿತ್ಯವನ್ನೂ ಸದ್ಯದ ಜನಮನೋಭೂಮಿಕೆಗೆ ಅನುಗುಣವಾದ ಸನ್ನಿವೇಶವನ್ನೂ ಕಲ್ಪಿಸಿಕೊಳ್ಳಬೇಕಾಗಿದೆ. ಈ ವಿಚಾರದಲ್ಲಿ ಇದೇ ಮೊದಲಿನ ಪ್ರಯತ್ನವಾಗಿರುವುದರಿಂದ ಮೇಲಿನ ಮಾತನ್ನು ಹೇಳಬೇಕಾಯಿತು.

ಸ್ನೇಹಿತರೇ ! ಸಂಸ್ಕೃತಿಯನ್ನು ಬಿಟ್ಟೀರಿ ಜೋಕೆ. ಔಚಿತ್ಯವನ್ನು ಮರೆತೀರಿ ಎಚ್ಚರಿಕೆ. ಕನ್ನಡನಾಡಿದು ಮೈಸೂರು ಎಂಬುದನ್ನು ನಿಮ್ಮ ಜ್ಞಾಪಕದಲ್ಲಿಡಿ. ಮೈಸೂರಿನಲ್ಲಿ ಉದಯವಾಗುತ್ತಿರುವ ಕಟ್ಟಡಗಳು, ಪಾಡುತ್ತಿರುವ ರಾಗಗಳು, ಹಾಕಿಕೊಳ್ಳುವ ವೇಷಗಳು ಎಲ್ಲವೂ ಮನಸ್ಸಿಗೆ ಒಂದು ವಿಧವಾದ ಕಳವಳವನ್ನುಂಟುಮಾಡಿ ರಾಮನನ್ನು ನೋಡಿದ ಗುಹನ ಮನೋಭಾವನೆಯನ್ನುಂಟುಮಾಡುತ್ತಿದೆ. ಕರ್ಣಾಟಕಸಂಸ್ಕೃತಿಯೆನ್ನುವ ಪದಾರ್ಥವೊಂದಿಲ್ಲದಿದ್ದರೆ, ಈ ರೀತಿ ತಳಮಳನೇಕೆಂದು ನನ್ನಲ್ಲಿ ನಾನೇ ಪ್ರಶ್ನೆಮಾಡಿಕೊಳ್ಳುತ್ತೇನೆ. ಕರ್ಣಾಟಕತತ್ತ್ವವು ಸ್ವತಂತ್ರವಾಗಿ ಬಲ್ಲುದೆಂದು ನನಗೆ ಆತ್ಮವಿಶ್ವಾಸವಿದೆ. ಹಳ್ಳಿಗಳ ನಾನಾಶಾಖೆಗಳ ವಿಚಾರಮಾಡಲಾಗಿ ಆಯಾ ಭಾಗಗಳಿಗೆ ಅನುಗುಣವಾದ ಶಬ್ದಭಂಡಾರಗಳು ದೊರೆತು ನನ್ನ ಆತ್ಮವಿಶ್ವಾಸವು ದೃಢಪಟ್ಟಿದೆ. ಅದನ್ನು ಕಾಪಾಡುವುದು ನನ್ನ ಮತ್ತು ನನ್ನ ಕರ್ಣಾಟಕಸ್ನೇಹಿತರ ಕರ್ತವ್ಯ. ಇನ್ನೆಷ್ಟು ಹೇಳಿದರೂ ಅಷ್ಟೆ. ಯಾವುದು ಕನ್ನಡನಾಡಿಗೆ ಶ್ರೇಯಸ್ಸೋ ಅದನ್ನು ಅನುಸರಿಸಿರಿ.

ಈ ಗ್ರಂಥವನ್ನು ಅಚ್ಚುಕಟ್ಟಾಗಿ ಮುದ್ರಿಸಿ ತಪ್ಪುಗಳನ್ನು ತಿದ್ದಿ ಇನ್ನೂ ಅನೇಕವಿಧವಾಗಿ ಕನ್ನಡನಾಡಿನ ದೃಷ್ಟಿಯಿಂದ ಸಹಾಯಮಾಡಿದ ಅರಮನೆಯ ವಿದ್ವಾನ್, ನ್ಯಾಯತೀರ್ಥ, ಜೈನಶಾಸ್ತ್ರವಿಶಾರದ ಮ|| ರಾ|| ಶಾಂತರಾಜಶಾಸ್ತ್ರಿಗಳು ದೀರ್ಘಾಯುಷ್ಮಂತರಾಗಿದ್ದು ಕರ್ಣಾಟಕದ ಅಭಿವೃದ್ಧಿಗೆ ಇತೋಪ್ಯತಿಶಯವಾಗಿ ಸಹಾಯಮಾಡುವಂತೆ ಅನುಗ್ರಹಿಸೆಂದು ಹೇಮಗಿರಿಗಧಿನಾಯಕನನ್ನು ಪ್ರಾರ್ಥಿಸಿ, ಕನ್ನಡಿಗರಿಗಭಿವಂದಿಸಿ ಈ ಮುನ್ನುಡಿಯನ್ನು ಮುಗಿಸುತ್ತೇನೆ.

**ಅರ್ಚಕ ಬಿ. ರಂಗಸ್ವಾಮಿ,**
ಹೇಮಗಿರಿ—ಬಂಡಿಹೊಳೆ,
ಕೃಷ್ಣರಾಜಪೇಟೆ ತಾಲ್ಲೋಕು, ಮೈಸೂರು ಡಿಸ್ಟ್ರಿಕ್ಟ್.

*

# ಹುಟ್ಟಿದಹಳ್ಳಿ



## ಬಂಡಿಹೊಳೆಯ ಸಾಮಾನ್ಯವರ್ಣನೆ

ಬಂಡಿಹೊಳೆಯು ಸಣ್ಣಹಳ್ಳಿ, ಸುಮಾರೈವತ್ತೆರಡು ಮನೆಗಳು ಇರುತ್ತವೆ. ಜನಸಂಖ್ಯೆ ಸ್ವಲ್ಪ ಹೆಚ್ಚುಕಡಮೆ ಒಂಬೈನೂರು. ಪೂರ್ವದಿಕ್ಕಿಗೆ ಬೆಟ್ಟದಸಾಲು. ಉಳಿದ ದಿಕ್ಕುಗಳಲ್ಲಿ ಹೇಮಾವತೀನದಿ ಈ ಊರಿನ ಎಲ್ಲೆಯೆಂದು ಹೇಳಬಹುದು. ಊರಿನ ಸುತ್ತಲೂ ಸ್ಯೈರುಪಚ್ಚೆಗಳಿಂದ ತುಂಬಿದ ಹೊಲ ಗದ್ದೆಗಳೂ ಹಸುರುಹುಲ್ಲಿನ ಗೋಮಾಳಗಳೂ ಪ್ರಕೃತಿಯ ದಿನಕ್ಕೊಂದುವಿಧವಾದ ಸೊಬಗಿನ ನೋಟವೂ ನಮ್ಮೂರಿನ ಕಳೆಯನ್ನು ಹೆಚ್ಚಿಸಿದ್ದುವು. ಊರಿನ ಸುತ್ತಲೂ ಕಳ್ಳಿ ಬೂತಾಳೆಗಳ ಬಲವಾದ ಬೇಲಿಗಳಿದ್ದುವು. ಇತ್ತೀಚೆಗೆ ಅದು ಕಮ್ಮಿಯಾಗುತ್ತಿದೆ. ಹೊರ ಊರುಗಳಿಂದ ಬರುವ ದಾರಿಗಳಲ್ಲಿ ಹೇಮಗಿರಿಯಿಂದ ಬರುವ ದಾರಿಯೇ ಸ್ವಲ್ಪ ಸುಮಾರಾಗಿತ್ತು, ಇದೇ ಹೆದ್ದಾರಿ. ಈ ಮಾರ್ಗವಾಗಿ ಬರುವಾಗ ಬಲಗಡೆ ಶ್ರೀಕಂಠೇಶ್ವರಸ್ವಾಮಿಯವರ ದೇವಸ್ಥಾನವು ಸಿಕ್ಕುವುದು. ಇದನ್ನು ಕಟ್ಟಿ ನೂರಾರು ವರ್ಷಗಳಾದವು ಆಳಿದಮಹಾಸ್ವಾಮಿಯವರಾದ ಮುಮ್ಮಡಿ ಕೃಷ್ಣರಾಜ ಒಡೆಯರವರ ತಾಯಿಯವರಾದ ಮಾತುಶ್ರೀ ದೇವರಾಜಮ್ಮಣ್ಣಿಯವರು ಈ ದೇವಸ್ಥಾನವನ್ನು ಕಟ್ಟಿಸಿ ಇದರ ಸೇವೆಗಾಗಿ ವೃತ್ತಿಗಳನ್ನು ಬಿಟ್ಟಿರುವರು. ಈ ಪುಣ್ಯಾತ್ಮರ ವಿಗ್ರಹವೂ ಅವರ ಜ್ಞಾಪಕಾರ್ಥವಾಗಿ ಇದೇ ದೇವಸ್ಥಾನದಲ್ಲಿ ಪ್ರತಿಷ್ಠಿಸಲ್ಪಟ್ಟಿರುವುದು. ಈ ರೀತಿಯಾಗಿ ಕೀರ್ತಿಶೇಷರಾದ ಮಾ|| ದೇವರಾಜಮ್ಮಣ್ಣಿಯವರು ನಮ್ಮೂರನ್ನು ಸರ್ವಮಾನ್ಯವಾಗಿ ಒಂದಾನೊಂದುಕಾಲದಲ್ಲಿ ದಾನಮಾಡಿದರು. ಆಗಿನ ಅವರ ಧರ್ಮಬುದ್ಧಿಯು ಎಷ್ಟು ಉಜ್ವಲವಾಗಿತ್ತೆಂಬುದು ಮುಂದಿನ ಶಾಸನದಿಂದ ವ್ಯಕ್ತವಾಗುವುದು.

| |
|---|
| ಶ್ರೀ ಚಾಮುಂಡೀಸಹಾಯ<br>ಚಾಮರಾಜ ಒಡೆಯರವರ ಧರ್ಮಪತ್ನಿಯವರಾದ ದೇವರಾಜಮ್ಮಣ್ಣಿಯವರು |

ಈ ಮೊಹರು
ದೇವನಾಗರಾಕ್ಷರದಲ್ಲಿದೆ.

ಶ್ರೀಕಂಠಾಚ್ಯುತಪದ್ಮಜಾದಿದಿವಿಷದ್ವಕ್ತ್ರೋದ್ಧತೇಜಚ್ಛಟಾ |
ಸಂಭೂತಾಮತಿಭೀಷಣಪ್ರಹರಣಪ್ರೋದ್ಭಾಸಿಬಾಹಾಷ್ಟಕಾಂ ||
ಗರ್ಜತ್ಸೈರಿಭದೈತ್ಯಪಾತಿತಮಹಾಶೂಲಾಂ ತ್ರಿಲೋಕೀಭಯ |
ಪ್ರೋನ್ಮಾಥವ್ರತದೀಕ್ಷಿತಾಂ ಭಗವತೀಂ ಚಾಮುಂಡಿಕಾಂ ಭಾವಯೇ ||೧||

ನಿದಾನಂ ಸಿದ್ಧೀನಾಂ ನಿಖಿಲಜಗತಾಂ ಮೂಲಮನಘಂ |
ಪ್ರಮಾಣಂ ಲೋಕಾನಾಂ ಪ್ರಣಯಪದಮಪ್ರಾಕೃತಗಿರಾಂ ||
ಪರಂವಸ್ತುಶ್ರೀಮತ್ಪರಮಕರುಣಾಸಾರಭರಿತಂ |
ಪ್ರಮೋದಾನಸ್ಮಾಕಂ ದಿಶತು ಭವತಾಮಪ್ಯವಿಕಲಮ್ ||೨||

ಹರೇರ್ಲೀಲಾವರಾಹಸ್ಯ ದಂಷ್ಟ್ರಾದಂಡಸ್ಸಪಾತುನಃ |
ಹೇಮಾದ್ರಿಕಲಶಯತ್ರ ಧಾತ್ರೀಛತ್ರಶ್ರಿಯಂದಧೌ ||೩||

ನಮಸ್ತೇಸ್ತುವರಾಹಾಯ ಲೀಲಯೋದ್ಧರತೇ ಮಹೀಂ |
ಖುರಮಧ್ಯಗತೋಯಸ್ಯ ಮೇರುಃಕಣಕಣಾಯತೆ ||೪||

ಪಾತುತ್ರೀಣಿಜಗಂತಿಸಂತತಮಕೂಪಾರಾದ್ಧರಾಮುದ್ಧರ-
ನ್ಕ್ರೀಡಾಕ್ರೋಡಕಳೇಬರಸ್ಸಭಗವಾನ್ಯಸ್ಯೈಕದಂಷ್ಟ್ರಾಂಕುರೆ |
ಕೂರ್ಮಃಕಂದತಿನಾಳತಿ ದ್ವಿರಸನಃ ಪತ್ರಂತಿ ದಿಗ್ದಂತಿನೊ |
ಮೇರುಃ ಕೋಶತಿ ಮೇದಿನೀಜಲಜತಿವ್ಯೋಮೋಪಿರೋಲಂಬತಿ ||೫||

(ನಮ್ಮ ಗ್ರಂಥಕ್ಕೂ ಇದೇ ಮಂಗಳಶ್ಲೋಕವಾಗಿರಲೆಂದು ಸಂಪೂರ್ಣವಾಗಿ ಬರೆದಿರುವೆನು)

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನಶಕ ವರ್ಷಂಗಳು ೧೭೪೮ ನೇ ಸಂದವರ್ತಮಾನ ವ್ಯಯನಾಮ ಸಂವತ್ಸರದ ಆಷಾಢ ಶು|| ೧೦ ಶುಕ್ರವಾರದಲ್ಲು ಆತ್ರೇಯಸಗೋತ್ರ ಆಶ್ವಲಾಯನಸೂತ್ರ ಋುಕ್ಶಾಖಾನುವರ್ತಿಗಳಾದ ಕೃಷ್ಣರಾಜ ಒಡೆಯರವರ ಪೌತ್ರರಾದ ಇಮ್ಮಡಿ ಕೃಷ್ಣರಾಜ ಒಡೆಯರವರ ಪುತ್ರರಾದ ಚಾಮರಾಜ ಒಡೆಯರವರ ಧರ್ಮಪತ್ನಿ ದೇವರಾಜಮ್ಮಣ್ಣಿಯವರು........ಇಂಥಾ ವರಿಗೆ ಬರೆಸಿಕೊಟ್ಟ ಸೋಪಸ್ಕರೋಪಕರಣಗೃಹಸಹಿತವಾದ ಭೂದಾನಸಾಧನ ವೆಂತೆಂದರೆ,—ದಕ್ಷಿಣಾಯನ ಪುಣ್ಯಕಾಲವಾದ ಈ ದಿವಸದಲ್ಲಿ ನಾವು ತುಲಾ ಭಾರ (ತಮ್ಮ ತೂಕ ಚಿನ್ನದದಾನ) ದಾನವಂ ಮಾಡುವಲ್ಲಿ ಚಿರಂಜೀವಿ ಸಹಸ್ರಾ ಯುಷ್ಯರಾದ ನಮ್ಮ ಅಯ್ಯಾಜೀಯವರ ಪ್ರೇರಣೆಯಿಂದ ಭೂದಾನವಂ ಮಾಡಿ

ಸಿದ್ಧಕ್ಕೆ ವ್ಯೂಹಪಂಚಕಕ್ಕೆ ಗಣಸಂಖ್ಯಾವೃತ್ತಿ ದೇವರವೃತ್ತಿ ಒಂದು ಸಹ ವೃತ್ತಿ ಅರವತ್ತಕ್ಕೆ ಈ ವೃತ್ತಿವಂತರಿಗೆ ನರಶೀಪುರ ತಾಲ್ಲುಕು ಹೇಮಾವತೀ ನದೀತೀರದಲ್ಲಿ ಹೇಮಗಿರಿಗೆ ಸಮೀಪವಾದ ಬಂಡಿಹೊಳೇಗ್ರಾಮದ ಬಳಿ ಮನೆಗಳು ಕಟ್ಟಿಸಿ ದೇವಾಂಬಾ ಅಗ್ರಹಾರವೆಂಬ ಹೆಸರಿಟ್ಟು ಈ ವೃತ್ತಿಗಳಿಗೆ ಸಲ್ಲುವ ನರಶೀಪುರ ತಾಲ್ಲುಕು ಬಂಡಿಹೊಳೆ ಹೋಬಳಿ ಪೈಕಿ ಕಸಬಾ ಬಂಡಿಹೊಳೇಗ್ರಾಮ ೧ ತೆರಣೆನಹಳ್ಳಿ ೧—ಮುಡವನಕೋಡೀ ಹೋಬಳೀ ಪೈಕಿ ಕಸಬಾ ಮುಡವನಕೋಡೀ ೧ ಗ್ರಾಮ ಯಾಚಮಾನಹಳ್ಳಿ ೧ ಯಾಚೈನಹಳ್ಳಿ ೧ ತೆಡಗರಹಳ್ಳಿ ೧ ಹರಿಹರಪುರದ ಹೋಬಳೀಪೈಕಿ ಮೆಳಹಳ್ಳಿ ೧ ಕುರಣೇನಹಳ್ಳಿ ೧—ಅಕ್ಕಿಹೆಬ್ಬಾಳು ಹೋಬಳೀಪೈಕಿ ಆಲಂಬಾಡಿ ೧ ಗ್ರಾಮ ಬಸವನಹಳ್ಳಿ ೧ ಮಾಬಳ್ಳಿ ೧ ದಡದಹಳ್ಳಿ ೧ ಮಾಚವಳಲು ೧ ಗ್ರಾಮ ಉಭಯಂ ಹದಿಮೂರು ಗ್ರಾಮ ಕೆರೆ ಕಟ್ಟೆ ಕಾಲ್ವೆಗಳ ಸಹ ಸರ್ವಮಾನ್ಯವಾಗಿ ನಡೆಸುವಂತೆ ಆ ತಾಲ್ಲುಕು **ಅಮಿಲಗೆ** ಚಿರಂಜೀವಿ ಸಹಸ್ರಾಯುಷ್ಯರಾದ ಅಯ್ಯಾಜಿಯವರು ಸನ್ನದು ಬರೆದುಕೊಟ್ಟು ಇರುವುದರಿಂದ ಆ ಸನ್ನದುಮೇರೆ ಅರವತ್ತು ವೃತ್ತೀಪೈಕಿ ಒಂದು ವೃತ್ತಿಯನ್ನು ಸೋಪಸ್ಕರೋಪಕರಣಸಹಿತವಾದ ಮನೆ ಸಹ ನಿಮ್ಮ ದಂಪತಿಗಳ ಅಲಂಕರಿಸಿ ಶಾಶ್ವತಪುಣ್ಯಲೋಕವಾಸಸಿದ್ಧ್ಯರ್ಥವಾಗಿ ಸಹಿರಣ್ಯೋದಕ ದಾನಧಾರಾಪೂರ್ವಕವಾಗಿ..............................ಇಂಥಾವರಿಗೆ

**ದೇವರಾಜಮ್ಮಣ್ಣಿಯವರು ಧಾರೆಯನ್ನು ಎರೆದುಕೊಟ್ಟೆವಾದಕಾರಣ**

ಈ ವೃತ್ತಿಗೆ ಸಲ್ಲುವ ಗದ್ದೆಬೆದ್ದಲುತೋಟತುಡಿಕೆ ಕಾಡಾರಂಬ ನೀರಾರಂಬ ಮಗ್ಗ ಪಣೆ ಹಣ ಕೆಂಪುನೂಲು ಉಪ್ಪಿನಮೋಳೆ ಈಚಲಪೈರು ಪುರವರ್ಗ ಏರುಕಾಣಿಕೆ ನಾಮಕಾಣಿಕೆ ಗುರುಕಾಣಿಕೆ ಕಾಣಿಕೆ ಬೀಡಿಕೆ ಕಬ್ಬಿಣದಪೊಮ್ಮು ಆಲೇಪೊಮ್ಮು ಹತ್ತೀಪೊಮ್ಮು ಮಾರ್ಗಕರಪಡಿ ಸುಂಕ ಪೊಮ್ಮು ಜಾತೀಕೂಟ ಸಮಯಾಚಾರ ಹುಲ್ಲುಹಣ ಜರಾದಾಯ ಹೊರಾದಾಯ ಶೀಗೇಮುಡಿ ಪತಂಗ ಪೊಪ್ಪಳೀ ಗಿಡಗಾವಲು ಬ್ರಾಹ್ಮಣನಿವೇಶನ ಶೂದ್ರನಿವೇಶನ ಸೊಪ್ಪಿನತೋಟ ತಿಪ್ಪೇಹಳ್ಳ **ಶ್ರೀಗಂಧ ಹೊರತಾದ** ಮರವಳಿ ಫಲವೃಕ್ಷ ಮದ್ದಿಕ ಮುಂತಾದ ಈ ಒಂದು ವೃತ್ತಿಗೆ ಸಲ್ಲುವ ಆ ಸಕಲಸಾಮಾನ್ಯವನ್ನು ಧ್ರುವ ಎಂಡಿಗೇಮೇರೆ ಠೂ. (ಯು)

ಥಿಸಿಕೊಂಡು ಈ ವ್ಯಯನಾಮಸಂವತ್ಸರದಾರಭ್ಯ ನಿರುಪಾಧಿಕ ಸರ್ವಮಾನ್ಯವಾಗಿ ನೀವು ನಿಮ್ಮ ಪುತ್ರಪೌತ್ರಪಾರಂಪರ್ಯವಾಗಿ ಆಚಂದ್ರಾರ್ಕಸ್ಥಾಯಿಗಳಾಗಿ ಅನುಭವಿಸುತ್ತಾ ಚಿರಂಜೀವಿ ಸಹಸ್ರಾಯುಷ್ಯರಾದ **ಅಯ್ಯಾಜಿಯವರ ಶ್ರೇಯಃಪ್ರಾರ್ಥನೆ** ಮಾಡುತ್ತ ಸುಖದಿಂದ ಇರುವುದು. ಈ ವೃತ್ತಿಗೆ ಸೇರಿದ ಭೂಮಿಯೊಳಗಣ ನಿಧಿನಿಕ್ಷೇಪ ಜಲತರುಪಾಷಾಣ ಅಕ್ಷಣಾಗಾಮಿ ಸಿದ್ಧಸಾಧ್ಯಗಳೆಂಬ ಅಷ್ಟಭೋಗತೇಜಸ್ವಾಮ್ಯಗಳು ನಿಮಗೆ ಸಲ್ಲುವುದು. ಇಲ್ಲಿಂದ ಮುಂದೆ ಈ ವೃತ್ತಿಯು ನೀವು ಮಾಡುವ ಆಧಿ ಕ್ರಯ ದಾನ ಪರಿವರ್ತನೆಗಳೆಂಬ ವ್ಯವಹಾರಚತುಷ್ಟಯಗಳಿಗೂ ಯೋಗ್ಯವಾಗಿ ಸಲ್ಲುವುದೆಂದು........ದೇವರಾಜಮ್ಮಣ್ಣಿಯವರು........ಇಂಥಾವರಿಗೆ ಬರೆಸಿಕೊಟ್ಟ ಸೋಪಸ್ಕರೋಪಕರಣಗೃಹಸಹಿತವಾದ ಭೂದಾನ ಸಾಧನ--ಸಹಿ.

ಆದಿತ್ಯಚಂದ್ರಾವನಿಲೋನಲಶ್ಚ ದ್ಯೌರ್ಭೂಮಿರಾಪೋಹೃದಯಂಯಮಶ್ಚ |
ಅಹಶ್ಚರಾತ್ರಿಶ್ಚ ಉಭೇಚಸಂಧ್ಯೇ ಧರ್ಮಶ್ಚ ಜಾನಾತಿ ನರಸ್ಯವೃತ್ತಂ ||ಇತ್ಯಾದಿ||

ಶ|| ತಾರೀಕು ೧೪ ನೇ ಮಾಹೆ ಜುಲಯಿ ಸನ್ ೧೮೨೬ ನೇ ಇಸವಿಯಲ್ಲು ಶ್ರೀಕಂಠ ||

ಈ ಶಾಸನದಂತೆ ಸಮ್ಮೊರು ಈಗಲೂ ಸರ್ವಮಾನ್ಯವಾಗಿ ಉಳಿದಿರುವುದು. ಎಷ್ಟೋ ದಿವಸಗಳು ಕಳೆದಮೇಲೆ ವೃತ್ತಿನಂತರು ಕಂದಾಯದ ಹಕ್ಕನ್ನು ಇಟ್ಟುಕೊಂಡು ಭೂಮಿಯ ಸ್ವಾಮ್ಯವನ್ನು ಸರ್ಕಾರದ ಕಡೆಗೊಪ್ಪಿಸಿದರು. ಅದಕ್ಕೆ ಮೊದಲು ಬಟಮಾನ್ಯವೆಂದು ಬೆಳೆದದ್ದರಲ್ಲಿ ಅರ್ಧ ದಿನಸಿಯು ವೃತ್ತಿವಂತರಿಗೆ ಬರುತ್ತಿತ್ತು. ಬರುಬರುತ್ತಾ ಒಬ್ಬರು ಮೈಸೂರು ಇನ್ನೊಬ್ಬರು ಬೆಂಗಳೂರು ಹೀಗೆ ವಾಸಸ್ಥಾನ ಹಿಡಿದದ್ದರಿಂದ ದಿನಸಿಯು ಸಲೀಸಾಗಿ ಮುಟ್ಟುವುದು ಅಸಂಭವವಾಗಿ ಕಡೆಗೆ ಕಂದಾಯದ ಯಾಜಮಾನ್ಯವನ್ನೇ ಬಿಗಿಯಾಗಿ ಹಿಡಿದರು. ಶಾಸನದಂತೆ ಸಮ್ಮೊರಿನ ಹತ್ತಿರವೇ ದೇವಾಂಬಾ ಅಗ್ರಹಾರವನ್ನು ಕಟ್ಟಿಸಿ ಅರವತ್ತು ಜನ ವೃತ್ತಿವಂತರೂ ಇಲ್ಲೇ ಇದ್ದಿದ್ದರೆ ಸಮ್ಮೊರು ಎಷ್ಟು ದೊಡ್ಡದಾಗುತ್ತಿತ್ತೊ? ಆದರಾ ಅಗ್ರಹಾರವು ಮೈಸೂರಿನಲ್ಲಿ ಕಟ್ಟಲ್ಪಟ್ಟು ಇನ್ನಾರಿಗೋ ದಕ್ಕಿಹೋಯಿತು.

ಈ ಪ್ರದೇಶವೆಲ್ಲ ಮೊದಲಿನಕಾಲದಲ್ಲಿ ಅರಣ್ಯಮಯವಾಗಿದ್ದು ಕ್ರಮೇಣ ಕುರುಬರ ವಾಸಸ್ಥಳವಾಗಿ ಕಾಲಾನುಕಾಲಕ್ಕೆ ರೈತಪ್ರಜೆಗಳ ವಾಸಸ್ಥಾನವಾಗಿರಬಹುದೆಂದು ಇಲ್ಲಿನ ಕುರುಹುಗಳಿಂದ ವ್ಯಕ್ತವಾಗುತ್ತದೆ. ಸುತ್ತುಮುತ್ತಲೂ

ಬೇಚರಾಕಾದ (ಪಾಳು) ಗ್ರಾಮದವರು ನಮ್ಮೂರಿನಲ್ಲೇ ಒಕ್ಕಲಾಗಿ ನಿಲ್ಲಬೇಕಾದರೆ ನಮ್ಮೂರು ಬಹಳ ಹಿಂದಿನಿಂದಲೂ ಇತ್ತೆಂದು ಧಾರಾಳವಾಗಿ ಹೇಳಬಹುದು. ಶ್ರೀಕಂಠೇಶ್ವರ ದೇವಸ್ಥಾನವನ್ನು ದಾಟಿ ಮುಂದೆ ಬಂದರೆ ಆಂಜನೇಯ ದೇವರ ಗುಡಿಯೂ ಇನ್ನೂ ಮುಂದೆ ಊರೊಳಗೆ ಬಂದರೆ ಸೋಮೇಶ್ವರ ದೇವಸ್ಥಾನವೂ ಸಿಕ್ಕುವುದು. ಇದು ಚೋಳರಾಯನು ಕಟ್ಟಿದ್ದೆಂದು ಹೇಳುವರು. ಈ ದೇವಸ್ಥಾನದ ಮುಂದೆ ಒಂದು ಶಿಲಾಶಾಸನ, ಒಂದು ಕಲ್ಲುಗಾಣ, ಒಂದು ಕಲ್ಲುಕಂಭ ಇಷ್ಟೂ ಇವೆ. ಶಾಸನದಲ್ಲಿ ನಾಲ್ಕು ಅಂತಸ್ತುಗಳಿದ್ದು ಬುಡದಲ್ಲಿ ಅಕ್ಷರಗಳ ಸಾಲೂ, ಎರಡನೇ ಅಂತಸ್ತಿನಲ್ಲಿ ಯುದ್ಧದ ಚಿತ್ರವೂ, ಮೂರನೇ ಅಂತಸ್ತಿನಲ್ಲಿ ವಿಜಯಿರಾಜನು ರಥದಲ್ಲಿ ಕುಳಿತು ಪ್ರಯಾಣ ಮಾಡುವುದೂ, ನಾಲ್ಕನೇ ಅಂತಸ್ತಿನಲ್ಲಿ ಆ ರಾಜನು ಈಶ್ವರನನ್ನು ಪ್ರತಿಷ್ಠಿಸಿ ಪೂಜಿಸುವ ಆಕಾರವೂ ಕೆತ್ತಲ್ಪಟ್ಟಿರುವುದು. ಅಕ್ಷರಗಳೆಲ್ಲಾ ತೇದುಹೋಗಿದೆ. ನಮ್ಮೂರಿನ ಶ್ಯಾನುಭೋಗರು ಅದರ ವಿಚಾರವಾಗಿ ಈರೀತಿ ಹೇಳಿದರು. (ಸಾರಾಂಶ) ಕಿಕ್ಕೇರಿ ಗೌಡ ಮತ್ತು ಇವನ ತಮ್ಮ ಇಬ್ಬರೂ ಪಾಳೇಗಾರರು. ಗ್ರಾಮಗಳನ್ನು ಹಂಚಿಕೊಳ್ಳುವಾಗ ದೇವರಿಗೆ ಮೀಸಲಾಗಿ ಜಮೀನು ತೆಗೆದಿಡಲು ಚರ್ಚೆಯಾಯಿತು. ಅಣ್ಣನು ಪಂಚಾಯಿತರ ಮಾತಿಗೆ ಒಪ್ಪಿದನು. ತಮ್ಮನು ಒಪ್ಪಲಿಲ್ಲ. ಸರಿ ಇಬ್ಬರಿಗೂ ಯುದ್ಧಕ್ಕಾರಂಭವಾಗಿ ಅಣ್ಣನು ಮಡಿದನು. ಈ ಸಮಾಚಾರವನ್ನು ತಿಳಿದ ಮಡಿದ ಗೌಡನ ಹೆಂಡತಿಯು ತಾನೇ ರಣರಂಗಕ್ಕೆ ಬಂದು ಮೈದುನನನ್ನು ಕತ್ತರಿಸಿ ಕೆಡಹಿ ಗಂಡನ ವಾಗ್ದಾನದಂತೆ ಸೋಮೇಶ್ವರದೇವರಿಗೆ ದತ್ತಿಬಿಟ್ಟಳು. ಮುಂದಿನ ಶಾಸನದಲ್ಲಿ ಉಳಿದ ವಿಚಾರವಿದೆ ಎಂದು. ಮುಂದಿನ ಶಾಸನವು ಎಲ್ಲಿದೆಯೋ ಗೊತ್ತಿಲ್ಲ. ಊರಿಗೆ ದಕ್ಷಿಣಭಾಗದಲ್ಲಿ ಸ್ವಲ್ಪ ದೂರವಾಗಿ ಏಳೂರಮ್ಮನ ತೋಪು ಮತ್ತು ಗುಡಿಗಳಿವೆ. ಪೂರ್ವಕಾಲದಲ್ಲಿ ಇಲ್ಲಿಗೆ ಸುತ್ತುಮುತ್ತಲಿನ ಏಳೂರು ಶಿಡಿ ತೇರುಗಳು ಬಂದು ದೊಡ್ಡಜಾತ್ರೆಯಾಗಿ ಕುಸ್ತಿ ದೊಂಬರಾಟ ಎಲ್ಲಾ ಆಗುತ್ತಿದ್ದವಂತೆ, ಈಗ ಏನೂ ಇಲ್ಲ. ಗುಡಿಯಮುಂದೆ ಏಳು ಕಲ್ಲುಗಳಿವೆ. ಒಳಗೆ ಏಳು ದೇವರುಗಳಿವೆ. ನಮ್ಮೂರಿನಲ್ಲಿ ಐದಾರು ಮನೆಗಳು ಬ್ರಾಹ್ಮಣರದು, ಉಳಿದದ್ದೆಲ್ಲಾ ಒಕ್ಕಲುಮಕ್ಕಳದು. ಬಡಗಿಗಳು, ಅಕ್ಕಸಾಲಿಗರು, ವಾದ್ಯದವರು, ಅಗಸರು, ಕುಂಬಾರರ ಒಂದೆರಡು ಮನೆಗಳಿದ್ದುವು. ಊರಹೊರಗೆ ದಕ್ಷಿಣದಿಕ್ಕಿನಲ್ಲಿ ಹದಿನಾರು ಗುಡಿಸಲುಗಳಿದ್ದುವಲ್ಲ

ಅವೆಲ್ಲಾ ಹೊಲೆಯರದು. ಇವರು ತಮ್ಮ ಗುಡಿಸಲುಗಳ ಮಧ್ಯೆ ಒಂದು ಹೆಂಚಿನ ಮನೆಯನ್ನು ಕಟ್ಟಿ ಅದರಲ್ಲಿ ಮಾಯಮ್ಮ ದೇವರನ್ನಿಟ್ಟು ಪೂಜಿಸುತ್ತಿದ್ದರು. ಇನ್ನೂ ದಕ್ಷಿಣಕ್ಕೆ ಹೊಸಪಟ್ಣದ ಕೋಟೆಯಿದೆ. ಅದರ ಇರುವಿಕೆಯೆಲ್ಲಾ ಶ್ರೀರಂಗಪಟ್ಣದಂತೆಯೇ. ಈಶಾನ್ಯದಿಕ್ಕಿನಲ್ಲಿರುವ ಹೇಮಗಿರಿ ಬೆಟ್ಟದಮೇಲೆ ದೇವರ ದೇವಸ್ಥಾನವು ಭೂಲೋಕದ ನಕ್ಷತ್ರದಂತೆ ಕಂಗೊಳಿಸುತ್ತಿತ್ತು. ಇದು ಪುಣ್ಯಕ್ಷೇತ್ರವಾದ್ದರಿಂದ ಯಾತ್ರಾರ್ಥಿಗಳು ಆಗಿಂದಾಗ್ಯೆ ಬರುತ್ತಲೇ ಇದ್ದರು. ಅಧಿಕಾರಿಗಳು ಯಾತ್ರಾರ್ಥಿಗಳು ವೃತ್ತಿವಂತರು ಇವರೆಲ್ಲಾ ನಮ್ಮೂರಿಗೆ ಪದೇ ಪದೇ ಬರುತ್ತಿದ್ದುದರಿಂದ ನಮ್ಮೂರಿನ ಜನಗಳು ಮಾತುರೀತಿಗಳಲ್ಲಿ ಸುತ್ತಲ ಹಳ್ಳಿಯವರಿಗಿಂತ ಮೇಲಾಗಿದ್ದರು. ಇತ್ತೀಚೆಗೆ ಹೊಸಪಟ್ಣದ ಹತ್ತಿರ ಒಂದು ಸೇತುವೆಯನ್ನು ಕಟ್ಟುತ್ತಿದ್ದರು. ಅದರ ಕೆಲಸವಿನ್ನೂ ಮುಗಿದಿರಲಿಲ್ಲ. 24-12-31. ಅದಕ್ಕಾಗಿ ಕೆಲವು ಜನ ಮದ್ರಾಸಿ ಕಲ್ಲುಕೆಲಸದವರು ಊರೊಳಗೆ ಸೇರಿಕೊಂಡಿದ್ದರು. ಯಾವಾಗಲೂ ಗಡ್ರಬಡ್ರ ಎಂದು ಗಲಾಟೆಯಾಗಿಯೇ ಇದ್ದಿತು.



## ಆರೋಗ್ಯ



ಊರಿನ ಹವಾ ಗುಣವು ಆರೋಗ್ಯವಾಗಿದ್ದಿತು. ವ್ಯವಸಾಯವೇ ಮುಖ್ಯವಾಗಿದ್ದುದರಿಂದ ತಿಪ್ಪೇಗುಂಡಿಗಳು ಊರಿಗೆ ಸಮೀಪವಾಗಿದ್ದವು. ಹಳೇ ಸಂಪ್ರದಾಯದ ಬೀದಿಗಳೂ ಕೆಲವಿದ್ದವು. ಬೆಳಕಿಗೆ ಅನುಕೂಲ ಕಮ್ಮಿ. ದನಕರುಗಳನ್ನು ಮನೆಯೊಳಗೆ ಕಟ್ಟುತ್ತಿದ್ದರು. ಇತ್ತೀಚೆಗೆ ಗ್ರಾಮಪಂಚಾಯ್ತಿ ಏರ್ಪಾಡಾಗಿ ಮೇಲಿನ ಕಷ್ಟಗಳೆಲ್ಲ ನಿವಾರಣೆಯಾಗುತ್ತಲಿದೆ. ಬಾಲ್ಯದಲ್ಲಿ ನೋಡಿದ ಬಂಡಿಹೊಳೆಯು ಈಗೀಗ—ಗುಣಮುಖನಾದ ರೋಗಿಯು ಹಾಸಿಗೆಯಿಂದೆದ್ದು ತಿರಗಾಡುವಂತೆ ಕಾಣುತ್ತಿದ್ದಿತು. ಊರೊಳಗೆ ಕಾಯಿಲೆ ಹರಡಿದಾಗ ಆರು ಮೈಲಿ ಆಚೆಗಿರುವ ವೈದ್ಯರು ಬಂದು ಔಷಧಿಗಳನ್ನು ಕೊಡುತ್ತಿದ್ದರು. ರೈತರು ವ್ಯವಸಾಯಕ್ಕಾಗಿ ಊರಿಗೆ ದೂರವಾದ ಬೈಲುಗಳಲ್ಲೇ ಹೆಚ್ಚಾಗಿ ಕೆಲಸ ಮಾಡುತ್ತಿದ್ದುದರಿಂದ ಅನಾರೋಗ್ಯಕ್ಕೆ ಅವಕಾಶವು ಕಮ್ಮಿಯಾಗಿತ್ತು.



## ಸಂಪತ್ತು



ನಮ್ಮೂರಿನ ವಾರ್ಷಿಕ ಉತ್ಪನ್ನವು ನಾಲ್ಕು ತಿಂಗಳುಗಳಿಗೆ ಸಾಕಾಗುವಂತಿತ್ತು. ಮೂರು ತಿಂಗಳು ಕೂಲಿಯಿಂದ ಜೀವನ. ಇನ್ನುಳಿದ ತಿಂಗಳುಗಳಲ್ಲಿ ಇದ್ದ ಗದ್ದೆ ಹೊಲ ಮಾರಿ ಜೀವನ. ಬೆಳೆಯು ಕಮ್ಮಿಯಾದವರ್ಷ ನಮ್ಮೂರಿನ ಪಾಡು ದೇವರಿಗೇ ಪ್ರೀತಿ. ಕೆಲವು ಜನ ಇನಾಂದಾರರು ಈ ಬಡತನದ ಬಂಡಾಟವನ್ನು ನೋಡಲಾರದೆ ತಮ್ಮ ವೃತ್ತಿಗಳನ್ನು ಸರ್ಕಾರಕ್ಕೆ ಒಪ್ಪಿಸಿ, ಅದರ ವರಮಾನವನ್ನು ದೇವಸ್ಥಾನಗಳಿಗೆ ಕೊಡುವಂತೆ ಮಾಡಿದ್ದರು. ಇದರಿಂದ ನಮ್ಮೂರು ಇಬ್ಬರಿಗೆ ಕಂದಾಯ ಕೊಡಬೇಕಾಗಿತ್ತು. ವಸೂಲಿಯು ಮುಗಿದದ್ದೇ ಕಾಣುತ್ತಿರಲಿಲ್ಲ, ಬಡತನವು ಹೆಚ್ಚಿದ್ದುದರಿಂದ ರೈತರು ಅಜ್ಜ ಮುತ್ತಜ್ಜರು ಹೂತಿಟ್ಟಿದ್ದ ರೂಪಾಯಿಗಳನ್ನು ಕೊಟ್ಟಿದ್ದರು. ಆದರೂ ಬಾಕಿ ಸಾವಿರಾರು ರೂಪಾಯಿಗಳಿದ್ದವು. ಹರಕು ಬಟ್ಟೆಯು ಸಾರ್ವತ್ರಿಕವಾಗಿತ್ತು. ತಲೆಗೆ ಎಣ್ಣೆ ಕಾಣದವರೂ, ಎರಡುಹೊತ್ತು ಊಟವಿಲ್ಲದೆ ಇರುವವರೂ ಅನೇಕರಿದ್ದರು. ಇನ್ನೇನೂ ಉಳಿದಿಲ್ಲವೆಂದು ತಿಳಿದಮೇಲೆ ಕಾಫೀತೋಟಕ್ಕೆ ಹೋಗಿ ಸೇರುವವಾಡಿಕೆ. ಒಟ್ಟಿನ ಮೇಲೆ ಬಡತನವು ಅಸಾಧ್ಯವಾಗಿ ಸಂತೋಷದಂದ ನಗುವುದೂ ಮಾಮೂಲು ಮೀರಲಾರದೆ ವಿನಾ (ಹಾ) ನಿಜವಾದ ಸನ್ನಿವೇಶದಿಂದ ಇರಲಿಲ್ಲ. ಕೊಟ್ಟಕಾಳುಗಳನ್ನು ಕಟ್ಟಿಕೊಳ್ಳಲು ತಮಗೆ ಬಟ್ಟೆಯಿಲ್ಲದುದರಿಂದ ಕಷ್ಟಪಡುವರನ್ನೂ ನಾಚಿಕೊಳ್ಳುವವರನ್ನೂ ನೋಡಿತು ಈ ಕಣ್ಣು, ಮರುಗಿತು ಈಮನವು.



## ನಾಗರಿಕತೆ



ಹಿಂದಣವರು ತಿಳಿದಿದ್ದ ಆತ್ಮೀಯತೃಪ್ತಿ, ಆಧ್ಯಾತ್ಮಿಕಶಾಂತಿಯೇ ಮುಖ್ಯಲಕ್ಷಣವಾದ ನಾಗರಿಕತೆಯು ಈಗ ಇರಲಿಲ್ಲ. ಮೊದಲಕಾಲದವರು ಒಬ್ಬೊಬ್ಬರಿದ್ದರಲ್ಲಾ ಅವರು ಮಂಡಿಯಿಂದ ಮೇಲೆ ದಟ್ಟಿ ಸುತ್ತಿದ್ದರು. ಆದರದು ಸ್ವಚ್ಛವಾಗಿತ್ತು. ಅವರ ಮೈಕಟ್ಟು ತೇರಿನ ಹೊರ್ಜಿ ಹಗ್ಗದಂತೆ ಗಟ್ಟಿಯಾಗಿಯೂ ವಿಪಕ್ವವಾಗಿಯೂ ಪುಷ್ಟವಾಗಿಯೂ ಇತ್ತು. ಮುಖದಲ್ಲಿ ಆರ್ಯ

ಜನಾಂಗಸೂಚಕವಾದ ಗಂಧ ವಿಭೂತಿ ನಾಮದ ಚಿಹ್ನಗಳು ಅವರ ಅಂತಸ್ತೃಪ್ತಿ ಯನ್ನು ತುಂಬಿಕೊಂಡ ಮುಖಕುಂಭಕ್ಕೊತ್ತಿದ ಮುದ್ರೆಯಂತೆ ಕಾಣುತ್ತಿದ್ದವು. ಒಟ್ಟಿನ ಮೇಲೆ ಸರಳಜೀವನ ದೇಹಪಟುತ್ವ ಶುಚಿತ್ವ ಸಾಮಾನ್ಯವಾಗಿ ಇಹಪರ ಗಳ ಜ್ಞಾನ ಇವೆಲ್ಲಾ ಹಳೇ ನಾಗರಿಕತೆಯ ಹಳ್ಳಿಗನ ಲಕ್ಷಣವಾಗಿದ್ದಿತು. ಇತ್ತೀಚೆಗೆ ಘನಗಾಬರಿಯ ನಾಗರಿಕತೆಯು ಬಂದಿದೆ. ಕೆಲವರು ತುರುಕರ ಸಂಪ್ರ ದಾಯದ ಚಡಾವುಗಳನ್ನುಪಯೋಗಿಸುತ್ತಿದ್ದರು. ಕೆಲವರು ಇಂಗ್ಲೀಷರಂತೆ ಕ್ರಾಪು ಮಾಡಿಸಿಕೊಂಡಿದ್ದರು ನಡೆ ನುಡಿ ತೊಡಿಗೆಗಳೆಲ್ಲಾ ಭಿನ್ನ ಭಿನ್ನ ಸಂಪ್ರ ದಾಯಕ್ಕೆ ಸೇರುತ್ತಿದ್ದವು. ಬಂಡೆಯಮೇಲೆ ಬೆಳೆ ಬೆಳೆದರೂ ಬಡತನವು ಇಂಗದೆ ಹೋಯಿತು. ರಘು, ನಳ, ನಹುಷರ ಕಾಲದಿಂದ ನಮ್ಮ ಭರತಖಂಡದ ಹಳ್ಳಿಗರ ಮುಖದಮೇಲೆ ಕಾಣುತ್ತಿದ್ದ ತೃಪ್ತಿಯ ವರ್ಚಸ್ಸೇ ಹಾಳಾಗಿ ಹೋಗಿ ಎಲ್ಲೆ ಲ್ಲಿಯೂ ಕಲಿಯ ವಿಕಟವರ್ತನೆಯ ವರ್ಚಸ್ಸು ಹಬ್ಬಿದ್ದಿತು. ಚಿಕ್ಕಮಕ್ಕಳು ಇಂಗ್ಲೀಷಿನವರಂತೆ ಷರಾಯಿ ಲಂಗಗಳನ್ನು ಹಾಕಿಕೊಳ್ಳುತ್ತಿದ್ದವು. ಜೋಡು ಕಂಡ ಕಾಲುಗಳು ನಮ್ಮೂರಿನಲ್ಲಿ ಎಲ್ಲೋ ನೂರಕ್ಕೊಂದು ಹಳಬರಿದ್ದರಲ್ಲಾ ಅವರು ಒಂದು ಛತ್ರಿ, ಒಂದು ದೊಣ್ಣೆ, ಕಾಲಿಗೆ ಜೋಡು, ನಡುವಿನಲ್ಲಿ ಒಂದು ಆಯುಧ, ಕಂಕಳಲ್ಲಿ ಒಂದು ಎಲಡಕೆಯ ಚೀಲ, ತಲೆಗೊಂದು ಮುಂಡಾಸು. ಇಷ್ಟಿಲ್ಲದೆ ದಾರಿಯಲ್ಲಿ ಹೆಜ್ಜೆಯಿಡುತ್ತಿರಲಿಲ್ಲ. ನಮ್ಮಕಾಲದಲ್ಲಿ ದೇಹ ಮನಸ್ಸು ಆತ್ಮ ಒಂದಕ್ಕೂ ಸಮಾಧಾನವಿಲ್ಲದ ನಾಗರಿಕತೆಯು ಹರಡಿತ್ತು. ಹಳೆಯದೆಲ್ಲ ಸರಿ ಎನ್ನುವುದಿಲ್ಲ. ಆದರೆ ಆತ್ಮತೃಪ್ತಿಯೂ ನಾಗರಿಕತೆಯ ಒಂದು ಭಾಗವಲ್ಲವೇ?

## ವಿದ್ಯಾಭ್ಯಾಸ

ಅರ್ಧಶತಮಾನಕ್ಕೆ ಹಿಂದೆ ಕೂಲಿಮಠಗಳಿದ್ದವು. ಆಗ ಜೈಮಿನಿಭಾರತ, ಅಮರ, ರಾಮಾಯಣ, ಅಡ್ಡ, ಹಾಗ, ಮುಪ್ಪಾಗದ ಲೆಕ್ಕಗಳು ಇವೆಲ್ಲಾ ಬಳಿಕೆ ಯಲ್ಲಿದ್ದವು. ಆಗಿನಕಾಲದ ಹಳಬರು ಅನೇಕವಾಗಿ ಬಾಯಲ್ಲಿ ಹೇಳುತ್ತಿದ್ದರು. ಇತ್ತೀಚೆಗೆ ನೂತನರೀತಿಯ ಪಾಠಶಾಲೆ (ಸ್ಕೂಲು) ಬಂದಿದೆ. ಸಮುದ್ರದ ಪರಿಳಿ ತದಂತೆ ಒಂದು ಸಲ ಅತ್ಯುನ್ನತಸ್ಥಿತಿಗೆ ಬರುತ್ತದೆ. ವ್ಯವಸಾಯಪ್ರಧಾನಗ್ರಾಮ ವಾದ್ದರಿಂದ ಕೆಲವರು ರುಜು ಹಾಕುವುದಕ್ಕೂ ಕೊಟ್ಟ ಕಂದಾಯದ ರಶೀತಿ

ನೋಡುವುದಕ್ಕೂ ಬಂದರೆ ಸಾಕೆನ್ನುತ್ತಿದ್ದರು. ವರ್ಗಾವರ್ಗಿಗಳ ಕ್ರಮವಿದ್ದುದರಿಂದ ಒಂದೊಂದು ಸಲ ಹುಡುಗರಿಗೆ ನಡುನೀರಿನಲ್ಲಿ ಕೈಬಿಟ್ಟಂತೆಯಾಗಿ ಬಂದಿದ್ದೂ ಮರೆತುಹೋಗುತ್ತಿತ್ತು. ಒಟ್ಟಿನಮೇಲೆ ಹತ್ತಿಪ್ಪತ್ತು ಜನರು ಓದು ಬರಹ ಬಲ್ಲವರಿದ್ದರು. ಓದುಗಾರಿಕೆಯು ಅಭಿವೃದ್ಧಿಯಾಗಲು ವರ್ತಮಾನಪತ್ರಿಕೆಗಳನ್ನು ತರಿಸುತ್ತಿದ್ದರು. ವಿದ್ಯಾಭ್ಯಾಸದ ಅಭಿವೃದ್ಧಿಗಾಗಿ ಮುಖಂಡರು ನಾನಾ ವಿಧವಾದ ಏರ್ಪಾಡು ಮಾಡುತ್ತಿದ್ದರು. ಮಾಸ್ಟರುಗಳಿಗೆ ಮನೆ ಕಟ್ಟಿಕೊಡಲೂ ತರುದೂದು ಮಾಡಿದ್ದರು, ಒಂದೊಂದು ಸಲ ಹುಡುಗರು ಚೌಪದಿಯಿಂದ ಜಡೆ ಮುಟಿ, ಜಡೆಬಂಧ, ಜಡೆ ಬಿಡುವುಗಳನ್ನು ನಡೆಸುತ್ತಿದ್ದರು. ಅವರಿಗೆ ಕೊಬ್ಬರಿ ಬೆಲ್ಲ ಭತ್ತವನ್ನು ಕೊಟ್ಟು ಕಳುಹಿಸುತ್ತಿದ್ದರು. ನಮ್ಮೂರವರು ಹೋಗಿ ತಂದದ್ದು ಕಾಣಲಿಲ್ಲ. ಬೇರೆ ಊರುಗಳಿಗೆ ಹೋಗಿ ಓದಿದ್ದವರಿದ್ದರು. ಆದರವರೆಲ್ಲ ಸಂಬಳದ ಮೇಲೆ ಹೊರಗಿದ್ದರು. ಮುಖ್ಯವಾಗಿ ನಮ್ಮೂರಿನ ಹಣೆಯಲ್ಲಿ ವಿದ್ಯಾಭ್ಯಾಸದ ಬರಹವು ಮಸುಕಾಗಿ ಕಾಣುತ್ತಿತ್ತು. ಎಷ್ಟೋಸಲ ಮಕ್ಕಳ ಹಿಂಸೆಯನ್ನು ತಡೆಯಲಾರದೆ ಮನೆಯವರು ಮಠದಲ್ಲಾದರೂ ಕುಕ್ಕರಿಸಿಬಂದರೆ ಇದರ ಕಾಟ ತಪ್ಪುತ್ತದೆ ಎಂದು ಸ್ಕೂಲಲ್ಲಿ ಕೂರಿಸಿ ಬರುತ್ತಿದ್ದರು.

## ಕೈ ಗಾ ರಿ ಕೆ

ಎಲ್ಲೋ ಒಂದೊಂದು ಮನೆಯ ಅಟ್ಟದಮೇಲೆ ಓಬೀರಾಯನಕಾಲದ ರಾಟೆಗಳಿದ್ದವು. ಮುಂದಲಿಗೆ ಕಸಬು ಸ್ವತಂತ್ರವಾದ ಕೈಗಾರಿಕೆಯಾಗಿ ಬಹು ಜನರು ಮಾರುವುದಕ್ಕಲ್ಲದಿದ್ದರೆ ಮನೆಗಾದರೂ ನೇಯ್ದುಕೊಳ್ಳುತ್ತಿದ್ದರು. ಹೊಲಿಗೇಯಂತ್ರ ನೇಯುವ ಮಗ್ಗಗಳೂ ಇದ್ದುವು. ಬಡಗಿಗಳೂ ಕುಂಬಾರರೂ ಹಳೇ ಸಂಪ್ರದಾಯದವರಾದ್ದರಿಂದ ಅವರ ಕೈಗಾರಿಕೆಗಳೂ ಹಳೇತರಹದಲ್ಲೇ ಇದ್ದವು. ಹಳ್ಳಿಗಳಲ್ಲಿ ಕೈಗಾರಿಕೆಯು ಅಭಿವೃದ್ಧಿಯಾಗಲು ಅನುಕೂಲ ಕಮ್ಮಿ. ವ್ಯವಸಾಯವಾದರೆ ಅದೂ ಹಳೇವಿಧವಾದರೆ ಸುಖ.

# ಧರ್ಮ ಅಥವಾ ಸಂಪ್ರದಾಯ

ಬ್ರಾಹ್ಮಣರ ಮನೆ ನಾಲ್ಕೈದು ಮಾತ್ರವೆಂದು ಹಿಂದೆ ಹೇಳಿದೆಯಷ್ಟೆ. ಇವರು ಸ್ನಾನ, ಜಪ, ದೇವರಪೂಜೆ ಇವುಗಳ ಆಚರಣೆಯಲ್ಲೇ ವಿಶೇಷ ಆಸಕ್ತರಾಗಿದ್ದರು ಶ್ರುತಿಸ್ಮೃತಿಗಳ ಆಚಾರವಿಚಾರಗಳಲ್ಲಿ ಸಂದೇಹ ಬಂದರೆ ಮೈಸೂರಿಗೆ ಹೋಗಿ ಪಂಡಿತರಿಂದ ಸರಿಯಾದ ವಿಷಯವನ್ನು ತಿಳಿದುಕೊಂಡುಬರುತ್ತಿದ್ದರು. ಅಕಸ್ಮಾತ್ತು ಯಾರಾದರೂ ತಪ್ಪುಮಾಡಿದರೆ ಹಿರಿಯರಾದ ಇಬ್ಬರು ಬ್ರಾಹ್ಮಣರು ವಿಧಿಸಿದ ತೀರ್ಮಾನವನ್ನು ಒಪ್ಪಿಕೊಂಡು ತಪ್ಪಿನಿಂದ ಬಿಡುಗಡೆಯಾಗಬೇಕಾಗಿತ್ತು. ಮದುವೆ ಸಮಯದಲ್ಲಿ ಮತತ್ರಯ, ಸ್ಥಳಪರಸ್ಥಳ, ಕಾವೇರಿ ಸಂಧ್ಯಾ ಮಂಟಪ, ಮುಂತಾದವುಗಳಿಗೆ ತಾಂಬೂಲವೆತ್ತುತ್ತಿದ್ದರು. ಕಾವೇರಿ ಸಂಧ್ಯಾ ಮಂಟಪದ ತಾಂಬೂಲವನ್ನು ಯಾಕೆ ಎತ್ತಬೇಕೆಂಬ ಚರ್ಚೆ ಪ್ರತಿಮದುವೆಯಲ್ಲೂ ಇದ್ದೇ ಇತ್ತು. ಒಂದುಸಲ ಪುರೋಹಿತರಿಗೆ ತಾಂಬೂಲಕೊಡುವುದನ್ನು ಮರೆತರು. "ಓಹೊ ಬೃಹಸ್ಪತಿ ಪೀಠಕ್ಕೆ ಅವಮಾನವಾಗಿಹೋಯ್ತೆಂದು ಪುರೋಹಿತರು ಆಗಲೇ ಮೂಟೆ ಹೆಗಲಿಗೆ ಹಾಕಿದ್ದರು. ಅವರನ್ನು ಸಮಾಧಾನ ಮಾಡುವ ಹೊತ್ತಿಗೆ ಸಾಕಾಗಿಹೋಯ್ತು.

ಶೂದ್ರರೇ ನಮ್ಮೂರಿನ ಆಡಳಿತಗಾರರು ಅಧಿಕಸಂಖ್ಯಾಕರು. ಅವರಲ್ಲಿ ಗಂಡುಹುಡುಗನಿಗೆ ಮೂರುವರ್ಷವಾದಮೇಲೆ ಒಳ್ಳೆಯದಿನದಲ್ಲಿ ಜುಟ್ಟು ಬಿಡಿಸುತ್ತಿದ್ದರು ಅಲ್ಲಿಯವರೆಗೆ ಪಂಜಾಬಿ ಹುಡುಗರಂತೆಯೂ ಕಾಕಪಕ್ಷದಂತೆಯೂ ಗೊಂಚಲು ಗೊಂಚಲಾಗಿ ಕೂದಲುಬಿಡುತ್ತಿದ್ದರು. ಮದುವೆಯು ಗಂಡಸಿಗೆ ಇಪ್ಪತ್ತುವರ್ಷಕ್ಕೆ ಮೇಲ್ಪಟ್ಟು ಹೆಣ್ಣಿಗೆ ಹದಿನೈದುವರ್ಷಗಳು ಕಳೆದಮೇಲೆ ನಡೆಯುತ್ತಿತ್ತು. ಪ್ರೌಢಾವಿವಾಹವೇ ಹೆಚ್ಚು. ಕೆಲವರು ಮಾತ್ರ ಬಾಲ್ಯವಿವಾಹವನ್ನೂ ನೆರವೇರಿಸುತಿದ್ದರು. ಹೆಣ್ಣುಕೊಟ್ಟುತರುವ ಊರುಗಳು ಒಂದು ಹರಿದಾರಿಗೆ ಮೀರಿರುವುದೇ ಅಪರೂಪ. ಯಾಕೆಂದರೆ ಅವರ ಸಮಸ್ತ ಕೆಲಸವೂ ವ್ಯವಸಾಯಕ್ಕನುಕೂಲವಾಗಿರಬೇಕಾಗಿತ್ತು. ಮಗನಿಗೆ ಮದುವೆಮಾಡಬೇಕೆಂದು ಯೋಚಿಸಿದರೆ ತಮಗೆ ಹತ್ತಿರದ ನೆಂಟೂ ಗಂಟೂ ಉಳಿಯುವುದನ್ನೆಲ್ಲಾ ಲೆಖ್ಖಾಚಾರಮಾಡಿ ಆ ಮೇಲೆ ಜೋಯಿಸರಲ್ಲಿ ಹೆಸರುಬಲ ಕೇಳುವರು. ಜಾತಕದ ಹೊಂದಿಕೆಯಾದರೆ ಮೊದಲು ಗಂಡಿನವರು ಹೆಣ್ಣಿನವರ ಮನೆಗೆ "ಹಸರುವೀಳ್ಯ" ಎಂದು ಎಲೆ ಅಡಿಕೆ ತಿಂಡಿ ಮುಂತಾದುವನ್ನು ತೆಗೆದುಕೊಂಡು ಹೋಗಿ ಊಟವಾದ

ಮೇಲೆ ಮಾತುಕತೆಯಾಡುವರು. ಅಲ್ಲಿಗೆ ಹೆಣ್ಣನ್ನು ಹೊಗಳುವರು. ಗಂಡನ್ನು ಹೊಗಳುವರು. ಇತ್ಯಾದಿ ಕೆಲವು ಜನ ಪಂಚಾಯಿತರು ಸೇರಿ ಒಂದು ವಿಧವಾಗಿ ಸಾಕ್ಷಿಗಳ ಎದುರಿಗೇ ಮಾತು ನಿಶ್ಚಯವಾಗುವುದು. ಆಗ ಗಂಡಿನವರು ಹೆಣ್ಣಿಗಾಗಿ "ವುದಗಡ" (ಕನ್ಯಾಶುಲ್ಕ) ವನ್ನು ಪಂಚಾಯ್ತರ ಎದುರಿಗೇ ಕೊಡುವರು. ಹಣವಂತರೂ ಸ್ವಲ್ಪ ಉದಾರಮನಸ್ಸಿನವರೂ ಇದನ್ನು ತೆಗೆದುಕೊಳ್ಳುತ್ತಿರಲಿಲ್ಲ. ಅದಾದಮೇಲೆ ಪರಸ್ಪರ ಮನೆ ನೋಡುವ ಶಾಸ್ತ್ರವನ್ನು ನೆರವೇರಿಸುವರು. ಗುಡಸಲು ಎಂದು ತಿಳಿದಿದ್ದರೂ ಹೋಗಬೇಕಾಗಿತ್ತು. ಇಲ್ಲದಿದ್ದರೆ ಮನೆ ನೋಡದೆ ಹೆಣ್ಣುಕೊಟ್ಟ ಎಂದು ಹಂಗಿಸುತ್ತಿದ್ದರು. ಅನಂತರ ಗಂಡಿನವರು ಕಡಲೆ ಬೆಲ್ಲ ಕೊಬ್ಬರಿ ಸೀರೆ ಕುಪ್ಪಸ ಬುತ್ತಿ ಸಹಿತ ಹೆಣ್ಣಿನ ಮನೆಗೆ ಹೋಗಿ ಅವುಗಳನ್ನು ಕೊಟ್ಟು, ಊಟ ಉಪಚಾರಗಳನ್ನು ತೀರಿಸಿಕೊಂಡು ಬರುವರು. ಇದೆಲ್ಲಾ ಆದ ಮೇಲೆ ಲಗ್ನಪತ್ರಿಕೆ ಬರೆಸಿ ಲಗ್ನದ ದಿನವನ್ನು ನಿಷ್ಕರ್ಷೆ ಮಾಡುತ್ತಿದ್ದರು.

ಮೊದಲು ಮೊದಲು ಜೋಯಿಸರನ್ನು ಯಾರೂ ಕೇಳುತ್ತಲೇ ಇರಲಿಲ್ಲ. ಇತ್ತೀಚೆಗೆ ಎಲ್ಲೋ ಹೋಗಿ ಸ್ವಲ್ಪ ಜ್ಯೋತಿಷ್ಯ, ಯಕ್ಷಗಾನ ಆಟ, ಹರಿಕತೆ, ಅರ್ಜಿ, ಪತ್ರ, ಗುತ್ತಿಗೆಕಾಗದ ಬರೆಯುವುದು, ಪ್ರಶ್ನೆನೋಡುವುದು, ಮಂತ್ರಭಾಗ ಇವುಗಳನ್ನು ಎರಡುವರ್ಷಗಳೊಳಗಾಗಿ ಕಲಿತುಕೊಂಡು ಬಂದರು. ಈಗೀಗ ಗೌರವವು ಏರುತ್ತಾ ಹೋಗುತ್ತಿತ್ತು, ಗಂಡ ಹೆಂಡರು ಜಗಳವಾಡಿದರೂ ನಮ್ಮೂರ ಜೋಯಿಸರಲ್ಲಿ ಬಂದು ಪ್ರಶ್ನೆಕೇಳದೆ ಇರುವುದು ಅಪರೂಪ.

ಇದ್ದಕ್ಕಿದ್ದಹಾಗೆ ದನಗಳು ಉಚ್ಚೆಕೊಂಡರೆ ಮನೆಯ ಯಜಮಾನನು ಕುಟುಂಬದೊಡನೆ ಜೋಯಿಸರ ಮನೆಗೆ ಹೋಗಿ ಪ್ರಶ್ನೆ ಮಾಡುತ್ತಿದ್ದನು. ಜೋಯಿಸರು ಪ್ರಶ್ನಚಿಂತಾಮಣಿ ಗ್ರಂಥದ ಆಧಾರದ ಮೇಲೆ ಅಥವಾ ಕವಡೆಯ ಸಂಬಿಸಗಳ ಮೇಲೆ ದೀರ್ಘವಾಗಿ ಆಲೋಚಿಸಿ ಇದು ಈರನ ಕಾಟ ಎಂದು ಒಂದೊಂದು ಸಲ ಹೇಳಿಬಿಡುತ್ತಿದ್ದರು. ಆ ಮನೆಯಲ್ಲಿ ಹೆಣ್ಣಾಗಲಿ ಗಂಡಾಗಲಿ ವಯಸ್ಸಿಗೆ ಬಂದು ಮದುವೆಯಾಗದೆ ಸತ್ತಿದ್ದರೆ ಅವು ಬಂದು ದನಗಳಿಗೆ ಹಿಡಿದಿವೆ ಎಂದು ಅದಕ್ಕರ್ಥ. ಸರಿ ಯಜಮಾನತಿಯು ಓಹೋ ದಿಟ ದಿಟ, ನಮ್ಮ ಮುದ್ದುಗಾರ ಬೋರೇಗೌಡ ಅರಾಯ್ಸಲ್ಲಿ ಹೋದ. ಅವನ ಆಯುಸ್ಸೇ ಅಷ್ಟು. ಜೋಯಿಸರೆ ಈಗ ನನ್ನ ಎರಡನೇ ಮಗನ ಮದುವೆಯಾಗುವಾಗ ಈರನ ಮದುವೆ ಮಾಡುತ್ತೇನೆ ಎಂದು ಹೇಳಿ ಮನೆಗೆ ಬರುತ್ತಿದ್ದರು. ಅನೇಕ ದಿನಗಳಿಗೆ ಹಿಂದೆ ಹುಡು

ಗಿಯು ಸತ್ತಿದ್ದರೆ ಕಡಸನ್ನೂ, ಹುಡುಗನು ಸತ್ತಿದ್ದರೆ ಹೋರಿಯನ್ನೂ ವಿೂಸಲಾಗಿ ಹರಿಕೆ ಕಟ್ಟಿಬಿಡುತ್ತಿದ್ದಳು. ಮಗನ ಮದುವೆ ಇನ್ನೆರಡು ದಿನಗಳಿವೆ ಎನ್ನುವಾಗ ಈ ದಿನ ಸಾಯಂಕಾಲ ಹೆಣ್ಣುಕೊಟ್ಟು ತರಲು ಯೋಗ್ಯರಾದವರ ಮನೆಯಿಂದ ಹರಕೆಗೆ ಅನುಗುಣವಾಗಿ ಹೋರಿಯನ್ನಾಗಲಿ ಕಡಸನ್ನಾಗಲಿ ಮದುವೇಗಂಡಿನ ವಸ್ತ್ರಗಳನ್ನು ಹೋರಿಗೂ, ಹೆಣ್ಣಿನ ಸೀರೆ ಕುಪ್ಪಸಗಳನ್ನು ಹೆಣ್ಣುಕರುವಿಗೂ ಅಲಂಕಾರಮಾಡಿ ವಾದ್ಯಸಮೇತ ಊರಿಗೆ ಹೊರಗೆ ಹತ್ತಿರದಲ್ಲೇ ಇರುವ ಈರಗಲ್ಲುಗಳ ಸಮಿೂಪಕ್ಕೆ ಕರೆದುಕೊಂಡು ಹೋಗುವರು. ಅಲ್ಲಿ ಒಂದು ಈರಗಲ್ಲನ್ನು ನೆಟ್ಟು ಹೋರಿಗೂ ಕಡಸಿಗೂ ಮದುವೆ ಮಾಡಿಸಿ ತಿಂಡಿಯನ್ನು ಕೊಡುವವರಿಗೆ ಕೊಟ್ಟು ತಾವೂ ತಿಂದು ಮನೆಗೆ ಬರುವರು. ಕಡಸನ್ನಾಗಲಿ ಹೋರಿಯನ್ನಾಗಲಿ ಕೊಟ್ಟವರ ಮನೆಗೆ ಒಂದು ಹಣ, (ಈಗ ನಾಲ್ಕಾಣೆ) ತಾಂಬೂಲ, ಹಣೆಗೆ ಕಟ್ಟಿದ್ದ ಚಿನ್ನದ ಪಟ್ಟದ ತಗಡು ಇಷ್ಟನ್ನೂ ಮರ್ಯಾದಾರ್ಥವಾಗಿ ಕೊಡುವ ವಾಡಿಕೆ. ಈರನ ಹೆಸರಿನ ಮೇಲೆ ಮದುವೆಯಾದ ಕಡಸಾಗಲಿ, ಹೋರಿಯಾಗಲಿ ಅವರವರ ಮನೆಯಲ್ಲೇ ಮುಪ್ಪಾಗಬೇಕಲ್ಲದೆ, ಅವುಗಳುದ್ದ ಹಣ ಸುರಿದರೂ ಮಾರುತ್ತಿರಲಿಲ್ಲ. ಇದಾದಮೇಲೆ ಮೂರನೆ ದಿನ " ಹರಿಸೇವೆ " ನಡೆಯುವುದು. ದಾಸಯ್ಯನೂ ಅವನ ನಾಲ್ಕಾರು ಜನ ಅನುಚರರೂ ನಗಾರಿ ಭಾಂಕಿ ತುತ್ತೂರಿ ಶಂಕ ಜಾಗಟೆ ಧ್ವನಿಗಳಿಂದ ಹೊಳೆಯಿಂದ ತರುವ ಐರಣೆಯಮುಂದೆ (ಪಂಚಕಲಶಗಳು) ಹಾ ಹೂ ಎಂದು ಧ್ವನಿಮಾಡುತ್ತಾ ಬರುವರು. ಅಗಸರು ಶುದ್ಧವಾದ ಮಡೀಬಟ್ಟೆಯನ್ನು ಬೀದಿಯಲ್ಲಿ ಹಾಸುವರು. ಅದರಮೇಲೆ ಪಂಚಾಮೃತವನ್ನಿಟ್ಟು ದಾಸಯ್ಯನಿಗೆ ತಿನ್ನಲು ಕೊಡುವರು. ಅವನೂ ಅವನ ಗುಂಪೂ ಕೈಯಲ್ಲಿ ಮುಟ್ಟದೆ ಬಾಯಲ್ಲೇ ತಿನ್ನುವುದು. ತಿಂದು ಮಿಕ್ಕಿದ್ದು ನಗಾರಿ ಹೊರುವ ಬಸವಣ್ಣನಿಗೆ.

ಹೀಗೆ ನಾಲ್ಕು ಬೀದಿಯಲ್ಲೂ ನಡೆಯುವುದು. ಜೊತೆಯಲ್ಲಿಯೇ ಒಬ್ಬನು " ಎಳವಾರ " ವನ್ನು ತರುವನು (ಅತ್ತೀಮರದ ಸಣ್ಣಕೊಂಬೆಗಳ ಕಂತೆ) ಅವನಿಗೆ ಹುಗ್ಗೀಅನ್ನ ನಾಲ್ಕಾಣೆ ಮಿರಾಸು ಕೊಡುವರು. ಕಲಶಗಳನ್ನೂ ಎಳವಾರವನ್ನೂ ತಂದು ಶುದ್ಧವಾದ ಜಾಗದಲ್ಲಿಟ್ಟು ನಾಲ್ಕೈದು ದಿನಗಳವರೆಗೂ ಪೂಜಿಸಿ ಕಡೇ ದಿನ ಹೊಳೆಗೆ ಬಿಡುವರು.

ಸೂರ್ಯನು ಸ್ವಚ್ಛವಾಗಿ ಉದಯಿಸಿದನು. ಹಕ್ಕಿಗಳು ಚಿಲಿಪಿಲಿಗುಟ್ಟುತ್ತಾ ಹಾರಾಡುತ್ತಿದ್ದವು. ಪ್ರಕೃತಿಯು ಶಾಂತವಾಗಿದ್ದಿತು. ಈದಿನ ನಮ್ಮೂ

ರಿನ ಒಬ್ಬಾಳೊಬ್ಬ ಹೆಣ್ಣುಮಗಳ ಮದುವೆ. ಊರಿಗೆ ಊರೇ ಸಡಗರದಿಂದ ಕೂಡಿದೆ, ಬೆಳಗಾದರೆ ಸಾಕೆಂದು ಕಾದಿದ್ದರು. ನಿತ್ಯಕ್ಕಿಂತಲೂ ಬಲುಬೇಗನೆದ್ದು ಎಲ್ಲರೂ ಹೊಸ ಉಡುಪುಗಳಿಂದ ಸಿಂಗರಿಸಿಕೊಂಡು ಹೊರಟರು, ಜೋಯಿಸರು ಆ ದಿನ ನಡೆಸಬೇಕಾದ ಅನೇಕ ಲಗ್ನಗಳನ್ನು ನಾನಾಸಿದ್ಧಾಂತಗಳ ಆಧಾರದ ಮೇಲೆ ಮುಂದೂಡಿದ್ದರು. ಎಂಟು ಗಂಟೆ ಒಳಗಾಗಿ ಅವರೂ ಬಂದುಬಿಟ್ಟರು. ಬಳೆಗಾರರು ಓಲಗದವರು ನೆನ್ನೆರಾತ್ರಿಯೇ ಬಂದು ಜಗಲೀಮೇಲೆ ಮಲಗಿದ್ದರು. ವಧುವಿಗೆ ಬಳೆತೊಡಿಸುವ ಶಾಸ್ತ್ರವಾಯಿತು, ಮಂಗಳಸ್ನಾನವಾಯಿತು, ಮನೆಯಲ್ಲೆಲ್ಲಾ ಜೋಯಿಸರದೇ ಗಲಾಟೆ, ಹೊತ್ತಾಯಿತೆಂದು ಎಲ್ಲರನ್ನೂ ಗಾಬರಿಪಡಿಸುತ್ತಿದ್ದರು. ಪಟ್ಟಕಟ್ಟುವ ಚಿನ್ನದ ತಗಡನ್ನು ಎಲ್ಲಾ ಹಿರಿಯರ ಕೈಲಿ ಮುಟ್ಟಿಸಿ ಹತ್ತಿರ ಇಟ್ಟುಕೊಂಡು ಎಲ್ಲಿ ಗಂಡು ಬರಲಿಲ್ಲ ಗಂಡು ಎಂದರು. ವರನು ಸ್ವಲ್ಪ ದೂರದ ಊರಿನವನಾದ್ದರಿಂದ ಬರುವುದು ರವೆಯಷ್ಟು ಹೊತ್ತಾಯಿತು. ಜೊತೆಯಲ್ಲಿ ಐವತ್ತೈದು ಗಾಡಿಗಳಲ್ಲಿ ಜನಗಳು ಭರ್ತಿಯಾಗಿ ಬಂದಿದ್ದರು. ಅವರೆಲ್ಲ ಆಂಜನೇಯನ ಗುಡಿಯಲ್ಲಿರುವುದು ಸಮಾಚಾರ ಬಂದ ಒಡನೇ ಜೋಯಿಸರು ಹಾರಿಬಂದು ಬೇಗರ ಕಿವಿಯಲ್ಲಿ ಏನೋ ಪಿಸುಮಾತಾಡಿ ಸರಿಯು ಬೇಗ ಮೆರೆವಣಿಗೆ ಮಾಡಿಸಿಕೊಂಡು ಬನ್ನಿ ಎಂದರು.

ಮೆರೆವಣಿಗೆಯಾಯಿತು. ದೇವಸ್ಥಾನದ ಬಾಗಿಲುಗಳು ತೆಗೆದಿದ್ದವು, ದೀಪವು ನಿತ್ಯಕ್ಕಿಂತಲೂ ಸ್ವಲ್ಪ ಹೆಚ್ಚಾಗಿ ಪ್ರಕಾಶಿಸುತ್ತಲಿತ್ತು, ಗಂಡು ಹೆಣ್ಣಿನ ಮನೆಗೆ ಹೋಯಿತು. ವಧೂವರರು ಪಟ್ಟವನ್ನು ಕಟ್ಟಿಕೊಂಡು ಹಸೇಮಣೆಯ ಮೇಲೆ ಕೂತರು. ಅಷ್ಟರಲ್ಲೆ ವಸ್ತ್ರಗಾರಪೆಟ್ಟಿಗೆ ಬೂವ್ವದಪೆಟ್ಟಿಗೆ ಅಡ್ಡಪೆಟ್ಟಿಗೆ ಇವುಗಳನ್ನೂ ಬೀದಿಯಲ್ಲಿ ಮೆರೆವಣಿಗೆ ಮಾಡಿಸಿ ಹೆಣ್ಣಿನ ಮನೆಯಲ್ಲಿಟ್ಟರು. ಸುಮುಹೂರ್ತಾಸಾವಧಾನ ಸುಲಗ್ನಾಸಾವಧಾನ ಎಂದು ಪದೇಪದೇ ಕೇಳುತ್ತಲಿತ್ತು. ಬ್ರಹ್ಮಕಂಕಣ ಕಟ್ಟಿದರು, ಮನೆಯವರಲ್ಲೇ ಒಬ್ಬರು ಅರಿಸಿನದ ಕಂಕಣವನ್ನು ಮೊದಲೇ ಕಟ್ಟಿದ್ದರು ವರನು ತಲೆಯಲ್ಲಿ ಕಟ್ಟಿರುವ ಬಾಸಿಂಗ, ಹಣೆಯಲ್ಲಿ ಬಿಗಿದಿರುವ ಪಟ್ಟದ ತಗಡು ಕೈಯಲ್ಲಿ ಹಿಡಿದಿರುವ ಕಠಾರಿ ಇವುಗಳಿಂದ ಒಳ್ಳೇ ವೀರಪುರುಷನಂತಿದ್ದನು. ವಧುವು ನಾಚಿಕೆಯ ಭಾರದಿಂದ ತಲೆಯನ್ನು ಬಾಗಿಸಿ ಕೂತಿದ್ದಳು. ಸಖಿಯರು ಸೆರಗನ್ನೂ ಹೂವನ್ನೂ ಅಲಂಕಾರಗಳು ಸರಿಯಾಗಿದ್ದರೂ ಸರಿಮಾಡುವವರಂತೆ ಪ್ರಯತ್ನಪಡುತ್ತಿದ್ದರು. ಸೂರ್ಯಭಗವಂತನು ತೊಟ್ಟಿಯಲ್ಲಿ ಹಾಕಿದ್ದ ಹಸರುವಾಣೀಚಪ್ಪರದ ಕಂಡಿಗಳಿಂದ ಬಂದು ವಧೂವರ

ರಿಗೆ ಆಶೀರ್ವಾದ ಮಾಡುತ್ತಿದ್ದನು. ಮೈಸೂರಿನ ಗಂಧದಕಡ್ಡಿಗಳಿಂದ ತೊಟ್ಟಿಯೆಲ್ಲಾ ಘಮಘಮಾ ಎನ್ನುತ್ತಿತ್ತು. ಪದೇಪದೇ ಪನ್ನೀರನ್ನು ಚುಮುಕಿಸುತ್ತಿದ್ದರು. ಮಾಂಗಲ್ಯಧಾರಣೆ, ಫಲಪೂಜೆಗಳಾದವು, ಸಭಾತಾಂಬೂಲವೆತ್ತಿದರು. ಯಜಮಾನನು ಬಂದು ಜೋಯಿಸರ ಕೈಲಿ ಯಾವುದನ್ನೂ ಮರಿಬ್ಯಾಡಿ ನಾಕ್ಹಣ ಖರ್ಚಾದರೆ ಆಗಲಿ ಎಂದನು. ಮೊದಲು ಗ್ರಾಮದ ದೇವರುಗಳಿಗೆ ಕೊಟ್ಟರು. ಅನಂತರ ಬ್ರಾಹ್ಮಣರಿಗೆ ಕೊಟ್ಟರು. ಆಮೇಲೆ ಸಂಬಂಧವಾಲಿಕೆ ಕಟ್ಟಿಕೊಟ್ಟವರಿಗೆ ಗಂಧದ ಬಟ್ಟಲನ್ನು ತಂದವರಿಗೆ ದಾಸಯ್ಯನಿಗೆ ಪುರಸಪ್ಪನಿಗೆ ಜಂಗಮರಿಗೆ ಚೂರದಾರನಿಗೆ (ಚುಂಚನಗಿರಿ ಮಠದ ಮರ್ಯಾದಸ್ಥ) ನಾಡಿಗೆ ದೇಶಕ್ಕೆ ಅರಮನೆಗೆ (ಪಟೇಲನು ಮಡಲಲ್ಲಿ ಹಾಕಿಕೊಂಡನು) ಗುರುಮನೆಗೆ (ಜೋಯಿಸರು ಸೊಂಟಕ್ಕೆ ಸಿಕ್ಕಿಸಿಕೊಂಡರು) ದಕ್ಷಿಣೆ ತಾಂಬೂಲವೂ ಸರ್ವತ್ರ ತಾಂಬೂಲವೂ ಹಂಚಲ್ಪಟ್ಟಿತು. ಜೋಯಿಸರು ಗಟ್ಟಿಯಾಗಿ ಒಂದುಸಲ ತಾಂಬೂಲ ಆಗದಿದ್ದವರು ಅಪ್ಪಣೆ ಕೊಡಿಸಬೇಕೆಂತ ಯಜಮಾನ್ರು ಕೇಳ್ಕೋಳ್ತಾರೆ ಎಂದರು. ಸಭೆಯೆಲ್ಲಾ ಸುಮ್ಮನಿತ್ತು. ಹಸೆಮಣೆಯಮುಂದೆ ಒಂದು ಮುಕ್ಕಾಲುಮಣೆಯಿಟ್ಟು ಅದರಮೇಲೊಂದು ಚಂದ್ರನಮರಿಯಂತಿರುವ ಕಂಚಿನ ತಣಿಗೆಯಿಟ್ಟರು. ವರನು ಧಣಿಧಣಿ ಎಂದು ರೂಪಾಯಿ ಸುರಿದನು, ಎಲ್ಲರೂ ರೂಪಾಯಿಗಳನ್ನು ಹಾಕಿದರು, ಪಟೇಲನು ಎಲ್ಲವನ್ನೂ ಕ್ರಮಪ್ರಕಾರ ಬರೆದಿಟ್ಟುಕೊಂಡನು. ವರನು ಆ ರೂಪಾಯಿಗಳನ್ನು ಅತ್ತೆಗೆ (ತೆರ) ಕೊಟ್ಟನು. ಆಕೆಯು ಅದನ್ನು ಮಗಳ ಮಡಲಲ್ಲಿ (ಅರಿಸಿನದ ಬಟ್ಟೆಯಿಂದ ಕಟ್ಟಿ) ಹಾಕುತಾ ಇದೋ ಕಷ್ಟಕಾಲದಲ್ಲಿ ಕಾಯುವ ಹಣ, ಇದನ್ನು ನೀನು ಹಾಳುಮಾಡಬೇಡ, ಇದನ್ನು ಅಭಿವೃದ್ಧಿಪಡಿಸಿಕೊಂಡು ಸುಖವಾಗಿ ಬದುಕಮ್ಮ ಎಂದು ಹರಸಿದಳು. ಧ್ವನಿಯು ಯಾಕೋ ಸ್ವಲ್ಪ ಕುಗ್ಗಿದಂತಿತ್ತು, ಪಟೇಲನ ಮನೆಯ ಮುಂದೆ ಹೆಣ್ಣುಗಂಡಿಗೆ ಆರತಿ ಎತ್ತಿದರು. " ಗೌಡಾರ್ತಿ " ಎಂದು ನಾಲ್ಕಾಣೆ ತಟ್ಟೆಗೆ ಬಿತ್ತು. ಈಕಡೆ ಜೋಯಿಸರು ದಕ್ಷಿಣೆಗಳನ್ನೆಲ್ಲಾ ಎಣಿಸಿಕೊಂಡು ಯಜಮಾನನ ಕಡೆಗೆ ನೋಡಿದರು. ಅವನು ಮುಂದೆ ಕೆಲಸ ನಡಿಯಲಿ ಎನ್ನುವ ಸಂಜ್ಞೆಮಾಡಿದನು. ಆ ಮೇಲೆ ಬ್ರಾಹ್ಮಣರೂ ಜೋಯಿಸರೂ ವಧೂವರರಿಗೆ ಮಂತ್ರಾಕ್ಷತೆಗಳಿಂದ ಆಶೀರ್ವಾದ ಮಾಡಿದರು. ಜೋಯಿಸರು ಎಚ್ಚರಿಕೆಯಿಂದ ಸಭಾಕಾರ್ಯವನ್ನು ನೆರವೇರಿಸಿದರು. ಬ್ರಹ್ಮಸಭೆಯು ಚಲಿಸಿತು, ಬ್ರಾಹ್ಮಣರ

ಮನೆಗೆ ಹೊತ್ತುಹುಟ್ಟುವ ಹೊತ್ತಿಗೇ ಮೊರಮೊರದಲ್ಲಿ ಅಮೃತಪಡಿಯು ಒಂದಿದ್ದಿತು. ಮದುವೆ ಮನೆಯವರೆಲ್ಲಾ ಊಟಕ್ಕೆ ಅಣಿಯಾದರು ಊಟ ಉಪಚಾರಗಳಾದವು. ವರನು ವಧುವನ್ನು ಕರೆದುಕೊಂಡು ತನ್ನೂರಿಗೆ ಸಂಜೆಯಹೊತ್ತಿಗೆ ಹೊರಟುಹೋದನು. ಇವತ್ತು ಯಜಮಾನತಿಯು ಮೋಟಾರನ್ನಾಗಲಿ, ಕುದುರೆ ಗಾಡಿಯನ್ನಾಗಲಿ, ಗಂಡು ಹೆಣ್ಣಿನ ಮೆರವಣಿಗೆಗೆ ತರಬೇಕೆಂದು ಸರ್ವಸನ್ನಾಹ ಮಾಡಿದಳು. ಯಜಮಾನನು ಹಳೇ ಸಂಪ್ರದಾಯದವನಾದ್ದರಿಂದ ಅದಕ್ಕವಕಾಶ ಕೊಡಲಿಲ್ಲ, ಸಕಾಲಕ್ಕೆ ಸರಿಯಾಗಿ ಗಂಡು ಹೆಣ್ಣನಮ್ಮೂರಿಗೆ ಬಂತು ಹೆಣ್ಣನ್ನು ಎತ್ತಿನಮೇಲೆ ಗಂಡನ್ನು ಕುದುರೆಯಮೇಲೆ ಕೂರಿಸಿದರು. ಬಾಣ ಬಿರುಸು ರಂಥೋಲುವಾದ್ಯ. ಓಹೋಹ್ಹೊ (ಸಬ್‌ಗಸ್ಸು) ಏನು ಸೊಗಸೊ ! ನಮ್ಮೂರವರು ಅಂತಾ ಮೆರವಣಿಗೆಯನ್ನೇ ಕಂಡಿರಲಿಲ್ಲ. ಪ್ರತಿಮನೆಯ ಮುಂದೆಯೂ ವಾಲಗದವನು ನಕಲಿ ಮಾಡಿ ಗಂಡು ಹೆಣ್ಣಿನ ಹೆಸರು ಹೇಳಿಸಿ, ದುಡ್ಡು ತಿಂಡಿಗಳನ್ನು ತೆಗೆದುಕೊಳ್ಳುತ್ತಿದ್ದನು. ಮುಂದುಗಡೆ ನಮ್ಮೂರಿನ ಚನ್ನವೀರಾಚಾರಿಯು ಒಂದು ಬಣ್ಣದ ಕುದುರೆಯ ಕತ್ತನ್ನು ಕಂಕುಳಲ್ಲಿರಿಸಿಕೊಂಡು ಕುಣಿಸುತ್ತಿದ್ದನು, ಅವನಿಗೆ ನಾಲ್ಕಾಣೆ ಬಹುಮಾನ ಕೊಟ್ಟರು. ನಾನು ಇದೇನುವಿಚಾರ ತಿಳಿದುಕೊಳ್ಳೋಣ ಎಂದು ಆಚಾರಿಯನ್ನು ಕೇಳಿದೆ. ಆತನು ಹೇಳಿದಪ್ರಕಾರವೆಂತೆಂದರೆ— ಬಹಳಕಾಲಕ್ಕೆ ಹಿಂದೆ ಬಸವಣ್ಣನು ಓಡಿಹೋಗಿ ಈಶ್ವರನ ಹತ್ತಿರ ಔತುಕೊಂಡನು. ಭೂಲೋಕದಲ್ಲಿ ವ್ಯವಸಾಯವಿಲ್ಲದೆ ಕ್ಷಾಮವುಂಟಾಯಿತು. ವಿಶ್ವಕರ್ಮನ ವಂಶದವರಾದ ನಮ್ಮವರು ಮರದಲ್ಲಿ ಬಸವನನ್ನು ಮಾಡಿ ಅದಕ್ಕೆ ಕೀಲು ಜೋಡಿಸಿ ಈಶ್ವರನ ಹತ್ತಿರಕ್ಕೆ ತೆಗೆದುಕೊಂಡು ಹೋಗಿ ಮುಂದಿಟ್ಟು ಕೈಮುಗಿದರು. ಆಗ ಸ್ವಾಮಿಯು ಏನುಬಂದಿರಿ ಎನಲು ನಮ್ಮೊಡೆಯಾ, ನೀನು ಬಸವಣ್ಣನನ್ನು ಬಿಟ್ಟುಕೊಟ್ಟರೆ ಸರಿ, ಇಲ್ಲದಿದ್ದರೆ ಇದೋ ಈ ಕೀಲುಬಸವನಿಂದ ಭೂಮಿಯಲ್ಲಿ ವ್ಯವಸಾಯ ಮಾಡಿಸುತ್ತೇವೆ ಎಂದರು. ಪಶುಪತಿಯು ಯೋಚಿಸಿ ಎಲ್ಲಿಯ ಗಲಾಟೆ, ಸೃಷ್ಟಿಯು ಏಕಮುಖವಾಗಿರಲಿ, ಬಸವನನ್ನು ಕರದುಕೊಂಡು ಹೋಗಿ ಎಂದು ಕಳುಹಿಸಿದನು. ಅಂದಿನಿಂದ ಮೊದಲು ಇಂದಿನವರೆಗೆ ವ್ಯವಸಾಯವು ಸಲೀಸಾಗಿ ನಡೆಯುತ್ತಿದೆ. ಅದಕ್ಕಾಗಿ ಅವರ ವಂಶದವರಾದ ನಮಗೆ ಈ ಮರ್ಯಾದೆ ಕೊಡುತ್ತಾರೆ ಏನು ಪುಗಸಟ್ಟೆ ಕೊಟ್ಟಾರಾ? ಅಂದನು. ಅದನ್ನು ಕೇಳಿದ್ದರೂ ಇರಬಹುದೆಂದು ಸುಮ್ಮನಾದೆನು.

ಆರೇಳುತಿಂಗಳುಗಳಾದವು- ಹೆಣ್ಣು ದೊಡ್ಡದಾಯಿತು (ಮೈನೆರೆಯಿತು) ಹಲಸಿನಸೊಪ್ಪು ಲಕ್ಕೀಸೊಪ್ಪು ಅತ್ತೀಸೊಪ್ಪುಗಳನ್ನುತಂದು ಗೋಡೆಗೆ ಒರಗಿಸಿ ಗುಡಿಸಲು ಮಾಡಿದರು. ಹುಡುಗಿಗೆಸ್ನಾನಮಾಡಿಸಿ ಕರೆದುಕೊಂಡು ಬಂದು ಅದ ರೊಳಗೆ ಕೂರಿಸಿದರು ಆರತಿ ಎತ್ತಿದರು, ಊರಿನ ಎಲ್ಲಾ ಮನೆಯವರೂ, ತಟ್ಟೆಯಲ್ಲಿ ಅರ್ಧಮರ್ಧಕುಟ್ಟಿದಭತ್ತ ಒಂದಚ್ಚು ಬೆಲ್ಲ ಎಲೆ ಅಡಿಕೆ- ಇಷ್ಟನ್ನೂ ತೆಗೆದುಕೊಂಡು ಹೋಗಿ ಹುಡುಗಿಗೆ ಮಡಲುತುಂಬಿದರು- ಮನೆಯವರು ಬಂದವರಿಗೆ ಎಲೆಅಡಕೆ- ಚಿಗಳಿತಂಬಿಟ್ಟುಕೊಟ್ಟು ಕಳುಹಿಸಿದರು. ಮೂರುದಿನವಾದಮೇಲೆ ಮಂಗಳಸ್ನಾನ ಮಾಡಿಸಿ ಹುಡುಗಿಯನ್ನು ಒಳಕ್ಕೆಕರೆದುಕೊಂಡರು ಇಲ್ಲಿಗೆ ಗುಡ್ಲುಕೂಡುವ ಶಾಸ್ತ್ರವಾಯಿತು

ಇವತ್ತು ಒಳ್ಳೆಯದಿನವಾಗದೆ (ಪ್ರಸ್ತಕ್ಕೆ) ಬಸಿಗೆಗೆ ಏರ್ಪಾಡು ಮಾಡಿದೆ ಎಂದು ಮಾವನಮನೆಯಿಂದ ಹೊರಟುಬಂದ ಆಳು ಅಳಿಯನಮನೆಯಲ್ಲಿ ಸಮಾಚಾರಹೇಳಿದನು. ಸಂಜೆಗೆ ಅಳಿಯನುಬಂದನು. ಸ್ವಲ್ಪಕತ್ತಲಾಯಿತು. ಮನೋಹರವಾಗಿ ಅಲಂಕೃತಳಾದ ವಧುವೇ- ಗಂಡನಿಗೆ ಆರತಿ ಎತ್ತಿದಳು. ತಟ್ಟೆಗೆ ಹತ್ತುರೂಪಾಯಿಗಳು ಬಿದ್ದವು. ಜಾತಿಪದ್ಧತಿಯಂತೆ ಊಟವಾಯಿತು. ಅಳಿಯನು ತನಗಾಗಿ ಸಿದ್ಧವಾಗಿದ್ದ ಬೇರೆಕೋಟಡಿಯಲ್ಲಿ ಮಲಗಿಕೊಂಡನು. ಎಲ್ಲರೂ ಮಲಗಿ ಕೊಂಡರು.ಕೋಳಿಕೂಗಿರಬಹುದು. ಅಳಿಯನು ಯಾರ ಕೈಲೂ ಮಾತಾಡದೆ ತನ್ನೂ ರಿಗೆ ಹೊರಟುಹೋದನು. ಅದೇವಾಡಿಕೆಯಂತೆ. ಪ್ರಸ್ತವಾಯಿತು ಇಲ್ಲಿಗೆ.

ಒಳ್ಳೆಯದಿನದಲ್ಲಿ ಗೃಹಪ್ರವೇಶವುನೆರವೇರಿತು- ಮಗಳಿಗೆ ಏಳುತಿಂಗಳಾಗಿದೆ ಎಂದುವರ್ತಮಾನಬಂತು. ಯಜಮಾನತಿಯು ಹೋಗಿಕರೆದುಕೊಂಡುಬಂದು ಬಾಣಂತನ ನೆರವೇರಿಸಿ ಮೊಮ್ಮಗಳನ್ನು ತೊಟ್ಟಲಲ್ಲಿ ಮಲಗಿಸಿ ತಲೆಯಮೇಲೆ ಹೊತ್ತುಕೊಂಡುಹೋಗಿ ಬೀಗರಮನೆಗೆಬಿಟ್ಟಳು ಮಗೂಬಾಣಂತಿಯರು ಆರೋ ಗ್ಯವಾಗಿ ಬಂದದ್ದಕ್ಕಾಗಿ ತೊಟ್ಟಲುಮುನ್ನಾಗಿ ಬಂದಬಹುಮಾನವೆಂದು ಯಜ ಮಾನತಿಗೆ ಒಂದು ಸೀರೆಕಣವನ್ನೂ ಕೊಟ್ಟರು. ಬಸಿರೀಆಗದಿದ್ದರೆ- ಹೆಣ್ಣಿಗೆ ಉಮ್ಮತ್ತಿಕಾಯಿಸರಸವನ್ನು ಕುಡಿಸುತ್ತಿದ್ದರು. ಆ ಹುಡುಗಿಗೆ ಪ್ರಜ್ಞೆಯು ಶಿಥಿಲವಾಗಿ ಮೂರುನಾಲ್ಕುದಿನ ಹುಚ್ಚಿಯಂತೆಕಾಣುತ್ತಿತ್ತು. ಅದಕ್ಕೂ ಗರ್ಭ ಧಾರಣೆಯಾಗದಿದ್ದರೆ ಸ್ವಲ್ಪ ಬಂಜೆಯಗುಂಪಿಗೇ ಸೇರಿದಂತೆ ತಿಳಿಯುತ್ತಿದ್ದರು.

ಶೂದ್ರರಿಗೆ **ದಾಸ** ಮತ್ತು **ಪುರುಸ** ಎಂಬಿಬ್ಬರು ಧಾರ್ಮಿಕ **ಪೂಜಕರಿದ್ದರು**. ಪುರುಸನು ಚುಂಚನಗಿರಿ ಮಠದ ಶಿಷ್ಯನು. ಭೈರವನು ಅವನ ಆರಾಧ್ಯದೇವತೆ, ದಾಸನು ತಿರುಪತಿ ವೆಂಕಟರಮಣನಿಗೆ ಶಿಷ್ಯನು. ಇನ್ನು ದೇವರೂ ಆ ವೆಂಕಟರಮಣನೆ. ಜಾತಾಶೌಚ, ಮೃತಾಶೌಚಗಳು ಹೋಗುವಾಗ ಅವರವರ ಸಂಪ್ರದಾಯದಂತೆ ಇವರಿಬ್ಬರಲ್ಲಿ ಒಬ್ಬರಿಗೆ ಎಡೆ ಇಕ್ಕುತ್ತಿದ್ದರು. ಪುರುಸನು ಶಿಷ್ಯರ ಮನೆಗೆ ಹೋಗುವಾಗ ಕಬ್ಬಿಣದ ದೊಡ್ಡ ತ್ರಿಶೂಲ, ಬೆಳ್ಳಿಯ ಸಣ್ಣ ತ್ರಿಶೂಲಗಳನ್ನು ಸೇರಿಸಿ ಕಟ್ಟಿದ ನವಿಲುಗರಿ ಕಂತೆಯನ್ನು ಹೆಗಲಮೇಲೆ ಇಟ್ಟುಕೊಂಡು ಕಂಕುಳಲ್ಲಿ ವಿಭೂತಿ ಚೀಲ, ಕೈಯಲ್ಲಿ ಜಿಂಕೆಯಕೊಂಬಿನ ವಾದ್ಯ, ತೀರ್ಥದ ಬಟ್ಟಲು ಇವುಗಳನ್ನು ತೆಗೆದುಕೊಂಡು ಹೋಗುತ್ತಿದ್ದನು. ದಾಸನು ಕಿರುಗಂಟೆ ಕಟ್ಟಿದ ಒಂದು ಬಸಕೆ (ಅದಕ್ಕೆ ಬಾಣದ ವೆಂಕಟರಮಣ ಎಂದು ಹೆಸರು) ಯನ್ನು ಹೆಗಲಮೇಲಿರಿಸಿಕೊಂಡು ಎಡಕಂಕುಳಲ್ಲಿ ಕಡಾಸು, ಬವನಾಸಿ, ಬಲಕಂಕುಳಲ್ಲಿ ತುತ್ತೂರಿ (ಭಾಂಕಿ) ಶಂಖ ಹೃದಯದಲ್ಲಿ ಆಂಜನೇಯ ವಿಗ್ರಹ, ಬಲಗೈಯಲ್ಲಿ ಜಾಗಟೆಗಳನ್ನು ಹಿಡಿದುಕೊಂಡು ಹೋಗುತ್ತಿದ್ದನು. ಅಲ್ಲಿ ದೇವರಪೂಜೆಯಾದನಂತರ ದಾಸನು ಗೃಹಸ್ಥನಿಗೆ ನಾಮವನ್ನೂ ಕುಂಕುಮವನ್ನೂ ಇಡುತ್ತಿದ್ದನು. ಪುರುಸನು ವಿಭೂತಿಯನ್ನಿಡುತ್ತಿದ್ದನು. ಮಾಮೂಲು ಬಂದಂತೆ ದುಡ್ಡು ಕೈಗೆ ಬಂದ ನಂತರ ಮನೆಗೆ ಹಿಂದಿರುಗುತ್ತಿದ್ದರು. ದಾಸಪುರುಸರ ಜಾತಾಶೌಚ ಮೃತಾಶೌಚಗಳ ನಿವೃತ್ತಿಕಾಲದಲ್ಲಿ ಬ್ರಾಹ್ಮಣ ಪುರೋಹಿತರು ಧಾರ್ಮಿಕ ಗುರುಗಳಾಗುತ್ತಿದ್ದರು. ಹೊಲೆಯರ ಸೂತಕನಿವೃತ್ತಿಕಾಲದಲ್ಲಿ ಅವರು ಮಾಯಮ್ಮನ ಕಲಶವನ್ನು ಹೊಳೆಯ ದಡದಲ್ಲಿಟ್ಟು ನಾಲ್ಕಾಣೆ ದಕ್ಷಿಣೆ ಇಡುತ್ತಿದ್ದರು. ಬ್ರಾಹ್ಮಣ ಗುರುವು ಪುರಾಣಮಾರ್ಗದಿಂದ ಆ ಕಲಶಕ್ಕೂ ಅಲ್ಲಿಗೆ ಬಂದವರಿಗೂ ಪ್ರೋಕ್ಷಿಸುತ್ತಿದ್ದನು. ಅಲ್ಲಿಗೆ ಅವರು ಶುದ್ಧರಾದೆವೆಂದು ತಿಳಿಯುತ್ತಿದ್ದರು.

ಗಂಡನು ತೀರಿಹೋದ ಮೇಲೆ ಹೆಂಗಸರಲ್ಲಿ ಕೆಲವರು ವಿಧವೆಯರಾಗಿಯೇ ಇರುತ್ತಿದ್ದರು. ಕೆಲವರು ತಾಳೀಕಟ್ಟಿಕೊಳ್ಳುವ ಶಾಸ್ತ್ರದಂತೆ ಬೇರೆ ಗಂಡನನ್ನು ಮಾಡಿಕೊಳ್ಳುವ ವಾಡಿಕೆ. ಆ ಗಂಡನು ಊರವರಿಗೆ ಜಾತಿ ಪದ್ಧತಿಯ ಊಟ ಮಾಡಿಸಿ ಆ ಹೆಣ್ಣನ್ನು ಕರೆದುಕೊಂಡು ತನ್ನ ಊರಿಗೆ ಹೋಗುವಾಗ ದಾರಿಯಲ್ಲಿ ಹೊಸತಾಳಿಯನ್ನು ಹೆಣ್ಣಿನ ಕತ್ತಿಗೆ ಕಟ್ಟಿಬಿಡುವನು. ಈ ರೀತಿ ತಾಳಿ ಕಟ್ಟಿಕೊಂಡ ಹೆಂಗಸರಿಗೆ ಕಂಭಕುಂಭಗಳಲ್ಲಿ (ಆರತಿ ಅಕ್ಷತೆ) ಪ್ರವೇಶವಿರಲಿಲ್ಲ.

ಗಂಡನಿದ್ದು ವ್ಯಭಿಚಾರಿಣಿಯಾಗಿದ್ದು ತಿಳಿದರೆ ತಾಳಿ ಕಡಗ ಓಲೆ ಮುಂತಾದುವನ್ನು ಕಳಚಿಕೊಂಡು ಮನೇಬಿಟ್ಟು ಹೊರಡಿಸುತ್ತಿದ್ದರು. ಗಂಡನೇ ಬೇಡವೆಂದು ತಂದೆಯ ಮನೆಗೆ ಓಡಿಬಂದರೆ ಪಂಚಾಯಿತರು ಅನೇಕ ಉಪಾಯಗಳಿಂದ ಸೇರಿಸಲು ಪ್ರಯತ್ನಪಡುತ್ತಿದ್ದರು. ಸಾಧ್ಯವಿಲ್ಲದಿದ್ದರೆ ಓಲೆ, ತಾಳಿ, ಕಡಗಗಳು ಹಿಂತಿರುಗಿ ಗಂಡನ ಮನೆಗೆ ಹೋಗುತ್ತಿದ್ದವು. ಅಲ್ಲಿಗೆ ವಿಮೋಚನೆಯು ದೃಢಪಟ್ಟಹಾಗಾಯಿತು. ತಾಳಿ ಕಟ್ಟಿಕೊಂಡ ಗಂಡನು ಮನೆಗೆಲಸಕ್ಕಾಗಿ ಕಟ್ಟಿಕೊಂಡೆ ಅನ್ನುತ್ತಿದ್ದನು. ಹೆಂಗಸು "ತಾಳಿಯನ್ನು ಬಿಟ್ಟಿರಲಾರದೆ ಪುನಃ ಮದುವೆ ಮಾಡಿಕೊಂಡೆ' ಅನ್ನುತ್ತಿದ್ದಳು. ಪುರುಷನ ಒಕ್ಕಲು ಮದುವೆಯೆಲ್ಲಾ ಆದಮೇಲೆ ಜಾತಿ ಪದ್ಧತಿಯನ್ನನುಸರಿಸಿ ಊಟ ಹಾಕಿಸುತ್ತಿದ್ದರು ಇದಕ್ಕೆ "ಭುಕ್ತಿ" ಎಂದು ಹೆಸರು. ಯಾರೂ ಮದುವೆಗೆ ಮೊದಲು ಮದುವೆಯಾಗುವಾಗ ನಾಲ್ಕೈದು ದಿನಗಳು "ಜಾತಿ ಪದ್ಧತಿಯ" (ಮಾಂಸಮಿಶ್ರಿತ) ಊಟ ಮಾಡುತ್ತಿರಲಿಲ್ಲ.

---

## ನ್ಯಾಯವಿಮರ್ಶೆ

ನಮ್ಮೂರಿನ ವ್ಯಾಜ್ಯಗಳು ಸರ್ಕಾರದವರೆಗೆ ಹೋದದ್ದೇ ಅಪರೂಪ, ಸ್ಥಳದ ಪಂಚಾಯುತಿಯಲ್ಲಿಯೇ ಗ್ರಾಮದ ಮುಖಂಡರು ನ್ಯಾಯವನ್ನು ತೀರ್ಮಾನಿಸುತ್ತಿದ್ದರು. ಪಂಚಾಯುತಿಗೆ ಸೇರುವ ಜಾಗವು ಊರು ಮಧ್ಯದಲ್ಲಿರುವ ಚಾವಡೀಕಟ್ಟೆಯಾಗಿತ್ತು. ಅಪರಾಧಿಯು ತನ್ನ ವಿಚಾರವನ್ನು ತಿಳಿಸಲು ಸಂಪೂರ್ಣವಾದ ಅವಕಾಶ ಕೊಡುತ್ತಿದ್ದರು. ಪಂಚಾಯಿತರು ನ್ಯಾಯವನ್ನು ಕಲಕಿ ಸಾಕ್ಷಿಸಂಬಂಧಗಳಿಂದ ಈ ವ್ಯಾಜ್ಯದ ತತ್ವವು ಇಷ್ಟೇ ಎಂದು ಕಂಡುಕೊಂಡ ಮೇಲೆ ಬೇರೆ ನಾಲ್ಕು ಜನರನ್ನು ಅಪರಾಧಿಗೆ ದಂಡ ವಿಧಿಸುವಸಲುವಾಗಿ ನೇಮಿಸುತ್ತಿದ್ದರು. ಅವರು ಹೇಳಿದ ಮಾತಿಗೆ ಎಲ್ಲರೂ ಒಪ್ಪಿ ತಮಗೆ ವಿಧಿಸಿದ ದಂಡಕೊಟ್ಟು ಶುದ್ಧರಾಗುತ್ತಿದ್ದರು. ಹಳ್ಳಿಗಳಲ್ಲಿ ನ್ಯಾಯಸ್ಥಾನಕ್ಕೆ ಸಂಬಂಧಪಟ್ಟ ವಿಚಾರಗಳಿಗೆಲ್ಲಾ 'ನ್ಯಾಯಕ್ಕೆ ಕೂತವ್ರೆ ನ್ಯಾಯಕ್ಕೆ ಕರೆಯುತ್ತಾರೆ, ನ್ಯಾಯಾ ಆಡೋಣ ಬನ್ನಿ' ಎಂದು ಹೇಳುವ ವಾಡಿಕೆಯಾಗಿತ್ತು. ಸ್ವಲ್ಪ ಗಟ್ಟಿಗನಾಗಿ ಮಾತಾಡುತ್ತಾ ಕೂತರೆ ಅವನೇನಪ್ಪಾ, ಪಟ್ಟೇಬರೆದುಕೊಂ

ಡು ಕೂತವ್ನೇ ಆವನಿಗೆ ನ್ಯಾಯಾಸಿಕ್ಕುವ ತನಕ ಏಳುವಹಾಗಿಲ್ಲ ಅನ್ನುತ್ತಿದ್ದರು. ಮಿತಿಮೀರಿ ತಪ್ಪುಮಾಡಿರುವ ಅಪರಾಧಿಯನ್ನು ನೀನು ಕಟ್ಟೇಮನೆ ಗುರುಮನೆ ಅರಮನೆಗಳಿಗೆ ವಿಧೇಯನೋ ಅವಿಧೇಯನೋ ಎಂದು ಕೇಳುವರು ವಿಧೇಯನೆಂದು ಒಪ್ಪಿಕೊಂಡರೆ ಈ ಮೂರು ನ್ಯಾಯಸ್ಥಾನಗಳಿಗೂ ಅನುಗುಣವಾದ ದಂಡ ತೆರಬೇಕೆಂದು ಹೇಳಿ ಆಯಾಭಾಗವನ್ನು ಹಂಚಿ ಅವರಿಂದ ಶುದ್ಧನಾಗಿದ್ದೀ ಎಂಬ ಅಪ್ಪಣೆಯ ಕಾಗದವನ್ನು ಅಪರಾಧಿಗೆ ಕೊಡಿಸಿ ಕಳುಹಿಸುತ್ತಿದ್ದರು. ಹಳ್ಳಿಯ ನ್ಯಾಯಸ್ಥಾನವಾದರೂ ಅದರಲ್ಲಿ ಗುಣ, ಗಂಭೀರ, ನ್ಯಾಯವನ್ನು ಹುಡುಕುವ ಸಾಮರ್ಥ್ಯಗಳು ಚೆನ್ನಾಗಿದ್ದವು. ಚಾವಡಿಯ ಮೇಲೆ ಹತ್ತಿ ಕೂತುಕೊಳ್ಳುವುದಕ್ಕೂ ಸ್ವಲ್ಪ ಯೋಗ್ಯತೆಯು ಇರಬೇಕಾಗಿತ್ತು. ಅಲ್ಲಿ ಕುಳಿತವರು ಒಂದು ಚಿಟಿಕಿ ನಶ್ಯ ಹಾಕಿಕೊಳ್ಳಬೇಕಾದರೂ ಹೊರಗೆ ಎದ್ದುಹೋಗುತ್ತಿದ್ದರು. ತಪ್ಪನ್ನು ಒಪ್ಪಿಕೊಂಡು ಹತ್ತು ಜನಗಳಿಗೆ ಶರಣಾಗತನಾದ ಅಪರಾಧಿಗೆ ವಿಶೇಷವಾಗಿ ರಿಯಾಯತಿಯೂ ದೊರೆಯುತ್ತಿತ್ತು. ಅಗೌರವವಾದ ಮಾತೇ ಚಾವಡಿಯಮೇಲೆ ಕೇಳಿಬರುತ್ತಿರಲಿಲ್ಲ. ಸ್ಥಳದ ಪಂಚಾಯತಿಯು ಇಲ್ಲದಿದ್ದರೆ ದೇಶದ ಮೇಲೆ ಎಷ್ಟು ನ್ಯಾಯಸ್ಥಾನಗಳನ್ನು (ಕೋರ್ಟು) ಏರ್ಪಾಟು ಮಾಡಬೇಕಾಗಿತ್ತೋ. ಕೆಲವರು ನಾವು ಅಪರಾಧಿಗಳಲ್ಲ, ಆದ್ದರಿಂದ ದಂಡ ಕೊಡುವುದಿಲ್ಲ ಎಂದು ಹಟ ಹಿಡಿಯುತ್ತಿದ್ದರು. ಆಗ ಮುಖಂಡರು ಓಹೋ, ಇವರನ್ನು ಸುಮ್ಮನೆ ಬಿಟ್ಟರೆ ಬಾಕಿಯವರೂ ನಮ್ಮ ಹತೋಟಿಯನ್ನು ಮೀರುತ್ತಾರೆ ಎಂದು ಯೋಚಿಸಿ ಕುಲವಾಡಿಯನ್ನು ಕರೆದು ಸಾರುವುದಕ್ಕೆ ಅಪ್ಪಣೆ ಕೊಡುವರು. ಅವನು ರಾತ್ರಿ ಸುಮಾರು ಒಂಬತ್ತು ಘಂಟೆಗೆ ತಮಟೆಯನ್ನು ಕಾಯಿಸಿ ಹೆಗಲಿಗೆ ಹಾಕಿಕೊಂಡು ಮೊದಲು ನಾಲ್ಕಾರೇಟನ್ನು ಕುಟಿಕಿ, ಆ ಮೇಲೆ ನಿಲ್ಲಿಸಿ "ಎಲಾ ಇಂತವ್ನು ಹತ್ತೂಜನ್ರನ್ನ ಮೀರವ್ನೆ, ಯಾರೂವೆ ಆವನ್ಜೊತೇಲಿ ಬಳಕ್ಭೋಜ್ನಾ ಮಾಡೋಕಾಗ್ದು, ಅವನ್ಗೆ ಬೆಂಕಿ ಬಿಸ್ನೀರ್ಕೊಡೋಕಾಗ್ದು, ಆಳೂಕಾಳು ಹೋಗೋಕಾಗ್ದು, ಹಂಗೇನಾದ್ರೂ ಮಾಡಿದ್ರೆ ಅವನ್ಕೊಡೋ ದಂಡ ನೀವೇಕೊಡ್ಬೇಕಾಯ್ತದೆ. ಸಾರ್ಲಿಲ್ಲ ಅಂದೀರಿಕಂಗ್ರೈಯ್ಯೋ" ಎಂದು ಅಲ್ಲಲ್ಲೆ ನಿಂತುಕೊಂಡು ಸಾರುವನು. ಅಲ್ಲಿಂದಾಚೆಗೆ ಅಪರಾಧಿಯಾದ ಅವನು ಒಂಟಿಯಾಗುವನು. ರೈತರು ಸಂಘಜೀವಿಗಳಾದ್ದರಿಂದ ಈ ರೀತಿಯಾಗಿ ಸಾರಿಬಿಟ್ಟರೆ ಅಪರಾಧಿಗಳಿಗೆ ಮೂಗು ಬಾಯಿಗಳನ್ನು ಭದ್ರವಾಗಿ ಹಿಡಿದಂತಾಗಿ ಅವರಾಗಿಯೇ ಶರಣಾಗತ

ರಾಗುತ್ತಿದ್ದರು. ರಾಜಿಗೆ ಬಂದರೆ ಮೊದಲು ವಿಧಿಸಿದ ದಂಡವನ್ನೂ ಇಷ್ಟು ದಿನ ತಡಮಾಡಿದ್ದಕ್ಕೆ ಪುನಃ ವಿಧಿಸಿದ ದಂಡವನ್ನೂ ಕೊಡಬೇಕಾಗಿದ್ದಿತು. ಗ್ರಾಮದ ಆಡಳಿತ, ಪಂಚಾಯ್ತಿ ಮುಂತಾದುವೆಲ್ಲಾ ರಾತ್ರಿಕಾಲದಲ್ಲೇ ವಿಶೇಷವಾಗಿ ನಡೆಯುತ್ತಿತ್ತು. ಯಾಕೆಂದರೆ ಹಗಲುಕಾಲದಲ್ಲ ರೈತರೆಲ್ಲಾ ಹೊಲಗದ್ದೆಗಳ ವ್ಯವಸಾಯಕ್ಕಾಗಿ ಊರಹೊರಗೇ ಇರುತ್ತಿದ್ದರು.

ಒಂದೊಂದು ಸಲ ದಂಡೋಪಾಯವು ಉಗ್ರರೂಪವನ್ನು ತಾಳುತ್ತಿತ್ತು. ಅದನ್ನು ಕೈಕೊಂಡಿರುವುದಕ್ಕೆ ಒಂದು ಉದಾಹರಣೆ ಹೇಳುತ್ತಿದ್ದರು. ಒಂದೂರಿನಲ್ಲಿ ಒಬ್ಬನು "ನಿನ್ನಾಪ್ಪದಕ್ಬಿದ್ದೆ" ಎಂದು ಹೆಸರನ್ನಿಟ್ಟುಕೊಂಡಿದ್ದನು. ಊರವರೆಲ್ಲ ಬೆಳಗಾಗೆದ್ದು ಅವನ ಮನೆಯ ಹತ್ತಿರ ನಿಂತುಕೊಂಡು "ನಿನ್ನಾಪ್ಪದಕ್ಬಿದ್ದೆ, ಲೋ ನಿನ್ನಾಪ್ಪದಕ್ಬಿದ್ದೆ" ಉದ್ಯೋಗಾವಮಾಡ್ಬಾರೊ ಎಂದು ಕರೆಯುತ್ತಿದ್ದರು. ಕ್ರಮೇಣ ಅವರೆಲ್ಲರೂ ಮಾತಾಡಿಕೊಂಡು ಲೋ, ನಿನ್ನಹೆಸರನ್ನು ಬದಲಾಯಿಸಿಕೊ ಇಲ್ಲದಿದ್ದರೆ ಊರು ಬಿಟ್ಟುಹೋಗು ಎಂದರು. ಅದಕ್ಕವನು ಅಯ್ಯೋ, ನಾನೇನು ಈ ಹೆಸ್ರು ಇಟ್ಟುಕೊಂಡಿಲ್ಲ, ಇದನ್ನು ಬದಲಾಯಿಸಬೇಕಾದ್ರೆ ನಮ್ಮ ಗುರುಗಳನ್ನು ಕೇಳ್ಬೇಕು. ಕೇಳ್ಬೇಕಾದ್ರೆ ಮುನ್ನೂರು ರೂಪಾಯಿ ಕೊಡಬೇಕು ಎಂದನು. ಗ್ರಾಮಸ್ಥರು ಚಂದಾ ಹಾಕಿಕೊಟ್ಟರು. ಅವನು ಸ್ವಲ್ಪದಿನ ಊರು ಬಿಟ್ಟು ಹೋಗಿ ಪುನಃ ಬಂದು ನಮ್ಮ ಗುರುಗಳು ಹೆಸರನ್ನು ಬದಲಾಯಿಸಿ "ನಿನ್ನಮ್ಮಯ್ಯ" ಎಂದಿಟ್ಟವ್ರೆ ಎಂದನು. ಹಾಗೂ ಕೆಲವು ದಿನ ಕರೆದರು. ಕೊನೆಗೆ ಬೇಸತ್ತು ಕಾಶೀಕಳ್ಳಿ ದೊಣ್ಣೆಗಳಿಂದ ಏಟು ಕೊಡಲು ನಿನ್ನಮ್ಮಯ್ಯನ್ನ ಹೆಸರು ಇಂತಾದ್ದು ಎಂದು ನಿಜವಾದ ಹೆಸರನ್ನು ಹೇಳಿದನು. ಆದ್ದರಿಂದ ನಮಗೆ ದಂಡೋಪಾಯವೇ ಒಳ್ಳೆಯದು ಎನ್ನುವವರಿದ್ದರು.

ಗ್ರಾಮಸ್ಥರು ದಂಡದೋಷಗಳಿಂದ ಬಂದ ದುಡ್ಡನ್ನು ಮುದ್ರಿಕದ ಹಣ ಎಂದು ಗ್ರಾಮದ ಯಜಮಾನನಲ್ಲಿಟ್ಟು ಅದನ್ನು ದೇವಸ್ಥಾನ ಧರ್ಮಛತ್ರ ಮುಂತಾದವುಗಳನ್ನು ಕಟ್ಟುವುದಕ್ಕೆ ಉಪಯೋಗಿಸುತ್ತಿದ್ದರು. ನಮ್ಮೂರಿನಲ್ಲಿ ದಂಡದೋಷಗಳ ವರಿವಟ್ಟುಗಳಿಂದ ಬಂದ ರೂಪಾಯಿಗಳಿಂದ ಸೊಗಸಾದ ಒಂದು ರಾಮಮಂದಿರವನ್ನು ಕಟ್ಟಿಸಿರುವರು. ದಂಡದೋಷಗಳಲ್ಲದೆ ಯಾರಾದರೂ ಮದುವೆ ಮಾಡಿದರೆ ಊರಿಗೆ ಒಂದು ಊಟ ಕೊಡಬೇಕು, ಇಲ್ಲದಿದ್ದರೆ ಗ್ರಾಮದವರು ವಿಧಿಸಿದ ರೂಪಾಯಿ ಕೊಡಬೇಕು. ತಪ್ಪಿದರೆ ಜಾತಿಯಿಂದ ಹೊರಗಿರಬೇಕಾಗಿತ್ತು. ಈ ದುಡ್ಡೂ ಧರ್ಮಾರ್ಥ ಕೆಲಸಕ್ಕೆ ಸೇರುತ್ತಿತ್ತು.

ಗ್ರಾಮದ ಮುಖಂಡರು ಇಷ್ಟು ಪ್ರಯತ್ನಪಟ್ಟರೂ ಬಗ್ಗದ ಹಟವಾದಿಯು ಸ್ಥಳದ ಪಂಚಾಯ್ತಿಗೆ ಮೇಲ್ಪಟ್ಟ **ನಾಡುಗೌಡನಲ್ಲಿ** ತನ್ನ ವಿಚಾರವನ್ನು ತಿಳಿಸಿ ಗ್ರಾಮಸ್ಥರನ್ನು ಅಪರಾಧಿಗಳನ್ನಾಗಿ ಮಾಡುತ್ತಿದ್ದನು. ಆ ನಾಡುಗೌಡನು, ನೆರಳು ಮತ್ತು ನೀರಿಗೆ ಅನುಕೂಲವಾದ ಸ್ಥಳದಲ್ಲಿ ಬೀಡುಬಿಟ್ಟು ವಾದಿ ಪ್ರತಿವಾದಿಗಳ ಅರಿಕೆಗಳನ್ನು ಕೇಳಿ ತಾನು ಸ್ವತಃ ತೀರ್ಮಾನ ಮಾಡುತ್ತಿದ್ದನು. ಸ್ಥಳದ ಪಂಚಾಯುತಿಯಲ್ಲಿ ಅಪರಾಧಿಯಾದವನ ಪರವಾಗಿ ಯಾರೂ ಮಾತಾಡುವಹಾಗಿಲ್ಲ. ಮಾತಾಡಿದರೆ 'ಓಹೋ ಇಂತಹ ಒತ್ಕಳಿಯ ಮನುಷ್ಯರಿಂದಲೇ ಗ್ರಾಮದಲ್ಲಿ ಪುಂಡು ಹೆಚ್ಚಾಗಿದೆ' ಎಂದು ಇಬ್ಬರಿಗೂ ಶಿಕ್ಷೆ ವಿಧಿಸುತ್ತಿದ್ದರು. ನಾಡುಗೌಡನ ಪಂಚಾಯ್ತಿಯಲ್ಲಿ ಫಿರ್ಯಾದಿ ಅಪರಾಧಿಗಳಿಬ್ಬರೂ ತಮ್ಮತಮ್ಮ ಪರವಾಗಿ ವಾದಿಸುವವರನ್ನು ನೇಮಿಸಿಕೊಳ್ಳುವ ಅಧಿಕಾರವಿತ್ತು. ಮೂರು ದಿನ ನಾಲ್ಕುದಿನಗಳು ಅಲ್ಲೇ ವಾದವಿವಾದವಾಗಿ ಕಡೆಗೆ ನಾಡುಗೌಡನ ಮಾತೇ ನಿರ್ಣಯವಾಗಿ ಉಭಯತ್ರರೂ ಅದಕ್ಕೆ ಒಪ್ಪಿಕೊಳ್ಳುತ್ತಿದ್ದರು. ಅದಕ್ಕೂ ಮೀರಿದ ವ್ಯಾಜ್ಯವು **ಮೇಲುನಾಡುಗೌಡನಲ್ಲಿಗೆ** ಹೋಗುತ್ತಿತ್ತು. ಆ ಮೇಲುನಾಡುಗೌಡನು ನ್ಯಾಯವಿಚಾರಣೆಗೆ ಬೆಟ್ಟದ ತಪ್ಪಲು ಕಾಡಿನಬೈಲು ನದಿಯತೀರ ಮುಂತಾದ ಕಡೆ ಬೀಡು ಬಿಡುತ್ತಿದ್ದನು. ಅವನ ಮತ್ತು ಅವನ ಜೊತೆಯಲ್ಲಿ ಬರುವವರ ಖರ್ಚನ್ನು ಫಿರ್ಯಾದಿಯೇ ವಹಿಸಬೇಕಾಗಿತ್ತು. ದಿನಕ್ಕೆ ಮೂರು ಖಂಡುಗ ಅಕ್ಕಿ ಹಾಕಿದರೂ ಸಾಲುತ್ತಿರಲಿಲ್ಲ. ಆ ಕೂಟಕ್ಕೆ ಹೊಗೇಸೊಪ್ಪು ಎಲೆ ಅಡಿಕೆ ಸಕ್ಕರೆ ಸುಣ್ಣ ಮುಂತಾದ ತೆವಲು ಸಾಮಾನುಗಳನ್ನೊದಗಿಸಲು ಮುನ್ನೂರು ರೂಪಾಯಿಗಳೇ ಕನಿಷ್ಟಪಕ್ಷ. ಅದೂ ನಾಲ್ಕೈದು ದಿನಗಳು ಸಾಗುತ್ತಿತ್ತು. ಅಡ್ಡಪ್ರಶ್ನೆಗಳಿಂದ, ಸಾಕ್ಷಿಗಳ ವಿಚಾರಣೆಯಿಂದ, ಗದರಿಸುವಿಕೆಯಿಂದ ನಾನಾ ಉಪಾಯಗಳಿಂದ ನ್ಯಾಯವನ್ನು ಕಂಡು ಹಿಡಿದು ಮೇಲುನಾಡುಗೌಡನು ಕೊನೆಯ ತೀರ್ಮಾನ ಹೇಳಿಬಿಡುತ್ತಿದ್ದನು. ಅದಕ್ಕೂ ಮೀರಿದವರು ಸರ್ಕಾರದ ಪಾಲಾಗುತ್ತಿದ್ದರು. ಮೇಲುನಾಡುಗೌಡನು. ಆಷಾಢ ಶುದ್ಧ ಪ್ರಥಮೈಕಾದಶಿಯ ದಿನ ತನ್ನ ಸ್ವಂತ ಖರ್ಚಿನಿಂದ ಎಲ್ಲಾದರೊಂದು ಕಡೆಬೀಡು ಬಿಡುವ ವಾಡಿಕೆ. ಆಗ ಸ್ಥಳದ ಪಂಚಾಯುತಿ, ನಾಡುಗೌಡನ ಪಂಚಾಯುತಿಗಳಲ್ಲಿ ತನಗೆ ವಿರುದ್ಧವಾಗಿ ತೀರ್ಪಾಗಿದ್ದು ತಾವು ನಿಜವಾಗಿಯೂ ತಪ್ಪಿತಸ್ಥರಲ್ಲ ಎಂದು ನಂಬಿರುವ ಬಡವರು ಅಲ್ಲಿಗೆ ಬಂದು ತಮ್ಮ ವಿಷಯಗಳನ್ನು ಹೇಳಬಹುದು. ನ್ಯಾಯ

ವಿಚಾರಣೆಗೂ ಅವಕಾಶ ಸಿಕ್ಕಿ ತೀರ್ಮಾನವಾಗುತ್ತಿತ್ತು. ಆ ದಿನ ನಾಲ್ಕಾರು ಸಾವಿರ ಗೌಡಪ್ರಜೆಗಳು ಸೇರುತ್ತಿದ್ದರು. ಅವರಿಗೆಲ್ಲ ನಾಡುಗೌಡನೇ ಪಾನಕ ನೀರುಮಜ್ಜಿಗೆ ಪಂಚಾಮೃತ ಇವೆಲ್ಲವನ್ನೂ ಯಥೇಷ್ಟವಾಗಿ ಕೊಡುತ್ತಿದ್ದನು. ಆಗಣ ಸಮಯದಲ್ಲಿ ಬೇಜಾರಾದರೆ ನ್ಯಾಯವಿಚಾರಣೆಯನ್ನು ನಿಲ್ಲಿಸಿ, ಕುಸ್ತಿಗಳು, ಕತ್ತಿ ಪಟ್ಟಾವರಸೆಗಳು, ಕೋಲಾಟಗಳು, ಯಕ್ಷಗಾನದ ಆಟಗಳು ಇವುಗಳನ್ನು ಆಡಿಸಿ ಬೇಜಾರು ಕಳೆಯುತ್ತಿದ್ದರು. ಸ್ವಭಾವವಾಗಿ ನಕಲಿಗಾರರಾಗಿರುವವರು ಎಲ್ಲರನ್ನೂ ಗಟ್ಟಿಯಾಗಿ ನಗಿಸುತ್ತಿದ್ದರು. ಆಗ ಆ ಸಭೆಯು ಒಬ್ಬ ಮಹಾರಾಜನ ಅಥವಾ ಮಠಾಧಿಪತಿಯ ದೊಡ್ಡದರ್ಬಾರಿನಂತೆ ಕಾಣುತ್ತಿತ್ತು. ಮೇಲುನಾಡುಗೌಡನ ಸಭೆಯನ್ನು ಸೇರಿಸುವವರು ಊರು ಊರುಗಳ ಜಗಳದವರು ಬಳ್ಳದಲ್ಲಿ ರೂಪಾಯಿ ಅಳೆದುಕೊಂಡು ಪಾಲಾಗುವ ಅಣ್ಣತಮ್ಮಂದಿರು ದೊಡ್ಡ ದೊಡ್ಡ ಜಮೀನಾನ್ದಾರರು ಇವರೇ ವಿಶೇಷ. ಈ ಸ್ಥಳಪಂಚಾಯತಿ, ನಾಡುಗೌಡನ ಸಭೆ, ಮೇಲುನಾಡುಗೌಡನ ಸಭೆ ಇವುಗಳು ಅನೇಕಸಾವಿರ ವರ್ಷಗಳಿಂದಲೂ ನಡೆದುಬಂದಿವೆ. ಯಾರಿಗೆ ರಾಜ್ಯವಾದರೂ ಹಳ್ಳಿಗಳು ಬದಲಾಯಿಸಲಾರವಾದ್ದರಿಂದ ಅವುಗಳ ಸಂಪ್ರದಾಯಗಳೂ ಅನಾದಿಕಾಲದಿಂದ ಹಾಗೆಯೇ ಬಂದಿರುತ್ತವೆ.

ಹೆಂಗಸು ತನ್ನ ಗಂಡ ಸತ್ತಮೇಲೆ ಭಿನ್ನಜಾತಿಯ ಪುರುಷನಲ್ಲೇ ಆಸಕ್ತಳಾಗಿರುವುದು ಪತ್ತೆಯಾಗಿ ಸಾಕ್ಷಿಗಳೂ ದೊರೆತರೆ ಆಗ ಮುಖಂಡರು ಅವಳನ್ನು ಕರೆಸಿ ಅವನನ್ನೇ ತಾಲೀಕಟ್ಟಿಕೊ, ಇಲ್ಲದಿದ್ದರೆ ದಂಡ ಕೊಟ್ಟು ಕುಲಕ್ಕೆ ಸೇರಿಕೊ, ಯಾವುದಕ್ಕೂ ಒಪ್ಪದಿದ್ದರೆ ಜಾತಿಯಿಂದ ತೆಗೆದುಹಾಕುತ್ತೇವೆ ಎನ್ನುತ್ತಿದ್ದರು. ಆಗ ಅವಳು ಕುಲವನ್ನೇ ಸೇರಿಕೊಳ್ಳುವುದಕ್ಕೆ ಒಪ್ಪಿದರೆ ಬ್ರಾಹ್ಮಣ ಪುರೋಹಿತರನ್ನು ಕರೆಸಿ ಹವನ ಹೋಮಗಳಾದ ಮೇಲೆ ಪಂಚಗವ್ಯವನ್ನು ಅವಳ ಮೇಲೆ ಪ್ರೋಕ್ಷಿಸಿ ಹೊಟ್ಟೆಗೂ ಕುಡಿಸುತ್ತಿದ್ದರು. ಅನಂತರ ಬೆಳ್ಳಿಯಸೂಜಿ, ಚಿನ್ನದಸೂಜಿ ಪಂಚಲೋಹದ ಸೂಜಿಗಳನ್ನು ಕಾಯಿಸಿ ಅವಳ ನಾಲಿಗೆಯ ಮೇಲೆ ಅಡ್ಡಲಾಗಿ ಮೂರು ಬರೆ ಉದ್ದವಾಗಿ ಮೂರು ಬರೆ ಹಾಕಿ ಬಾಯಿಯ ಹೊರಗೆ ಸುತ್ತಲೂ ಮುಖದ ಮೇಲೆ ಮೂರು ಬರೆ ಎಳೆಯುತ್ತಿದ್ದರು. ಅನಂತರ ಅವರ ಜನಗಳಿಗೆ ಅಡಿಗೆ ಮಾಡಿಸಿ ಅವಳೇ ನಾಲ್ಕಾರು ಜನ ಮುಖಂಡರಿಗೆ ಬಡಿಸಬೇಕು. ಎಲ್ಲರಿಗೂ ಬಡಿಸಿದ ಮೇಲೆ ಧೂಪಾ

ರತಿ ತೆಗೆದುಕೊಂಡು ಸಭೆಗೆಲ್ಲಾ ಬೆಳಗಿ ನಮಸ್ಕಾರ ಮಾಡಿದ ಮೇಲೆ ಅವಳು ಶುದ್ಧಳಾಗುತ್ತಿದ್ದಳು. ಕೀಳುಜಾತಿಯವರನ್ನಿಟ್ಟುಕೊಂಡರೆ ಕುಲಕ್ಕೆ ಸೇರಿಸುತ್ತಲೇ ಇರಲಿಲ್ಲ.

ಒಟ್ಟಿನಲ್ಲಿ ನಮ್ಮೂರ ರೈತರು ಒಂದು ಹಿಡಿತದಿಂದ ಊರನ್ನು ಆಳುತ್ತಿದ್ದರು. ಯಾರೊಬ್ಬರೂ ಕೆಟ್ಟಕೆಲಸ ಮಾಡಲು ಅಂಜುತ್ತಿದ್ದರು. ಸಾಕ್ಷಿಗಳಿಲ್ಲದ ವ್ಯಾಜ್ಯಕ್ಕೆ ಬೆಲೆಯು ಕಮ್ಮಿಯಾಗಿತ್ತು. ಗೌಡಪ್ರಜೆಗಳಲ್ಲಿ ಗಂಗಡಿಕಾರ ಗೌಡ, ಈಡಿಗೌಡ, ಉಪ್ಪಾರಗೌಡ, ಕುಡೇಸಾಲು ಒಕ್ಕಲಿಗ, ಬೆಳ್ಳಾಳು ಒಕ್ಕಲಿಗ, ಸಪ್ಪೇ (ಮಾಂಸ ವರ್ಜಿತ) ಒಕ್ಕಲಿಗ ಮುಂತಾದ ಭೇದಗಳಿದ್ದವು. ನಮ್ಮೂರಲ್ಲಿ ಇದ್ದವರೆಲ್ಲ ಗಂಗಡಿಕಾರ ಒಕ್ಕಲಿಗರೇ ಆಗಿದ್ದರು. ಸಪ್ಪೇ ಒಕ್ಕಲಿಗರನ್ನು ಬಿಟ್ಟರೆ ಇವರೇ ಉಳಿದ ಗೌಡಜಾತಿಯಲ್ಲಿ ಶ್ರೇಷ್ಠ. ಇವರಲ್ಲಿ ಹನುಮಂತರಾಯನ ಒಕ್ಕಲು, ತಿರುಪತಿ ವೆಂಕಟರಮಣಸ್ವಾಮಿಯ ಒಕ್ಕಲು, ನಂಜುಂಡೇಶ್ವರಸ್ವಾಮಿ ಒಕ್ಕಲು, ಭೈರವನ ಒಕ್ಕಲು ಇತ್ಯಾದಿ ಒಳಗುಂಪುಗಳಿದ್ದವು. ಒಬ್ಬ ಪ್ರಸಿದ್ಧಪುರುಷನಿಂದ ಅವರ ಮಕ್ಕಳು ಮೊಮ್ಮಕ್ಕಳುಗಳನ್ನು ಇಂತವರ ತೆಂಡೆ. ವಟಾರ, ಪಟ್ಟಡೆ ಎಂಬುದಾಗಿ ಕರೆಯುವ ವಾಡಿಕೆ. ಒಂದು ವಟಾರದಿಂದ ಇನ್ನೊಂದು ವಟಾರಕ್ಕೆ ಕೊಡುವಳಿ ತರುವಳಿ (ಹೆಣ್ಣು ಕೊಡುವುದು ತರುವುದು) ಉಂಟು. ಪ್ರತಿಯೊಂದು ವಟಾರಕ್ಕೂ ಒಂದೊಂದು ಹೆಣ್ಣುದೇವರುಂಟು. ಬಾಚ್ಚಳ್ಳಮ್ಮ, ಕಿಕ್ಕೇರಮ್ಮ, ಹೊನ್ನಾಲದಮ್ಮ, ಲಕ್ಷ್ಮೀದೇವಿ ಇತ್ಯಾದಿ ಒಂದೇ ಗಂಡುದೇವರ ಒಕ್ಕಲಾಗಿದ್ದರೂ ಹೆಣ್ಣುದೇವರು ಬೇರೆಬೇರೆಯಾಗಿದ್ದರೆ ನೆಂಟು ಮಾಡುವುದುಂಟು. ನೂರಾರು ಮೈಲಿ ಆಚೆ ಇದ್ದು ಅಲ್ಲಿಯವರು ಒಂದೇ ಗಂಡು ಹೆಣ್ಣುದೇವರುಗಳ ಒಕ್ಕಲಾಗಿದ್ದರೆ ಅವರೂ ಒಂದೇ ತೆಂಡೆಯವರೆಂದೇ ತಿಳಿದು ನೆಂಟುಮಾಡಲು ಇಷ್ಟಪಡುತ್ತಿರಲಿಲ್ಲ. ಕೆಲವರು ನೀರು ಅಡ್ಡಲಾಗಿ ಹರಿಯುತ್ತಿದ್ದು ಆಚೆ ದೇಶದವರು ನೂರಾರು ವರ್ಷಗಳಿಂದ ಬಳಿಕೆ ಮಾಡದಿದ್ದರೆ ಅಂತಹಕಡೆ ತರಬಹುದು ಎಂದು ಹೇಳುತ್ತಿದ್ದರು. ಬಹಳವಾಗಿ ಮೂರು ನಾಲ್ಕು ಮೈಲಿಗಳ ಆಚೆಗೆ ಕೊಡುವುದು ತರುವುದೇ ಅಪರೂಪ. ಗಂಡು ಹೆಣ್ಣುಗಳ ಜಾತಕಾನುಕೂಲ (ಹೆಸರುಬಲ) ವನ್ನು ಕೇಳುವಾಗ ದೇವರುಗಳಿಗೂ ಪರಸ್ಪರ ಹೊಂದಿಕೆಯನ್ನು ಕೇಳುತ್ತಿದ್ದರು.



## ಧರ್ಮದಕೆಲಸ.

ನಮ್ಮ ಮಹಾರಾಜರ ವರ್ಧಂತಿಯದಿನ ತಪ್ಪದೆ ತೋಪು (ಮರಗಳ ಗುಂಪು) ನಡುತ್ತಿದ್ದರು. ಸಾಲುಮರ, ಕೆರೆ ಕಟ್ಟೆ, ಸೋಪಾನಗಳನ್ನು ಆಗಾಗ್ಗೆ ಏರ್ಪಡಿಸುತ್ತಿದ್ದರು. ಒಬ್ಬನು ಹೊಸದಾಗಿ ಮನೆಕಟ್ಟಿ ಹಂಚರ ಹರಡುವಾಗ ಮನೆಗೊಬ್ಬರುಹೋಗಿ ಒಂದುಗಳಿಗೆಯೊಳಗಾಗಿ ಆ ಕೆಲಸವನ್ನು ಪೂರೈಸಿಬರುವ ವಾಡಿಕೆಯಿತ್ತು. ಐಶ್ವರ್ಯವುಹೆಚ್ಚಿದಂತೆ ಗುಡಿಗೋಪುರಗಳನ್ನು ಕಟ್ಟಿಸುವುದು. ಬಡವರಮದುವೆಗಳಿಗೆ ಸಹಾಯಮಾಡುವುದು ದೇವಸ್ಥಾನಗಳಿಗೆ ಜಮೀನು ದತ್ತಿ ಬಿಡುವುದು ಮುಂತಾದ ಧರ್ಮಕಾರ್ಯಗಳನ್ನು ಮಾಡುತ್ತಿದ್ದರು. ಒಂದು ಆಲೇಮನೆ (ಕಬ್ಬಿನಗಾಣ) ಕಟ್ಟಿದರೆ ಅಲ್ಲಿಗೆ ಬಂದವರು ಕಬ್ಬಿನಹಾಲುಕುಡಿದು ಬಿಸೀಬೆಲ್ಲ ಕಾಕಂಬಿಗಳನ್ನು ತಿಂದು ಕೈಯಲ್ಲಿ ಒಂದು ಕಬ್ಬಿನಜಲ್ಲೆ ಹಿಡಿದುಕೊಂಡು ಹೋದರೆ ಯಜಮಾನನಿಗೆ ಬಲುಸಂತೋಷ

## ಬೇಟೆ

ನಮ್ಮೂರಿಗೆ ಹತ್ತಿರವಾಗಿಯೇ ಪೂರ್ವದಿಕ್ಕಿನಲ್ಲಿ ಹೇಮಗಿರಿಬೆಟ್ಟ, ಬೆಳ್ಳಿಬೆಟ್ಟ, ಹುಂಜನಗುಡ್ಡ, ಕಾಕನಗುಡ್ಡ, ಕುರುಚಲುಗಿಡ ಮುಂತಾದುವುಗಳಿದ್ದು ಅವುಗಳಲ್ಲಿ ಕಾಡುಹಂದಿ, ಜಿಂಕೆ, ಕಿರುಬ, (ಕೆಲವುಸಲ ಚಿರತೆಯೂ ಸಿಕ್ಕುವುದುಂಟು) ಮುಂತಾದ ಪ್ರಾಣಿಗಳು ಸೇರಿಕೊಂಡಿದ್ದವು. ಆದ್ದರಿಂದಲೇ ನಮ್ಮ ರೈತರಿಗೆ ಬೇಟೆಯ ಆಟವು ಬಲುಹಿತಕಾರಿಯಾಗಿದೆ. ಆ ಮೃಗಗಳು ಹಗಲು ಸುಮ್ಮನಿದ್ದು ರಾತ್ರಿಕಾಲದಲ್ಲಿ ಹೊಲ ಗದ್ದೆಗಳ ಪೈರುಗಳನ್ನು ಹಾಳುಮಾಡುತ್ತಿದ್ದವು. ಅದರ ಕಾಟವನ್ನು ತಪ್ಪಿಸುವುದಕ್ಕಾಗಿ ಪ್ರತಿಯೊಬ್ಬರೂ ಒಂದೊಂದು ಬಲೆ, ಒಂದೊಂದು ಈಟಿಯನ್ನು ಮನೆಯೊಳಗೆ ತೂಗುಹಾಕಿಕೊಂಡೇ ಇರುತ್ತಿದ್ದರು. ಯಾರಾದರೊಬ್ಬರು ತಮ್ಮ ಹೊಲಗಳಲ್ಲಿರುವ ಹಂದಿಗಳ ಹೆಜ್ಜೇಗುರುತನ್ನು ನೋಡಿ ಓಹೋ ಹಂದಿಗಳು ಬಂದಿವೆ, ಅಪ್ಪಾರ ಹಂದಿಗಳು ಬಂದಿವೆಯೆಂದು ಊರೊಳಗೆಲ್ಲಾ ಗುಲ್ಲೆಬ್ಬಿಸುವರು. ಗ್ರಾಮದ ಮುಖಂಡರು ಕುಲವಾಡಿ

ಯನ್ನು ಕರೆಸಿ ಬೇಟೆಗಾಗಿ ಸಾರೆಂದು ಹೇಳುವರು. ಅವನು ತಮಟೆಯನ್ನು ಹೊಡೆದು "ಎಲ್ಲಾ ರಾತ್ರಿಗೆ ಮನ್ಗೊಂದಾಳು ಬಲೆ, ಈಟಿ, ಬುತ್ತಿ ತಗೊಂಡು ಬಂದು ಹನ್ಮಂತ್ರಾಯ್ನ ಗುಡೀಲಿ ಮಲ್ಗಿದ್ದು ಹೊತ್ನಾರೆ ಕೋಳ್ಕೂಗೋಹೊತ್ಗೆ ಗಿಡ್ಕೆ ಬೇಟ್ಗೋಗ್ಬೇಕು. ಬರ್ದಿದ್ರೆ ನಾಕಾಣೆ ದಂಡಾಕೊಡ್ಬೇಕು ಸಾರ್ಲಿಲ್ಲಾ ಅಂದೀರ್ಯಾಗ್ಹೈರ್ಯೋ........" ಎಂದು ಊರಲ್ಲೆಲ್ಲಾ ಸಾರುವನು. ಬೇಟೆಗಾಗಿ ಮನೆಗೆ ಒಂದಾಳಿನಂತೆ ಹೊರಡುವರು. ಮನೆಯೊಳಗೆ ಹೆಂಗಸರು ರಾಗಿರೊಟ್ಟಿಗಳನ್ನು ತಟ್ಟಿ ಚಟಣಿ ಅರೆದು ಹಾಕಿ ಬುತ್ತಿ ಕಟ್ಟಿಕೊಡುವರು. ಗಂಡಾಳು ಬಲೆ, ಈಟಿ, ದೊಣ್ಣೆ, ಬುತ್ತಿ ಸಹಿತ ದೇವರ ಗುಡಿಗೆ ಬಂದು ಮಲಗುವರು. ಕೋಳಿ ಕೂಗುವ ಹೊತ್ತಿಗೆ ಪಟೇಲನು ಎಲ್ಲರನ್ನೂ ಕೂಗಿ ಎಳಿಸಿ ದೇವರಿಗೆ ಹಣ್ಣುಕಾಯಿ ಮಾಡಿಸಿ (ಪೂಜೆ ಮಾಡಿಸಿ) ನಮ್ಮಪ್ಪಾ, ಬೇಟೆ ಸಿಕ್ಕುವಂತೆ ಮಾಡು ಎಂದು ಬೇಡಿಕೊಳ್ಳುವನು. ತಮಟೆ ಕೊಂಬುಗಳ ಧ್ವನಿಯಾಗುವುದು ಎಲ್ಲರೂ ಬೆಟ್ಟದ ತಪ್ಪಲಲ್ಲಿ ಹೋಗಿ ಅಲ್ಲಿ ಬಲೆ ಒಡ್ಡುವ ಜಾಗವನ್ನು ನಿರ್ಣಯಿಸ [illegible] ತನ್ನ ಮನೆಯಲ್ಲಿಲ್ಲದ ಆಳು ಬೇರೆ ಊರಿನಿಂದ ಎರವಲಾಗಿ ತರುತ್ತಿದ [illegible] ನಡೆದ ಹಂದೀಬೇಟೆಗೆ ನೋಡಲು ನಾವೂ ಹೋಗಿದ್ದೆವು. ಒಂದು [illegible] ಜಾಗಕ್ಕೆ ಹೋಗಿ ಮೂಟೆಯಂತೆ ಕಟ್ಟಿದ್ದ ಬಲೆಯನ್ನು ಬಿಚ್ಚಿ [illegible] ಅದು ಮುನ್ನೂರು ಗಜ ದೂರವಾಯಿತು. ಅನಂತರ ಒಲೆಯ ಕೆಳಗಡೆ [illegible] ಅಂಚು ಆ ಅಂಚುಗಳ ತುದಿಯಲ್ಲಿ ಕಟ್ಟಿರುವ **ಬಗ್ರಿ** ಹಗ್ಗವನ್ನು ಹತ್ತುಹತ್ತು ಮಾರು ದೂರಕ್ಕೆ ಎಳೆದು ಭಂಡೆಗಳಿಗೂ ಕುರುಚಲು ಗಿಡಿದ ಬುಡಗಳಿಗೂ ಕಟ್ಟಿದರು. **ಆಣಿ** ಯಿಂದ (ಕತ್ತರಿಯಂತೆ ಸೇರಿಸಿರುವ ಬಿದರಿನ ದೊಣ್ಣೆಗಳು) ಬಲೆಯ ತುದಿಯನ್ನು ಮೇಲಕ್ಕೆ ಎತ್ತಿದರು. ಒಂದು ನಿಮಿಷದಲ್ಲಿ ಬಲೆಯ ಗೋಡೆಯು ನಿಂತಿತು, ಒಡನೆ ಹನ್ನೆರಡು ಜನ ಧೈರ್ಯಶಾಲಿಗಳು ಬಲೆಯನ್ನು ಪೂರ್ವಕ್ಕೆ ಬಿಟ್ಟು ಪಶ್ಚಿಮ ದಿಕ್ಕಿಗೆ ಒಲೆಗೆದುರಾಗಿ ಹತ್ತುಮಾರು ದೂರದಲ್ಲಿ ಕೂತರು ಇವರಿಗೆ **ಉಳಿಯಾಳೆಂದು** ಹೆಸರು. ಅವರಿಗೆ ಹಿಂದೆ ಹತ್ತುಮಾರು ದೂರದಲ್ಲಿ ಅಷ್ಟೇ ಜನ **ಅಟ್ಟೈಳಿಯಾಳುಗಳು** ಕೂತರು. ಬಲೆಯ ಈಕಡೆ ತುದಿ ಆಕಡೆ ತುದಿಯಿಂದ ಆರ [illegible] ಮಾರಿಗೆ ಒಬ್ಬರಂತೆ **ಅಂಚೆಯಾಳುಗಳು** ಒಂದು [illegible] ರು. ಅವರನ್ನು ನೋಡಿದರೆ ಮೃತ್ಯುವು ಹಂದಿಯನ್ನು ನುಂಗಲು ನೀಡಿದ ಕೈಗಳಂತೆ ಕಾಣುತ್ತಿದ್ದರು. ಪ್ರತಿಯೊಬ್ಬರೂ ಕುರುಚಲು ಗಿಡವನ್ನು ಮರೆಮಾಡಿ

4

ಕೊಂಡರು. ಈಟಿಯನ್ನು ಸರಿಯಾಗಿ ಹಿಡಿದುಕೊಂಡರು. ಬೆನ್ನಿಗೆ ಕಟ್ಟಿದ ರೊಟ್ಟಿಯು ಗುರಾಣಿಯಂತಿತ್ತು. ಉಳಿದವರು ಎದುರು ಬೆಟ್ಟದಮೇಲೆ ಹೋಗಿ ಕೊಂಬು ತಮಟೆಯ ಧ್ವನಿ ಹಾಹೂ ಎಂಬ ಧ್ವನಿಗಳಿಂದ **ತಲೆಕೂಗನ್ನು** (ದೊಡ್ಡ ಗದ್ದಲ) ಆರಂಭಿಸಿದರು. ದೊಣ್ಣೆಗಳಿಂದ ಪೊದೆಗಳನ್ನು ಬಡಿದರು, ಸ್ವಲ್ಪ ಹೊತ್ತು ಏನೂ ಕಾಣಿಸಲಿಲ್ಲ. ಒಂದು ಕ್ಷಣ ಕಳೆಯಿತು, ಇದ್ದಕ್ಕಿದ್ದಹಾಗೆ ಕೆಂಧೂಳೆದ್ದಿತು ತಲೆ ಕೂಗಿಸವರು ಹೊ ಹೊ ಹೊ ಹಂದಿ ಎದ್ದದೆ, ಹಂದಿ ಹಂದಿ ಎಂದು ಕೂಗಿದರು. ಹಂದಿಯು ಬಲುಕೋಪದಿಂದ ಬರುತ್ತಿತ್ತು. ಅದು ಬರುವ ಝೂರಿಗೆ ಗುಂಡಾದ ಕಲ್ಲುಗಳು ಕಟಕಟನೆ ಪುಟ ನೆಗೆಯುತ್ತಿದ್ದವು. ಪೊದೆಗಳೆಲ್ಲಾ ಪುಡಿ ಪುಡಿ. ಕೆಂಧೂಳು ಎರಡಾಳುದ್ದದ ಮೇಲೆ ವ್ಯಾಪಿಸಿತು. ಹೆಗಲಮೇಲಿದ್ದ ಕೂದಲುಗಳು ದಬ್ಬಳಗಳನ್ನು ನೆಟ್ಟಂತೆ ಕಾಣುತ್ತಿದ್ದವು, ಭೂಮಿಯು ಗಡಗಡನೆ ನಡುಗುತ್ತಿತ್ತು. ಆ ಹಂದಿಯ ಘುರುಘುರು ಎಂಬ ನಿಟ್ಟುಸುರೂ ಕೆಂಪಾದ ಕಣ್ಣಿನ ಗಂಭೀರವೂ ಓರೆಯೂ ಆದ ನೋಟವೂ, ಸುರಳಿಸುತ್ತಿಕೊಂಡ ಬಿಳಿದಾದ ಕೋರೆಯೂ ಮರದ ಮೇಲಿದ್ದ ನಮಗೆ "ಆದಿ ವರಾಹಸ್ವಾಮಿಯು ಇಷ್ಟೆಷ್ಟು ಭಯಂಕರನಾಗಿದ್ದನೊ ! " ಅನ್ನಿಸುವಂತಿತ್ತು. ಹಂದಿಯು ಅಡ್ಡದಾರಿ ಹಿಡಿದು ಬಲಗಡೆಗೆ ತಿರುಗಿತು, ಹತ್ತಿರದ ಗಿಡದಮರೆಯಲ್ಲಿ ಕುಳಿತಿದ್ದ ಅಂಚೆಯಾಳು ಕೈಲಿದ್ದ ಸೊಪ್ಪಿನ ಕಸಪರಿಕೆಯಿಂದ ನೆಲವನ್ನು ತಟ್ಟಿದನು. ಹಂದಿಯು ಆ ದಾರಿಯನ್ನು ಬಿಟ್ಟು ಎಡಕ್ಕೆ ತಿರುಗಿತು. ಅಲ್ಲಿಯೂ ಸದ್ದಾಯಿತು, ಹಂದಿಯು ಬಾವಿಯಲ್ಲಿ ಬೀಳುವ ಕಲ್ಲಿನಂತೆ ಬಲೆಯ ಸಮೀಪಕ್ಕೆ ಬಂದಿತು. ಮುಂದಿರುವ ಬಲೆಯನ್ನು ಸೀಳಿಬಿಡಬೇಕೆಂದು ಮೂತಿಯನ್ನು ಮುಂದೂಡಿ ಬಲೆಯಕಣ್ಣಿನಲ್ಲಿ ಸಿಕ್ಕಿಕೊಂಡಿತು ಆದರೂ ಬಿಡದೆ ಬಲೆಯನ್ನು ಕತ್ತಿನಿಂದಲೇ ಅಳ್ಳಾಡಿಸಿತು ಆ ವೇಗಕ್ಕೆ ಬಲೆಯನ್ನು ಎತ್ತಿ ಹಿಡಿದಿದ್ದ ಮೆಣೆಯು ಚಿಣ್ಣನೆ ಹಾರಿ ಸಮಗ್ರಬಲೆಯು ಹಂದಿಯ ಮೇಲೆ ಬಿತ್ತು, ಅಷ್ಟರಲ್ಲೇ ಉಳಿಯಾಳುಗಳಲ್ಲಿ ಒಬ್ಬನು ತನ್ನ ಈಟಿಯಿಂದ ಪೊಡೆದು ಹಂದಿಯನ್ನು ಮೆಟ್ಟಿಹಿಡಿದನು. ಅಟ್ಟುಳಿಯಾಳುಗಳು ಹೊಡಿ ಹೊಡಿ ಬಿಡಬೇಡ ಎಂದು ಧೈರ್ಯ ಹೇಳುತ್ತಾ ಹಿಂದಿನಿಂದ ಬಂದರು. ಎಲ್ಲರೂ ಸೇರಿ ಭತ್ತ ಕುಟ್ಟುವ ಒನಕೆಗಳಂತಿದ್ದ ಈಟಿಗಳಿಂದ ತಿವಿದರು.

ಅವರವರ ಬಲೆಗಳನ್ನು ಅವರವರು ಮಡಿಸಿ ಹೊತ್ತುಕೊಂಡರು. ಇಷ್ಟೆಲ್ಲ ಅರ್ಧಘಂಟೆಯೊಳಗಾಗಿ ಆಗಿಹೋಯಿತು. ಹಂದಿಯ ಬೆನ್ನಿನ ಭೀಮಕ್ಕೆ (ದಪ್ಪನರ)

ಮೂರು ಈಟಿಯನ್ನು ಸೆರಿದು ಆರು ಜನರು ಹೊತ್ತುಕೊಂಡರು. ಊರೊಳಗೆ ಕೊಂಬು ತಮಟೆ ಸಹಿತ ಮೆರೆವಣಿಗೆಯಾಯಿತು, ಮೊದಲಿಟ್ಟಿಯವನಿಗೆ ಎರಡು ಪಾಲು (ಮಾಂಸ) ಪರಮಾನ ಬಂತಂತೆ.

ಬೇಟೆಗೆ ಹೋದಾಗ ಬಲೆಯನ್ನು ತಾರದಿದ್ದರೆ ಮಾಂಸದ ಭಾಗಾಂಶವು ಸ್ವಲ್ಪ ಕಮ್ಮಿ, ಮುದುಕರಾಗಿ ಬೇಟೆಗೆ ಬಾರದೆ ತಮ್ಮ ಮನೆಯ ಬಲೆಯನ್ನು ಕೊಟ್ಟು ಕಳುಹಿಸಿದ್ದರೆ ಅವರಿಗೂ ಒಂದು ಪಾಲು ಸಲ್ಲುತ್ತಿತ್ತು. ಕೆಲವು ಸಲ ಬೇಟೆಗೆ ಹೋದರೆ ಮೂರು ನಾಲ್ಕು ದಿನಗಳಾದರೂ ಬರುತ್ತಿರಲಿಲ್ಲ, ಬೇಟೆಯಾಗದಿದ್ದರೆ ಯಾರೋ ತಡೆಕಟ್ಟಿರುವರು ಅದನ್ನು ಬಿಡಿಸಬೇಕೆಂದು ಮಂತ್ರವಾದಿಯ ಬಳಿಗೆ ಹೋಗಿ ಆ ಶಾಸ್ತ್ರವನ್ನು ನೆರವೇರಿಸುತ್ತಿದ್ದರು. ತಲೆಕೂಗಿನವರೂ ಅಂಚೆಯಾಳು ಗಳೂ ಸರಿಯಾಗಿ ಕೆಲಸಮಾಡಿ ಬಲೆಯ ಬಳಿಗೆ ತಂದ ಹಂದಿಯನ್ನಾಗಲಿ ಇನ್ಯಾವ ಬೇಟೆಯನ್ನಾಗಲಿ ಉಳಿಯಾಳು ಅಥವಾ ಅಟ್ಟುಳಿಯಾಳು ಬಿಟ್ಟುಬಿಟ್ಟರೆ ಅವರನ್ನು ಎಲ್ಲರೂ ಪಾಟಾಪಾಟುಗೋಚರವಾಗಿ ಬೈದು ಅಲ್ಲೇ ಪಂಚಾಯಿತಿಮಾಡಿ ಮೃಗದ ಬೆಲೆಯನ್ನು ಅಂದಾಜಿನಮೇಲೆ ಕಟ್ಟಿ ಆ ದುಡ್ಡನ್ನು ಉಳಿಯಾಳು ಅಥವಾ ಯಾರು ಬಿಟ್ಟರೋ ಅವರು ಕೊಡಬೇಕೆಂದು ಹೇಳಿ ತೆಗೆದುಕೊಳ್ಳುತ್ತಿದ್ದರು. ಅಂಚೆಯಾಳುಗಳು ಬಿಟ್ಟರೆ ಅವರಿಗೂ ಇದೇಗತಿ. ಬೇಟೆಯು ಸಿಕ್ಕಿದರೆ- ಸಿಪಾಯಿ. ಬಿಟ್ಟರೆ- ಭಿಕಾರಿ ಎನ್ನುವರು. ಬೇಟೆಯಾಗದಿದ್ದರೆ ಊರಿಗೆ ಆಳುಗಳು ಬಂದದ್ದೇ ಪತ್ತೆಯಾಗುತ್ತಿರಲಿಲ್ಲ. ಶ್ರಾವಣಮಾಸದಲ್ಲಿ ಬೇಟೆಯನ್ನು ನಿಷೇಧಿಸಿದ್ದರು. ಈ ಬೇಟೆಗೆ ರಾಜಬೇಟೆ, ಎಂದು ಹೆಸರು ನದಿಯಲ್ಲಿ ಗಾಣಹಾಕಿ ಮೀನಿನ ಬೇಟೆಯಾಡುವುದು ವಾಡಿಕೆ, ಬಲೆಯನ್ನು ಬೀಸಿ ಮೀನು ಹಿಡಿದರೆ ಲೊ ಬೆಸ್ತ. ಲೊ ಬೋಯಿ ಎಂದು ಅವನನ್ನು ಅವಮಾನಪಡಿಸುತ್ತಿದ್ದರು. ವಿರಾಮವಾದಾಗ ಸಣ್ಣ ಬಲೆಗಳನ್ನು ತೆಗೆದುಕೊಂಡುಹೋಗಿ ನಾಲ್ಕಾರು ಜನರು ಮೊಲದಬೇಟೆಯಾಡು ವರು. ಊರೊಟ್ಟಿಗೆ- ಮೊಲದ- ಬೇಟೆಗೆ ಹೋಗುವುದೂ ಉಂಟು, ಯಾವುದಾದ ರೊಂದು ವಿಶೇಷಸಂದರ್ಭಗಳಲ್ಲಿ ದೇವಸ್ಥಾನಗಳಲ್ಲೆಲ್ಲಾ ನಂದಾದೀಪ (ಅಖಂಡಲ ದೀಪ) ಇರಿಸಿದರೆ ಆಗ ಯಾರೂ ಆ ದೀಪದ ಹಾಯಿದೆ ಇರುವತನಕ ಮಾಂಸಾದಿ ಗಳನ್ನು ಮುಟ್ಟುತ್ತಿರಲಿಲ್ಲ. ಮೆಣಸಿನಕಾಯನ್ನೂ ಸಹ ಊರಹೊರಗೆ ಸುಟ್ಟು ಕೊಂಡು ಒಂದು ಖಾರ ಅರೆಯುತ್ತಿದ್ದರು ಬಾಯಿಚಪಲದವರು ಏನಾದರೂ ಮಾಡಿಕೊಂಡು ತಿಂದದ್ದು ಪತ್ತೆಯಾದರೆ ನಂದಾದೀಪದ ಖರ್ಚನ್ನೆಲ್ಲಾ ಅವನೊ

ಬ್ಬಸೇ ದಂಡವಾಗಿ ತೆರಬೇಕಾಗಿತ್ತು. ಜಿಂಕೆಗಳನ್ನು ಋಷಿಮೃಗವೆಂದು ತಿನ್ನುತ್ತಿರಲಿಲ್ಲ, ನವಿಲುಗಳು ಹೇರಳವಾಗಿದ್ದವು. ಆದರೆ ಸರ್ಕಾರಿನಿರ್ಬಂಧವಿದ್ದುದರಿಂದ ಕಂಡೂಕಾಣದಂತೆ--|

## ರಂಗದಹಬ್ಬ- (ಸುಗ್ಗಿಯಕುಣಿತ)

ಮಾಘ ಬಹುಳದಶಮಿಾಹೊತ್ತಿಗೆ ಶಿವರಾತ್ರೆಗೆಮುಂದಾಗಿ ರಂಗಕುಣಿಯುವ ಜಾಗದಲ್ಲಿ ಕರಕು (ಬೆಳಕಿಗಾಗಿ ಹಾಕುವ ಅಗ್ನಿ) ಹಾಕುತ್ತಿದ್ದರು. ಚೈತ್ರಮಾಸ ಮುಗಿಯುವವರೆಗೂ ವಿರಾಮವಾದವರುಹೋಗಿ ಕಾಲಿಗೆಗೆಜ್ಜೆಕಟ್ಟಿಕೊಂಡು ರಂಗಕುಣಿಯುವರು. ಹೊಲೆಯರು- ರಂಗದಹಬ್ಬ ಮುಗಿಯುವವರೆಗೆ ಪ್ರತಿದಿನವೂ ರಾತ್ರಿಯಹೊತ್ತು- ಯಾರುಬರಲಿ ಒರದೇಇರಲಿ. ತಮ್ಮ ಮಾಮೂಲಿನಂತೆ ಕಬ್ಬಿನತರಗು, ಈಚಲ ಒಣಗರಿ, ಸೋಗೆ, ಇವುಗಳಿಂದ, ಬೆಳಕುಮಾಡೇತೀರಬೇಕು. ರಂಗದಹಬ್ಬವು ಚೈತ್ರ ಬಹುಳ ಅಮವಾಸ್ಯೆಗೆ ನಾಲ್ಕುದಿನ ಮುಂಚೆ ನಡೆಯುತ್ತಿತ್ತು. ಆ ಕಾಲಕ್ಕೆ ಹೆಣ್ಣುಮಕ್ಕಳು, ಅಳಿಯದೇವರುಗಳು ನಂಟರು ಇಷ್ಟರು ಎಲ್ಲರೂ ಒರುವರು. ರಂಗಸ್ಥಳದ ಮಧ್ಯದಲ್ಲಿ ನಾಲ್ಕು ಕಲ್ಲುಕಂಭಗಳ ಮೇಲೆ ಐದು ಅಂತಸ್ತಿನ ಒಂದು ತೇರನ್ನುಕಟ್ಟಿ ಅದರೊಳಗೆ ಆಂಜನೇಯಸ್ವಾಮಿಯನ್ನು ಕೂರಿಸುವರು. ಸುತ್ತಲ ಹಳ್ಳಿಯವರಿಗೆಲ್ಲಾ ಗ್ರಾಮದ ಮುಖಂಡರು ಕಾಗದ ಬರೆದು ಸುಗ್ಗಿಕುಣಿತಕ್ಕಾಗಿ ಕರೆಸಿಕೊಳ್ಳುವರು, ಅವರೂ ತಂಡತಂಡವಾಗಿ ಎಲ್ಲರೂ ಹೊಸವಸ್ತ್ರಗಳನ್ನು ಧರಿಸಿ ತಲೆಗೆ ಮಲ್ಲಿಗೆಮೊಗ್ಗು ಮುಡಿದು ತಾಂಬೂಲಹಾಕಿಕೊಂಡು, ಸಂತೋಷದಿಂದ ತಮಟೇಸದ್ದಿಗೆ ಸರಿಯಾಗಿ ಪಾದವಿನ್ಯಾಸಮಾಡುತ್ತಾ ರಂಗಕುಣಿಯುವರು. ಪದೇಪದೇ ಎಡಗೈಯ್ಯಿನವಸ್ತ್ರವನ್ನು ಮೇಲಕ್ಕೆ ಎತ್ತಿ "ಆಲಣ್ಣಾ ಆಲೋಹೋಹೊಕ್ಕ" ಎನ್ನುತ್ತಿದ್ದರು. ಸುಮಾರು ಅರ್ಧರಾತ್ರಿಯವರೆಗೂ ಕುಣಿದನಂತರ ಅದ್ಭುತವಾದ ನಕಲಿಗಳು ಬಂದು ವಿರಾಮಕೊಡುವುವು. ನಕಲಿಗಳಲ್ಲಿ ಗ್ರಾಮದೋಷಗಳನ್ನೂ ಮುಖಂಡರ ರೀತಿನೀತಿಗಳನ್ನೂ ಅವರಂತಹ ನಡೆನುಡಿಗಳಿಂದ ಜನರಮುಂದಿಡುತ್ತಿದ್ದರು. ಭತ್ತತುಂಬುವ ಕೊಮ್ಮೆಗಳನ್ನು ಮದ್ದಲೆಯೆಂದೂ ಬಿದರುಬೊಂಬುಗಳನ್ನು ಬಿಲ್ಲುಗಳೆಂದೂ ತರುತ್ತಿದ್ದರು. ಕಡೆಯದಿನ ಹಗಲು ಯಾವುದಾದರೊಂದು ಯಕ್ಷಗಾನ ಆಟವೂ, ಗಾರುಡಿಗರ ಆಟ, ದೊಂಬರ ಆಟದ ಅನುಕರಣವೂ ಜೋಗಿಯವೇಷ ಕೊರವಂಜಿಯವೇಷಗಳೂ ದಾಸಯ್ಯನ ವೇಷವೂ ಬರುತ್ತಿತ್ತು. ರಂಗಕ್ಕುಣಿದು ಸ್ವಲ್ಪಬೇಜಾ

ರಾದರೆ ಕೋಲಾಟ ಆಡುತ್ತಿದ್ದರು-ಅವರಿಗೆ ಪಾನಕ ಪಂಚಾಮೃತಗಳನ್ನು ತಿನ್ನಲು ಕೊಡುತ್ತಿದ್ದರು ಅವರವುಗಳನ್ನುಮೆದ್ದು- ತಮ್ಮ ತಮ್ಮ ಜೊತೆಗಾರರೊಡನೆ ಮುಂದಿನ ಪದ್ಯಗಳನ್ನು ಹೇಳಿಕೊಂಡು ಕೋಲಾಟವನ್ನು ನಿಸ್ಸಂಕೋಚ ಮತ್ತು ಪರಮೋತ್ಸಾಹದಿಂದ ಆಡುತ್ತಿದ್ದರು, ಹಿಂದಲಿನವರು ಮಾಡಿರುವ ಕವನಗಳು ಮುಗಿದುಹೋದರೆ ತಾವೇ ಹೊಸಹೊಸದಾಗಿ ಅಲ್ಲೇ ಕವನಗಳನ್ನು ಗತ್ತಿಗೆಸರಿ ಯಾಗಿ ಹೆಣೆಯುತ್ತಿದ್ದರು. ರಂಗದಮೇದಿಯಲ್ಲಿ ಎರಡು ಅಳೀಮೈಯ್ಯನ ಗುಂಡು ಗಳಿದ್ದವು ಒಂದು ಸಣ್ಣದು ಇನ್ನೊಂದು ಅದಕ್ಕೆ ಸ್ವಲ್ಪದೊಡ್ಡದು, ಆ ವರ್ಷ ಹೊಸದಾಗಿ ನಮ್ಮೂರಿಗೆ ಅಳಿಯಂದರಾಗಿ ಬಂದಿರುವವರು ಆ ಗುಂಡುಗಳನ್ನು ಎತ್ತಿ ಮಂಡಿಯಮೇಲಿಟ್ಟುಕೊಂಡು ಅನಂತರ ಅಲ್ಲಿಂದಹೆಗಲ ಮೇಲಿಟ್ಟುಕೊಂಡು ಎದ್ದು ಸರಿಯಾಗಿನಿಂತು ಹಿಂಭಾಗಕ್ಕೆ ಎಸೆಯಬೇಕು. ಇಲ್ಲದೆಹೋದರೆ ಸಪ್ಪೆ ಅಳೀಮೈಯ್ಯ, ಎಂದು ನಮ್ಮೂರ ಹುಡುಗರು ಗೇಲಿಮಾಡಿಬಿಡುತ್ತಿದ್ದರು,

## ಕೋಲಾಟದ ಪದ್ಯಗಳು (ಕಡಾಂಬ್ಗಿ ತಿಪ್ಪೇಗೌಡರಿಂದ)

೧

ಕೋಲೇಕೋಲೇ ಕೋಲು ಕೋಲಣ್ಣಕೋಲೆ | ಕೋಲೇಕೋಲೇ ಕೋಲು ಕೋಲಣ್ಣಕೋಲೆ || ಹೊತ್ತಾಂತೆ ಎದ್ದೂ ಯಾರ್‍ಯಾರನೆನದೇವು | ಕಲ್ಲೂ ಕಾವೇರೀ ಕಪಿನೀಯಕೋಲೆ || ಕಲ್ಲೂ ಕಾವೇರೀ ಕಪ್ನೀಯಬಸ್ವಣ್ಣ | ಹೊತ್ತಾಂತೆ ಎದ್ದೂ ನೆನದೇವುಕೋಲೆ || ಕೋಲೇ || ಪ || ಹತ್ತೂಸಾವಿರ್‍ಪದ್ವ ಎತ್ತಿನ್ಮೇಲ್ಹೇರ್‍ಕೊಂಡು | ಮತ್ತೇಸಾವಿರವಾಕೈಯ್ಯಲ್ಲಿ ಹಿಡಿದೂ || ಆರೂಸಾವಿರ್‍ಪದ್ವ ಹೋರೀ ಮೇಲ್ಹೇರ್‍ಕೊಂ ಡು | ಬಂದೀವ್ನಿ ಬಾರೊ ಬಸ್ವಣ್ಣಸಾಭ್ಗೆ || ಕೋಲೆ || ಕೋಲೀನ್ಮೇಲೊಬ್ಬಾಬಸ್ವಣ್ಣ ಕೂತ್ಕೊಂಡು | ಲಾಲೀಸಿಪದ್ವಾ ಬರ್‍ಕೊಂಡ ಕೋಲೆ || ಚಿಕ್ಕಾಚಿಕ್ಕಾಕೋಲ ಚಿಕ್ಕಾಬಂಡೀತುಂಬಿ | ಚಿತ್ತಾರದಾ ಕೀಲು ಸಡಿಲಾವುಕೋಲೆ || ಅವರಾಡಿ ಇವ ರಾಡಿ ತೋಳಾಡಿ ಭುಜವಾಡಿ | ನಾಗಾರಸೆಡೆಯಂತೆ ನಡುವಾಡಿಕೋಲೆ ನಾಗಾ ರಹೆಡ್ಯಂತೆನಡ್ವಾಡಿಕೋಲೆ || ನಮ್ಮುಟ್ಟೆನೀನಾಡಿದಣ್ದ್ಯಲ್ಲೋಕೋಲೆ | ಕೋಲಾ ಬಿಡ್ತೀವೀಲಾಲಿಸಿಕೇಳಯ್ಯ || ಹಣ್ಣಾಯ ಹೆಡ್ಗೇಹೆಗ್ಲಲ್ಲಿಕೋಲೆ | ಹಣ್ಣಾಯ ಹೆಡ್ಗೇ ಹೊತ್ಕೊಂಡೂಹೋಗಿ || ಮತ್ತೆರಾತ್ರೀಗೆ ಬರ್‍ತೀವಿಕೋಲೆ | ಕೋಲಾಬಿ ಡ್ತಾರೆಂದು ಶಿಟ್ಟುಮಾಡಲಿಬ್ಯಾಡ || ನಿನ್ನಾಣೆಕೋಲಾಬಿಡ್ತೀವಿ|| ಕೋಲೇ||ಪ||೧||

ವೀಧ್ಯೆ | ವೀಧ್ಯೆ || ವೀಧತ್ತ (ಮುಕ್ತಾಯ)

೨

ತಂದನೋ ತಾನಾನಿ, ತಂದನೋ ತಾನಾನಿ. ತಾನು ತಂದನು ತಂದೆ, ನಾನಿ ತಂದ ನು ತಾನಿ, ತಾನು ತಂದನು ತಂದೆ, ಶಿವ್ನೀಗೆ ಶರಣೊ || ಪ || ಕಟಿಕಟೀ ಕಲ್ಲೂರು, ಬೆಡಗಿನಾ ಬೇಲೂರು, ಹಿಂದೆ ತಾವಿರಗೇರೆ, ಮುಂದೆ ತಾವಿರಗೇರೆ ಕಲ್ಲೇಶಲಿಂಗಾಗೆ ಮಲ್ಲೇಶಲಿಂಗಾಗೆ, ಕಡ್ಗೂರು ರಾಮುಪ್ಗೆ, ಒಡ್ದ ತೇಂಗಿನ ಕಾಯಿ, ಓಟಿಯಾತೆಗಾದ್ವು, ಅಂದ ಚಂದಕೆ ಮೂರು, ಪಟ್ಟಿಯಾತೆಗೆದವರು, ಪಟ್ಟಣದ ಮನಸ್ವಾಮಿ, ಪಾದಕೇಬಿದ್ದವರು, ಅರಿತೋರಿಗೆ ಮತ್ತೆ, ಮರೆತೋರಿಗೆ ದೇವ, ಮತಿಕೋಡೊ ಮಾದೇವ, ಸತಿಕೋಡೊ ಸಾದೇವ, ವಿದ್ಯೇವ ಕಲಿಸಯ್ಯ, ಹಿರಿಯೋರ ಕೂಡಾ, ಸೆರೆಸಿದ್ದಾರೊಟ್ಟಿಗೆ ಬಿದ್ದಾಂತೆ ( ಬಿತ್ತಾಂತೆ ) ಶರಣೋ || ತಂದನೋ || ಪ || ಹೇಳಿದಾನಾಗಣ್ಣ, ಕೇಳಿದಾನಿಂಗಣ್ಣ, ಕೋಟೇಲಿಟ್ಟವರಲ್ಲೊ, ಭೇಟಿಯಾತ ಕ್ಕೊಂಡು ತಂದಾರು ತಾನಾನಿ, ತಲೆಗಾಳು ಬಿದ್ದಾವು, ಮುಂದಕ್ಕೆ ಹೋಗುವಾಗ, ನಾಗಾರಿ ನುಡಿದಾವು, ಸಪಪತ್ತು ನುಡಿದಾವು, ಬೇಗ ತಿರಗೀ ಬೇಗ, ಬೇಗ ತಿರಗೀ ಬೇಗ, ಬೇಗ ಚುಂಚನಗಲ್ಲ, ಶ್ರೀಪಟ್ಟಕಾಟ್ವಾರು, ಕಟ್ಟುಬಾರೋ ಶರಣು-ಕಟ್ಟು ಬಾರೊ ಶರಣು || ತಂದನೊ || ಜಗಜಗಸೆವಡೆಯಲೊ, ಜಗದ ಪಟ್ಟೊಡೆಯಲೊ, ಅರಮನೇ ಒಳಗೊಬ್ಬ ಘೊರೆಮುಗಾ ಕುಂತನ್ನೆ, ಪನ್ನೀರ ಕೊಳದಲ್ಲಿ, ಸ್ನಾನವಾ ಮಾಡನ್ನೆ, ಸಲವತ್ತ ಹೊನ್ನಿನಾ, ನಾಮವಾ ಇಟ್ಟನ್ನೆ, ಅಚ್ಚ ಗಂಬೀಯುಳ್ಳ, ಹಚ್ಚಡವ ಹೊದ್ದನ್ನೆ, ಪಚ್ಚೆ ಗಂಬೀಯಾ ಪಾಗಾನೆ ಸುತ್ತನ್ನೆ, ಹೊನ್ನು ಭಂಗಾರವನ್ನೊಳಗೆ ತಾನಿಟ್ಟವನೆ, ಮುದ್ರೆಯುಂಗುರವನ್ನು ಕಯ್ಯಲ್ಲಿ ಇಟ್ಟವನೆ, ಪಟ್ಟಣದ ಮಹಸ್ವಾಮಿ ಪಾದಕೇ ಬಿದ್ದವನೆ || ತಂದನೊ || ಮೂಡಾಲ ತಂಗಾಳಿ ಬೀಸೀ ತೊಂದ್ಕುದ್ರೆ ಬಾಲ, ಮಿಸ್ಕೀ ತೊಂದ್ಕುದ್ರೆ ಬಾಲ, ಓಹೋ ಹೊ ಪೇಟ್ದೋರು, ಚೀಟಿ ಚಲ್ಲಣದೋರು ಪೇಟ ರೂಮಾಲದೋರು ಕಾದವ್ರೆ ಮಹವೀರ, ಎಳೆಯ ಕೋಗಿಲೆ ಬಣ್ಣ ಕವಚವಾ ತೊಟ್ಟು ನೀನು, ಎದುರಾಗಿ ದಂಡೀಗೆ, ಎದ್ದು ಬಾರೊ ಸ್ವಾಮಿ, ಎದ್ದು ಬಾರೊ || ತಂದನೋ || ದಂಡೀಗೆ ಎದುರಾಗಿ, ಎದ್ದು ಬಂದಲ್ಲೊ ಸ್ವಾಮಿ ಸಿದ್ಧ ಮಲ್ಲಿಗೆ ರಾಜು, ನಾ, ನ್ಯಾಂಗೆ ಮರ‍್ಯಾಲೊ ನಿನ್ನ, ಪಂತದಲಿ ಗೆದ್ದವನೆ, ಪಗಡೆ ರಣಶೂರನೆ, ಹ್ಯಾಗೆ ಮರೆಯಲೊ ನಿನ್ನ, ನಾ, ನ್ಯಾಗೆ ಮರೆಯಲೋ ದೇವ || ತಂದನೋ ||

( ಇಲ್ಲಿಯವರೆಗೂ ಸುಮ್ಮನೆ ಕೋಲು ಮತ್ತು ತಾಳ ಝಲ್ಲರಿಗಳನ್ನು ಲಯಕ್ಕೆ ಸರಿಯಾಗಿ ಸದ್ದು ಮಾಡುತ್ತಾ ನಿಂತಲ್ಲೇ ನಿಂತಿರುವರು. ಮುಂದಕ್ಕೆ

ಪದ್ಮದಂತೆ ಚಕ್ರದಂತೆ ಕೋಟೆಯಂತೆ ಸೈನಿಕರಂತೆ ವ್ಯೂಹಗಳನ್ನು ರಚಿಸಿಕೊಂಡು, ಒಬ್ಬರ ಕೈಯಲ್ಲಿರುವ ಕೋಲಿಗೆ ಇನ್ನೊಬ್ಬರು ಟಕ್ಕಿ ಹೊಡೆಯುತ್ತಾ ಹಾಡುವರು)

ಶರಣುಶರಣು ಅಯ್ಯಗಣನಾಯ್ಕಾ | ನಮ್ಮ ಕರುಣದಿಂದಲ ಕಾಯೊಗಣನಾಯ್ಕ || ಎಳ್ಳುಂಡೆ ಜೇನುತುಪ್ಪ ಗಣನಾಯ್ಕ | ನಮಗೆವಿದ್ಯೇವ ಕಲಿಸಯ್ಯ ಗಣನಾಯ್ಕ || ನಿಮಗೆ ಕಳೀ ಅಡ್ಕೆ ಚಿಗ್ರೆಲೆ ಗಣನಾಯ್ಕ | ನಿಮ್ಗೆ ಗೊನೆಮೇಗ್ಳ ಬಾಳೇಹಣ್ಣುಗಣನಾಯ್ಕ || ನಿಮ್ಗೆ ವಡ್ಡ ತೆಂಗಿನಕಾಯಿಗಣನಾಯ್ಕ| ನಿಮ್ಗೆ ಕರ್ಪೂರಸಾಂಬ್ರಾಣಿಗಣನಾಯ್ಕ|| ನಿಮ್ಗೆ ಮರ್‍ಗ ಮಲ್ಲಿಗೆಜಾಜಿ ಗಣನಾಯ್ಕ | ನಿಮ್ಗೆ ಕೊಂಬೇಮೇಗ್ಲ ನಿಂಬೇಹಣ್ಣು ಗಣನಾಯ್ಕ || ನಿಮ್ಗೆ ಒಪ್ಪತ್ತಿನ್ಯವಪೂಜೆ ಗಣನಾಯ್ಕ | ಎಮ್ಮ ಕರುಣದಿಂದಲಿ ಕಾಯೊ ಗಣನಾಯ್ಕ || ಏಧೈ ಏಧೈ ಏಧತ್ತ ||

೪

ಮೊದಾಲು ನೆನೆದೇನು ಸೋಮೇಶ ಲಿಂಗಾನ ಸೊಬಗೀಲಿ ಸುಂದಾನ ಬೆನವಣ್ಣಾನಾ | ಬೆನಕ ನಿಮ್ಮ ವ್ಹಾಗೆ ಬೆಳ್ಳೀಯಶಿವದಾರ ಕುಣಿಕಾಲುಚವಲೀ ಕೊನೆ ಮುಟೀಯೋ || ಎಳ್ಳೋಲದಲ್ಲಿರ್‍ವ ದೊಳ್ಳೊಟ್ಟೆಬೆನ್ವಣ್ಣಾ ಎಳ್ಳುವುಂಟೀಗೆ ಎಲೆ ದುಪ್ಪಾ | ಎಳ್ಳು ಉಂಟೀಗೆ ಎಲೆದುಪ್ಪತಂದಿಪ್ಪ ಎಳ್ಳೋಟುಮತಿಯಾ ಕೊಡುನಮಾಗೇ || ಉದ್ದೀನ್ಹೊಲ್ದಲ್ಲಿರ್‍ವ ಮುದ್ದೀನ ಬೆನವಣ್ಣಾ ಇದ್ದಷ್ಟುಮತಿಯಾ ಕೊಡುನಾಮಾಗೆ | ಕಡ್ಲೇಹೊಲ್ದಲ್ಲಿರ್‍ವ ಕಡ್ಬೊಟ್ಟೆಬೆನವಣ್ಣಾ ಕಂಡೋಟುಮತಿಯಾಕೊಡುನಾಮಾಗೇ || ಮೊದಲಾಲು ನೆನೆದೇನು || ಪ ||

೫

ಎಲ್ಲವನೋ ಶೀವನೆಲ್ಲವನೋ ಸ್ವಾಮೆಲ್ಲವನೋ ಗುರುವೆಲ್ಲವನೋ | ಅಲ್ಲಾವನಿಲ್ಲಾವಾನೆಲ್ಲಾವಾನೋ ಸ್ವಾಮೆಲ್ಲಾವಾನೋ ಗೂರೂವೆಲ್ಲಾವನೋ|| ಅನ್ನದಾಸೀಶಿದ್ಧ ಎಲ್ಲವನೋ ಒಳ್ಳೆ ಆದೀಚುಂಚನಗೀರಿ ಎಲ್ಲವನೋ | ಅರೆಮೇಲೆ ಅಂದಾಸಿ ಎಲ್ಲವನೋ ಒಳ್ಳೆಗಿರಿಮೇಲೆ ಭೈರೂವ ಎಲ್ಲಾವಾನೊ || ಕೋಡೂಗಲ್ಲಿನ ಒಡೆಯ ಎಲ್ಲಾವನೊ ಒಳ್ಳೇಚೇಣೂರುಕಂಬ್ದಯ್ಯಎಲ್ಲಾವನೊ | ಮೂರೂನಾಮದ (ತ್ರಿಶೂಲ) ಒಡೆಯ ಎಲ್ಲಾವನೊ ಒಳ್ಳೆನವಿಲೂಗರೀಕಂತೆ ಎಲ್ಲವನೊ| ಖಂಡಾಗವೀಭೂತಿಧರನೋನು ಎಲ್ಲೊ ಮರುಗಾಮಲ್ಲಿಗೆ ಜಾಜಿ ಎಲ್ಲವನೋ ಎಲ್ಲವನೋ ಶಿವನೆಲ್ಲವನೊ || ಏಧೈ ಏಧೈ ವೀಧತ್ತ || ಪ ||

೬

ನಿಲ್ಲೊ ನಿಲ್ಲಯ್ಯರಾಜ ನಿಜವಾನಾವೇನುಬಲ್ಲೊ ಮಲ್ಲೀಗೆಹಾರಗಳೆಲ್ಲೋ ನಿಲ್ಲಯ್ಯ ರಾಜ | ಕೇರಿಕೇರಿತಿರ್‍ಗ್ತಿದ್ದಿ ಭಾರಿಕಿನ್ನಿಸುಡ್ತಿದ್ದಿ ನಮ್ಮಾ ಕೇರೀ

ಗ್ಯಾಕೆಬಾರಲಿಲ್ಲವ್ರೊ ಸಿಲ್ಲಯ್ಯರಾಜ || ನಮ್ಮಕೇರ್‍ಗೆ ಒಂದರ್ಸಿರ್ೀನು ಕರ್‍ಯ್ಯಕಂಬ್ಳಿಗದ್ಗೆ ಹೂಡಿ ಗಂಧಪೀಳ್ಯ ತಂದುಕೊಡ್ತೈವ್ರೊ ಸಿಲ್ಲಯ್ಯರಾಜ | ಗಂಧಾನಾದ್ರು ಧರ್ಸಿರ್ೀ ಕೊಳ್ಳಿ ವೀಳ್ಯಾನಾದ್ರುಮೆದ್ರೂಕೊಳ್ಳಿ | ಬಂದಾಕಾರ್ಯರ್ ಹೇಳಿಹೋಗಯ್ಯಾ || ಸಿಲ್ಲಯ್ಯ | ಆಗದೋನೆ ಭೋಗದೋನೆ ನಾಗರಾನಡ್ಕಟ್ಟಿನೋನೆ ! ಕೋಗಿಲ್ಯಾಗೆ ಕೂಗುತೀಯುಲ್ಲೋ ಸಿಲ್ಲಯ್ಯರಾಜ ||

೭

ಚಂಡಾಡಿರೊ ಚಂಡಿಟ್ಯಾಡಿರೊ ನಮ್ಮ ಚಂದುಳ್ಳಿರಾಮಾನಕೊಂಡಾಡಿರೋ | ಹೊತ್ತುಟ್ಟೀದ್ದಂಗೆ ಮುತ್ತುಟ್ಟಿದಾರಾಮು ಮುತ್ತೀನತೂರಾಯುಹಿಡ್ಕೊಂಡು || ಧೊರ್‍ಗಾಳಿಗೂಲೂಪೆ ಕಳಿಸಾಸುರಾಮಣ್ಣ ಘೋರೆಗಾಳಾಮುಂದಿಳ್ದಾಕುದ್ರೇಯು | ಮಲ್ಲೀಗೆಹೂವ್ವಾ ಕೂದೂಮಾಲೇಕಟ್ಟಿ ಧೊರ್‍ಗಳ್ಗಲೂಪೆ ಕಳ್ಸಾನುರಾಮಣ್ಣ || ಆಚೆ ಈ ಚೇಯಾತೋಟಾದನುಡುವೇ ಗಂಧಾದಶ್ರೀವನದ ಬಯುಲಲ್ಲಿರಾಮು | ಚಂಡೂಬಂದಾವೆ ಕೊಂಡ್ಕೊಳ್ಳಿಹರಿಯುವ್ವ ಚಂಡಿಲ್ದೆಹೊರ್‍ಗೀ ಹೋಗ್ತಾನೆರಾಮು || ಓಲೆಬಂದಾವೆ ಕೊಂಡ್ಕೋಳೆಹರಿಯುವ್ವ ದಾಳೀಹೋಗ್ತಾನೆ ಮುದ್ರೂರಾಮಣ್ಣ | ಊರೀನಾಮುಂದೊಂದು ಹೂವ್ವೀನಾಗಿಡದಾಡಿ ಹೂಡಿದಾರಾಮಣ್ಣಹರಿಚಂಡಾ || ಹೂಡೀರಾಮಣ್ಣಾಹರಿಚಂಡಾಡೂವಾಗ ಚಿಕ್ಕವ್ವರಥವಾನಿಲ್ಸೀದಾಳೂ | ಶಿರಿಯಾನೂತರ್‍ಲೀಲ್ಲಶರಗೊಡ್ಡಿಬೇಡ್ಲಿಲ್ಲ ಅರ್‍ಮನೆಗೇಹೋಗಿಬರ್‍ತೀದ್ದ ಸೋದರಾದೋರೂಧರ್‍ಮಕ್ಕೆಧಾರೇಯು ಎರ್‍ದಾರಂತೇ ಕಾಣೊ ||ಚಂ||

೮

ಬಾರ್ಹನುಮಾ ಮುದ್ದುಧೀರ್ಹನುಮಾ ಲಂಕೇಯುಸುಟ್ಟಾಕರಿಹನುಮಾ | ಲಂಕೇಲ್ಲನೂಮಾನಸಂಪತ್ತನೋಡೀರೊ ಸಂಪೀಗೆಮರ್‍ವಾ ವರ್‍ಗ್ಗನ್ನೇ | ಬಾರ್ಹನುಮಾ || ಪ || ಉದ್ದಾನಿಹನುಮಯ್ಯಬುದ್ಧೀಲಿಸಮನ್ಯಾರು ಎದ್ರೂಹಾರಿದನೂಗಗನಾಕ್ಕೆ | ಎದ್ದೂಹಾರಿದಗಗಾನಕ್ಕೆ ಲಂಕೇಸುಟ್ಟು ಬಗ್ಗೀರಾಮುರಿಗೇ ಶರಣೆಂದ || ಅಂಗಂಗಡಿಸುಟ್ಟ ಅಂಗಾಡಿಮಾಳಿಗೆಸುಟ್ಟ ಅಂದಾಕೆ ರಾವಣನ ಎಳೆಮೀಸೆ | ಆಯಾಕೆ ರಾವಣನ ಎಳೆಮೀಸೆ ಗಡ್ಡವಸುಟ್ಟು ಬಾಗೀರಾಮುರಿಗೇ ಶರಣೆಂದ | ಹನುಮಾಹಗ್ಗವತಂದ ಗರುಡಾಳಪಿಲ್ಲಿಯುತಂದ ನಿಂಬೀವನಾದಲ್ಲೀಶೆರೆಯಿರೂವಾ || ನಿಂಬೀವನ್ದಲ್ಲೀಶೆರೆಯಿರ್‍ವಸೀತಮ್ಗೆ ಉಂಗೂರಾತಂದಾಹನುಮಯ್ಯ|| ಬಾರ್ಹನುಮಾ || ಹುನುಮಾನಂಬೋನೂಚಿಕ್ಕೋನು ದೊಡ್ಡೋನು ಕೋಗುಂಟೆ

ಮೇಲೇಕೂಸೆನಾಮಾ | ಕೋಗುಂಟೆಮೇಲೇಕೊನೆನಾಮ ಇಕ್ಕೊಂಡು ಚುಕ್ಕಿ (ನಕ್ಷತ್ರ) ಬೆಳ್ಳಾಕ್ಕಲ್ಲೀ ಹೊರಟಾನುಹನುಮಾ | ಹಗಲುಹಂದೀಬೇಟೆ ಇರ್‍ಳ್ಳುಗಿಡಗ ನ್ಬೇಟೆ ಸಲೆಬೇಟೇಗಾರಾಹನುಮಯ್ಯ | ಆನೆತೋರಕೆಂಡಾಬಂದು ಆತುರಸಿಬೀಳು ವಾಗ | ಆಗಯಾರು ಲಂಕೆಯುನ್ನು ಸುಡುವ್ಹೋರು | ಒಂಟೆತೋರಕೆಂಡಾಬಂದು ಮಂಟಿಕೊಂಡು ಬೀಳುವಾಗ ಮತ್ತೆಯಾರು ಲಂಕೆಯುನ್ನು ಸುಡುವ್ಹೋರು ? ಕುದ್ರೆ ತೋರಕೆಂಡಾಬಂದು ಕುಪ್ಪಳಿಸಿ ಉಯ್ಯ್ರ್ಯಾವಾಗ ಆಗ ಯಾರು ಲಂಕೆಯುನ್ನು ಸುಡುವ್ಹೋರು | ಆಗಯಾರು ಲಂಕೆಯುನ್ನು ಸುಡುವಾರು ರಾಮಾರಹೆಚ್ಚೀನಾಭಂಟ ಹನುಮಯ್ಯ | ಮಗ್ಗೀಹ್ನಜ್ಜಡಹೊದ್ದು ಮರಿಕುದ್ರೆಮೇಲೇರಿ ಲಗ್ಗೀಕೋಟೆಂದಾ ಬರುವ್ಹೋನೆ | ಲಗ್ಗೀಕೋಟೆಂದಾ ಬರುವಾ ಹನುಮಯ್ಯ ಮಗ್ಗೊ ಬಾಡ್ಯಾವ್ಹೋ ಬಿಸ್ಲೀಗೆ || ಬಾರ್ಥನುಮಾ || ಏಧೈ | ಏಧೈ | ಏಧತ್ತ ||

೯

ತಂದನೋತಾನೊಂದರುಳೊಜಾಳ ಅರುಳೊಮರುಳೋಂದುರುಳೋಜಾಣ | ಗದ್ದೀಗೆಬುಟ್ಟೊ ಎದ್ದಾರೊಕೆಂಗಪ್ಪ ಇದ್ದಾರೆಸಿಮ್ಯಾ ಶಿವನಾಣೆ || ಇದ್ದಾರೆ ಸಿಮ್ಯಾ ಶಿವ್ನಾಣೆ ಶಿವರಾತ್ರಿ ಮಗ್ಗು ತಂದಿಪ್ನೀ ಮುಡಿಬಾರೊ || ತಂ || ಪ || ಮಗ್ಗಲ್ಲವೆಂದೂಮಗ್ಗ ಹೋಗಲುಬ್ಯಾಡ ಮಗ್ಗು ಈರಣ್ಣನ ಮಾಸೇದೊಜಾಣ | ಮಗ್ಗು ಈರಣ್ಣಾನಮನೆಯಲ್ಲಿ ಮಲ್ಲೀಗೆ ಜಾಜೀಗಳರಳೀಘಮಘಮಿಸುವವ್ಹೊ || ಹೂವಿಲ್ಲವೆಂದೂ ನೀಹೋಗಾಬೇಡಾ ಹೂವ್ವರಳೀ ಬಾಯಾಬಿಡುತಾವ್ಹೊಜಾಣ | ಎಳ್ಳೊ ಹೊಲ್ದಾಗೆ ಎಳೆಟಗರಾಸಾಕಿ ಎಳೆಗೆಂಪಕೆಂಗಪ್ಗೆ ಮೊಕ್ತು ಸ್ನೊ ಜಾಣ | ಎಳ ಗೀನಕೆಂಗಪ್ಪಮುಕಮುನ್ಸ್ನಮಾಡ್ಕೊಂಡುಸಲ್ಲೊ ರಾದುರ್ಗಕ್ಕೆ ಹೊರ್‍ಟ್ಯಾನುಜಾಣ || ಸಾಲ್ಹಿಪ್ಪೇಮುದರ್‍ಾನೆರ್‍ಳ್ಳಲ್ಲಿ ಹೊರಟಂಥಾ ಕೆಂಗಪ್ಪಹಸ್ನೆಂದುಕುದ್ರೆಯಿಂದಿಳ್ದಾ |ತಂ| ಸಣ್ಣಾಬಾಡೀತಾಹಾಸೀದಕೆಂಗಪ್ಪ ಅಲ್ಲಿಮಾಡ್ಯಾನೂಮುಬನಿದ್ರೆ || ಏಳೂಮಂದೀ ಅಲ್ಲಿ ಸೂಳೇರುಕ್ಕೈಯ್ಯಾ ಕಟ್ಟಿಏನಂದಾರು ಗೌಡಯ್ಯಕಾಣೆ | ಹಳ್ಳೀಕಾರಾನಲ್ಲ ದಿಳ್ಳೀಗೌಡಾನಲ್ಲ ಭದ್ರಾಚಿಕ್ಕವ್ವನ ಮಗಕಾಣೆ || ತಂ || ಪ || ಭದ್ರಾಚಿಕ್ಕವ್ವಾ ನಮಗನಾದರೇನಾಯ್ತು ಹೋಗೋಣಬಾರೇಮನ್ಗೀಜಾಣೇ | ಅರ್‍ಮನ್ಗೆ ಹೋಗಾ ಕೆನಾಪೇಗಬಂದೀವಿ ಹಿಂದೆಬರ್‍ತಾರೇಹಿರಿಯೋರುಜಾಣ | ಹಿಂದೇಬರುವಂಥಾಹಿರಿ ಯೋರುಬ್ಯಾಡ ಸೂಳೇದಂಡಾವಾತೆಗ್ತಾರುಕುಲದಲ್ಲಿ | ಗಂಧಾದುಂಡೇಕೊಳ್ಳೊ ಗಾಬೆಸ್ಸರ್ಣೀಕೊಳ್ಳೊ ಅಂಡುಳ್ಳಿಮುಕ್ಕಳಾಕೊಳ್ಳೋಜಾಣ | ಕಣ್ಣಿಕಪ್ಪುಕೊಳ್ಳೊ

5

ಕಸ್ತೂರೀಭರಣೀ ಬ್ಯಾಡಾತಿಸಂಗಾಬ್ಯಾಡ್ವೋಜಾಣ | ಬೇಡಾರುನವ್ಮಾ ಬೆಡ್ಗರೀ ಯಾರು ಕೆಂಗಾಬಾರೆಂದೂಸೆರಗೆಳಾದಾರೂ || ತಂ || ಪ || ತೋಟಾಕೆಹೋಗದೀ ರೊತಾಟ್ಕಿತ್ತೀರಿದ್ದಾರು ತೋಟಾದಾಹೂವ್ಲೀತಲೆತುಂಬೊಜಾಣ | ತೋಟಾದಹೂ ವ್ಲೀತಲೆತುಂಬಿಕೆಂಗಪ್ಪ ವೂಟಾದ್ಧಂಬಲವಾಮುರ್ತ್ಯಾನುಜಾಣ | ತೋಟಾದಕಡಕಾ ಲ (ಹಿಕ್ಕಲು) ದಾಟೋದುತಡವೇಸೊ ನೀಟಾಗಿಬರುವ್ವೋಗರ್ತೀಯೊಜಾಣ|ನೀಟಾ ಗಿಬರ್ವ್ಯೋಗರ್ತೀಹೆಣ್ಣಿನಮೇಲೆ ಮಾತೂಬರ್ವ್ಯೋದುತಡ್ವೇನೊಜಾಣ || ತಂ || ಪ || ಸೂಳೆಮಲ್ಲೀಯಾಸೂರೆಲ್ಲಾಮಲ್ಲೀಗೆ ಜಾಣಕೆಂಗಪ್ಪಾನಾಮುನ್ಸೂವೆಕಾಣೊ | ಜಾಣಕೆಂಗಪ್ಪಾವುಲ್ಯೋಗ್ಗೀಮುಂಚದಮೇಲೆ ತಾಳೇಯಹೂವ್ವೀನತಲೆದಿಂಬೋ || ಹತ್ತೂಕಾಲೇಣೀಮುತ್ತೀನಾಚೇಣಿ ಮತ್ತ್ಯಾರಿಗೆ ಹೂವ್ವ ಕೂಯಿದ್ದಾಯೊನೀನು | ಸನ್ನೂರಕಳ್ಳಾಬ್ಯಾಡಾರಾಹುಡ್ಗೀಯುತೋರಾದತುರ್ಬೀಗೆ ಕುಯಿದ್ಯಾಯುಜಾಣ||ಪ||

|| ಏಧೈ | ಏಧೈ | ಏಧತ್ತ ||

೧೦

ಹರನ ನೆನೆದೇವ್ವೋಜಗದಾ ಗುರುವನೆ ನೆನೆದೇವ್ವೋ | ಏರಜುಂಜನಂತೇಸ್ವಾ ಮಿಾಶಿವನನೆನೆದೇವ್ವೋ ಜಗದಾಗುರು........|| ಪ || ಹೊಕ್ಕಳಗಂಟೆ ಹುಲಿಯುಚರ್ಮ ಧರಿಸಿದ್ದರನಾ ಧೀರಧರ್ಸೀದ್ದಾರನಾ | ಹೆಚ್ಚಿದೋರಹಲ್ಲುಮುರ್ದ್ಯೊಪಟ್ಟೆದಟ್ಯೋ ನೂಪಟ್ಟೆದಟ್ಟೆಮುತ್ತಿನ್ಸಾರ ಅಪ್ಪಾಧರ್ಸೀದ|ಅವ್ನುಗೆಜ್ಜೆಕಾಲು ನೀಲಿನಾಮುವ್ಯೆಗೆ ಧರಸೀದಾ|ಕೋಲುಕೋಲೇಕೋಲೇ ಕೋಲುಕೋಲೇಕೋಲೇ ||ಅವ್ನು ಯುಲವಾ ನೂರು ಚಲ್ವರಾಯುಸ್ವಾಮಿಸಂಜೀವಾ ದೇವಸ್ವಾಮಿಾಸಂಜೀವಾ | ಬಿಳಿಯುಕುದ್ರೆ ಸೇರಿಭೂಪ ಮೆಳೆಯಾಸೇರಿದಾ ಧೀರಮೆಳೆಯುಸೇರಿದಾ | ಅವ್ನುಸಿಡಿದುವ್ವೊಡೆದು ಚಿತ್ರಕಲ್ಲಾದುರ್ಗಸೇರಿದಾ| ಕೋಲುಕೋಲೇಕೋಲೆ| ಹಗಲೆಚುಕ್ಕಿದಗಲಕಣ್ಣೆದಗ ಲತೋರಿದಾ ಅವ್ನುಸುಂಡನೂರಗೊಂಡಿಬಳ್ಗೆದಂಡನೆಡ್ಸಿದಾ | ಮಾತಿನಲ್ಲಿಮಾಗು ಡಿಸ್ವಾಮಿ ಆನೆತರ್ಸೀದಾ ಧೀರ ಒಂದುಆನೆ ತರ್ಸಿದಾ | ಅವನು ಆನೆಮೇಲೆಚಂದ್ರ ಗಾವಿದಾಳನೆಡ್ಸಿದಾ ದಾಳನೆಡ್ಸಿದಾಕಂಚಿನ್ಸಹಳೆನುಡ್ಸಿದಾ | ಅವನುಸುಂಡನೂರ ಗೊಂದಿವಳಗೆದಂಡನೆಡ್ಸಿದಾ | ಕೋಲೇಕೋಲೇಕೋಲು....|| ಅವನು ಅಪ್ಪಮುಕ್ಕ ಳೆಂಬೊಸುದ್ದಿ ಎತ್ತಿಮರ್ಸಿದಾ ಧೀರಪಗ್ಡೆನಾಡಿದಾ | ಅವನುತಾಯಿಮುಕ್ಕಳೆಂಬೋ ಸುದ್ದಿತೋರಿಮರ್ಸಿದಾ ಧೀರಲೆತ್ತನಾಡಿದಾ | ಕೋಲೇರನ್ನದಕೋಲೆ ಚಿನ್ನದಕೋ ಲೇ ಕೋಲಮೇಲೆ ಮುಘುರಚಂದ್ರಮೋಲುಕೋಲಿನಾ ||

೧೧

ಅರಸನೂರ ಮನೆಯುಮುಂದೆ ಶ್ರೀಯದೇವಿ ಗುಡಿಯುಕಟ್ಟಿ ಪರಿಸರೀಂದ ಹರ್ಕ್ಕೆ ಕೋಡೆ ಚಂಗಿಯಲ್ಲಮ್ಮಾ | ಹಿಂದಲ್ಲ ನವಕರೆದಸಣ್ಣಾ ನಂದಿದುರ್ಗಸೇರ್ದಸಣ್ಣಾ ಮುಂದೆಹೋಗಿ ಮುರಗಿಸ್ವಾಮಿ ವರವಬೇಡಿದಾ || ಸೀರ್ಯದಬಾಗಿಲಿತಂಕ ಶೀಗೆಬೇಲಿ ಕೊಯ್ಸಿದಾ ಭೂಪ ಶೀಗೆ || ದಂಡಕಡಿದು ಕೋಟೆಹಾರಿ ಹಣವಕಿತ್ತು ಜಗಲಿಹಾಕಿ ನೂರೊಂದಾಡಿ ಕೋಟೆಒಳ್ಗೆ ದಂಡನೆಡ್ಸೀದಾ | ಕೊಟ್ಟಕತ್ತಿಕೈಲಲ್ಲಿಡಿದು ನೆಟ್ಟಕತ್ತಿ ಬಗಲಲ್ಲಿರ್ಕ್ಕಿ ಎಡ್ಕೆ ಬಲ್ಕೆ ಕಟ್ಟಿದರಣ್ಣಾ ಎರ್ಡೆಡಾರ್ಯುಧ್ವಾ || ಅರಸನೂರ || ಪ || ಮೋಡಮಂಜುನಾಮೇಷ್ಟ್ರಂಗೆ ಮುಲ್ಲಾ ಡಿಸ್ಟೀನಿಕ್ಟ್ದ್ರಂಗೆ ಹೋಗಿಮುತ್ತಿ ಮೈಸೂರ್ಕ್ಕಿಲ್ಲೀವಾ || ಅಪ್ಪನ್ನಾ ತಾಕೇಳದೇನೆ ಎಪ್ಪತ್ಸಾಪ್ರದಂಡಾಕಡ್ದು ತರ್ಕ್ಕೊಬೇಕೆಂದಾ ಚಾಚಂಗಿದುರ್ಗ | ತುರ್ಕ್ಕರಿಗೆಲ್ಲಾ ಗುಲ್ಲದರಂಗು ಮಡ್ಕೀರಪ್ಪನಕಾವೀರಂಗು ಚಾಡಿ ಸುಳ್ಳುಮಾಡಿದರಣ್ಣಾ ಜವದೋರ್ಸ್ಪೇಟೇಲಿ | ಅವರಕೇಳಿ ಇವ್ರಕೇಳಿ ಚಿಕ್ಕಪ್ಪಚಿನು ಮಾಯಿಕೇಳಿ ಎದ್ದುಬನ್ನಿರಣ್ಣಾ ರಾತ್ರಿಹೆದ್ದ್ಸ್ಪೇಟೆಗೇ | ಚಿತ್ರಕಲ್ಲುದುರ್ಗಾವಾಗೆ ಕಂಚಿನ್ನಾಕ್ತೈನಾದಾಕೇಳಿ ಪಂಚಗುಂಡ್ಗೆ ಪರ್ವಾದಾರು ದಂಡಕೂಡಿದಾ || ಅರಸ ||

೧೨

ವೀಧತ್ತಾ | ತಗಧಿತ್ತಾ | ತಗತಗಧಿತ್ತಾ | ಜಂತಗಧಿತ್ತಾ | ಧಿತ್ತೋಂಧಿತ್ತಾ | ಚಪ್ರದ್ದಟ್ಟಿಲ್ಸೊಪ್ಪಾಸೋಸೊ ಉಪ್ಪಾರ್ಹುಡುಗಿಧಪ್ಪದ್ಮೊಲ್ಯೋಳೂ | ನೆಪ್ಪಿರಲಣ್ಣಾ ನೆಲೆಯಿರಲಣ್ಣಾ || ವೀಧತ್ತಾ || ಪ || ಕಲ್ಪತ್ತಿ ಕಿರಬೇವುಕಾಡಾನುಗ್ಗೆಯಮುರಗೂಥಾಸಿಟ್ಟಯ್ಯನಗುತ್ತಿದುರ್ಗವೂ || ತಂದನೊ | ಸಣ್ಣಕ್ಕಿಶ್ಯಾವಿಗೆ ಸರಳೆಮ್ಮೆ ನೊರೆಹಾಲು ಈಗವುಂಡಹಾಗೆ ಆಯ್ತೆಗುತ್ತಿದುರ್ಗದೀ || ಮೋಟಾಗೋಡೇಯ ಮೇಲೆ ಹುಟ್ಟಿತು ತೆಂಗಿನಮುರ ಜೋಡಿಗೊಬ್ರು ಇಲ್ಲವಲ್ಲ ಗುತ್ತಿದುರ್ಗದಿ | ಕೋಟೇಯಾಕೊಡಲಿಲ್ಲ ಮಾತೀಗೆಬರಾಲಿಲ್ಲಾ ಎಂತಾಧೀರಾತನಗುತ್ತಿದುರ್ಗದೀ | ಕೋಟಿಯನುಕೊಡೂವಾಕೆ ರಂಡೇನೊಮುಂಡೇನೊ ಕಾದಿದಳುತಲ್ಲಣಾವಗೊಳ್ಳುವಂತೆ | ಮಲ್ಲಕ್ಕವುಂಡೊತ್ಸು ಮರಿಪಿಳ್ಳೆಕಾವೊತ್ಸು ತೇರನೂಕಂಡಾವೋಂಡ ತೇರನೂ ಕಂಡಾ | ವೀರಾರಾಘವಸ್ವಾಮಿ ಊರಾಮುಂದೇಇರುವ || ತೇರನೂ || ಚಾಪಂಗಿ ದುರ್ಗವೂ ಚನ್ನಪಟ್ಣದುರ್ಗವೂ ಹಂಪೆಯದುರ್ಗವೂ ಪೊಗಮುಂಡೊ ಕಲ್ಪತ್ತಿ ||ಪ||

೧೩

ತೇರೀಗೆ ಹೋಗಾನೆ ಬನ್ನೀರೊ ಸ್ವಾಮಿರಥಾಕೆ ಹೋಗಾನೆಬನ್ನಿರೊ | ಹಾಗಲ್ವಾಡ್ಯಂತೆ ಮೇಗಲ್ಬುಗ್ಯಂತೆ ಚುಂಚನ್ಗಿರ್ಯಂತೆ ಪಂಚಕಲ್ಯಾಣಿ | ಎದ್ದುತೇ

ರ್ಥರಿಸೋವುದ್ದು ಭೈರುವನಾ || ತೇರೀಗೆ || ಪ || ಸೋಟಾಕೆಚಂದ್ವಂತೆ ನೊಣವೀನ ಕೆರೆಯುಂತೆ ತ್ರೋಟಾದಾಸಾಲಿನ ಬೇಟೆರಾಯ್ನಂತೆ || ತೇರೀಗೆ || ಪ || ಹಿಂದೇಜೋಗೀಮಠ ಮುಂದೇಜೋಗೀಮಠ ಸುತ್ತಾ | ಶೃಂಗಾರಪೇಟೆವತ್ತೀಲಿ ಇರುವಂಥ ಬೆಳ್ಳೂರುಮಾದಪ್ಪನ || ತೇರೀಗೆ || ಪ || ಜೋಗೀರಮಠದೊಳ್ಗೆ ಏನೇನು ಅಡ್ಗೆ ಊಟ ಉದ್ದೂ ಹೋಳಿಗೆ ಮತ್ತೆಪನಿವಾರಾ | ನೆನೆಯಕ್ಕಿ ನೆನಗಡ್ಲೆಪನಿವಾರಾ ನಮ್ಮ ಸದ್ದೂ ಭೈರುವನಾಮಠದಾಗೆ | ಜೋಗೋರಮಠದಲ್ಲಿ ಕಬ್ಬಿಣ್ದ ಉಯ್ಯಾಲೆಯಾರ್ದ್ಯಾರು ತೂಗಿದ್ರುಮಲ್ಕೊಲ್ದ | ಯಾರ್ದ್ಯಾರು ತೂಗಿದ್ರೂಮಲ್ಕಾದಉಯ್ಯಾಲೆ ಚುಂಚನ್ಗಿರೀಸಿಧ್ಧು ತೂಗಿದ್ರೆನಲ್ಯೂವ || ತೇರಿಗೆ ||

೧೪

ಕೋಲೇಕೋಲೆ ರನ್ನಾದಕೋಲೆ ಎನ್ನ ಚಿನ್ನಾದಕೋಲೆ | ಒಳ್ಳೆಳ್ಳೆಮಂದೀ ಬೆಳ್ಳೀಕಟ್ಟೆಸಮಂದಿ ಎಲ್ಲೋಮುನಿಯಪ್ಪಾನಿಸಮಂದೀ | ಹಟ್ಟಿ ಗುಡೀಕಾಣೊಪಟ್ಟಣದದೊರೆಕಾಣೊ ಬೊಟ್ಟೂಮುತ್ತೂಕಾಣೋ ಮುನಿಯಪ್ಪ | ಎಲ್ಲೋಮುನಿಯಪ್ಪಾನಿಸಮಂದಿಹಾಗಲಾ ವಾಡೀಸಣ್ಮೆಳ್ಳೀಲೀಸಮಲಗ್ಗೀ | ಬೊಟ್ಟೂಮುತ್ತೂ ಕಾಣೋ ಮುನಿಯಪ್ಪಾನೀನಿರೊ ಪಟ್ಟಣ್ಕಿನ್ನೇನೂಭಯುವಿಲ್ಲಾ | ಬೀದೀಯಾ ಧೊರೆಕಾಣೊ ಜೋಡೂಮುತ್ತೂಕಾಣೊ ಮುನಿಯಪ್ಪಕೋಲೆ | ಜೋಡೂಮುತ್ತೂಕಾಣೋಮುನಿಯಪ್ಪಾ ನೀನೀರೋಕೇರೀಗಿನ್ನೇನೂಭಯುವಿಲ್ಲಾ | ಮುನಿಯಪ್ಪನಿಸಮಂದಿ ಎಸಳೂಕೋಡಿಸಚನ್ನ ಚಂದಾಕೆಚೇಣೂರುಬಿದುರೇಯಾ | ಚಂದಾಕೆಚೇಣೂರುಬಿದುರೇಸೇದೋಭಾವೀ ಲ್ಸನ್ನೇಲೀನೀರಾಕುಡಿದಾವ್ರೊ | ಹಂಚೀನಾಳಾಡೀ ಹೊಂಚಾಡೋನಿವನ್ಯಾರೊ ಕಂಚಿನ್ಸ್ಗರಾಣೀಕೈಲೆಂಬೊ | ಕಂಚಿನ್ಸ್ಗರಾಣೀಕೈತುಂಬಾಹಿಡ್ಕೊಂಡು ಹೊಂಚಾಡಿ ಹೊಡ್ದಾರಣುಗೋಳಾ | ಕಾರೇತಾಳಾಡೀ ಕಾದಾಡೋಸಿವನ್ಯಾರೊ ಕಾಗೀನಗೂರಾಣಿಕೈಲೆಂಬೊ | ಎದ್ದಾನೂಮುನಿಯಪ್ಪ ಎಳೆವಿನಾಸೆತಿರವೂತ ಗಗ್ಗರದ ಈಟೀನೆಡೆಸುತ್ತಾ | ಗಗ್ಗರದ ಈಟೀನಡೆಸುತ್ತಾಮುನಿಯಪ್ಪ ಎದ್ದಾನೂ ಮಾಗೀಹಿಮದ್ದಾಂಗೆ ||

ವೀಧ್ಯ | ವೀಧ್ಯ | ವೀಧತ್ತ ||

೧೫

ರೇಖೂಮುಂಗಾಲೀಗೆ ಘೋಕುಜೋಪಾಲೀಗೆ ರಂಗಾದಯುವಾಗೋ ರ್ಧಂಗಯ್ಯಾದಯುವಾಗೋ || ರೇ || ರಂಗಾದಲ್ಲೀಪಾಲೀತಿರುಗೋನೇಸೀಜೀಯು

ರಂಗಾಸಮ್ಮೀಲೇದಯವಾಗೋ || ರೇ || ನಿಲ್ಲೊನಿಲ್ಲೋರಂಗ ನಿಲ್ಲೊಸೀಜಿಯು ರಂಗಾ ನಿಲ್ಲು ಕೋಳಿಯುಕೂಗೀಬೆಳಗಾಗ್ಲೀ || ರೇ || ದಾಸಾದಾಸಯ್ಯದಾಸಾನುಸಮ್ಮಯ್ಯ ಏಸೊಂದುಪಾಲೀತಿರುಗೋಸೇ || ರೇ || ಬಂಡಿಬಂಡೀಚಂದ ಬಂಡೀಯುಮಗಚಂದ ಹೂಡ್ಕೋರಿಲ್ಲಂದಾವೊದ್ಲೀತ್ತೊ || ರೇ || ಗಾಡೀಯಹೊಡ್ಯೋಸ ಅಾದಾವಾಸೋಡೀರೋ ಮಂಡೇಯುಧೂಳೂವೈಧೂಳೂ || ರೇ || ಮೋರೇಯುಧೂಳೂ ವೈಧೂಳು ಸೀಜೀಯಗಾಡೀಯುಹೊಡಿಯೋಮಗಸೀಗೇ ||

|| ವೀಧೈ | ವೀಧೈ | ವೀಥತ್ತ ||

೧೬

ಚಲುವೈಯ್ಯ ಚಲುವೋ ತಂದನ್ನತಾನೆ ಚಿನ್ಮಾಯರೂಪೊ ಕೋಲಣ್ಣ ಕೋಲೆ | ಇಪ್ಪತ್ತು ರಾಜ್ಯಕ್ಕೂ ಹೆಚ್ಚುಕಾಣೋ ಮೇಲೂಕೋಟೇ--ಪಿಪ್ಪೇಯು (ತೋಪಾ) ತರಿಸಾವೋ | ಪಿಪ್ಪೇಯುತೋಪತರಿಸಣ್ಣ ? ಮರದಡಿಯ ಅಪ್ಪಾಚಲುವೈಯ್ಯಾ (ತೇರೂ) ಹರಿದಾವೋ || ಚ || ಉದ್ಕಾಣೋಉದ್ದ ಉದ್ಕಾಣೋ ಈ ತೇರೂ ಮುದ್ದೊ ಚಲುವೈಯ್ಯಾ ತೇರು ಹರಿದಾವೋ || ತೇಂಗೀಸಗ್ಗವತನ್ನಿ ತೇಂಗೀಸಕಾಯ್ಯನ್ನಿ ಹೊಂಬಾಳೆತನ್ನೀಸ್ವಾಮಿಾಕಳ್ನಾಕೇ || ಚ || ಬಾಳೇಯುಕಾಯ್ಗೋಗೊ ಬಾಳೇಯುಹೂವ್ಗೋಗೊ ಬಾಗೂರಿಗ್ಹೋಗೊ ಗಿಣ್ಣಳಿರಾ | ನಿಂಬೇಯುಕಾಯ್ಗಳಿರಾ ನಿಂಬೇಯು ಹೂವ್ಗಳಿರಾ ಜಂಬೂರಿಗ್ಹೋಗ್ರೀ ಗಿಣ್ಣಳಿರಾ ಜಂಬೂರಿಗ್ಹೋಗೊ ಗಿಣಾಗ್ಳೂ ಮೆಲ್ಕೋಟೆ ಬೊಂಬೇಯು ತೇರಾ ಹರಿಸಾವೋ || ಚ ||

೧೭

ನಡಿನಡೀ ಗಿರ್ಗೋಗಾಸೇ ಸಣಾನಾಮಾದೈಯ್ಯಾ ಬಾಸಮ್ಮಾಸಿಥೀಗ್ಹೋಗಾಸೇ | ಒಕ್ಕಳ್ಗೊಸ್ನೀಗೇ ಕಟ್ಟಿತಾ ಸಂಬಸಗೂಡುಬಿಕ್ಕಾಣಗೇದೂ (ಪ)ಬಾದಾಗಾಲಾ || ನ || ಆಲಾಜಾಲದಮಾರ ಚಾಲಾದಿಕೈಯುಮಾರ ಪಾಲಾಡೀಬೆಳೆಯೋ (ಪ) ಪೀಷಾಪೂರಿ || ನ || ಗುಡಿಯಾಚಂದವಸೋಟ ಸಾಳೀಅಂದವಸೋಟೀ ಒಳಗ್ಹೋಗಿಸೋಡೀ (ಪ) ಚಲುವಾನಾ || ನ || ಅಣ್ಣಾನಗುರಿಯಿಂದ ಸೊಸ್ಸಾರಿಪುರದಿಂದ ಅಣ್ಣಾಸಂಜಯ್ಯಾ (ಪ) ಗುಡಿ ಬಳ್ಸೀ || ನಡಿ || ಅಣ್ಣಾಸಂಜಯ್ಯಾ ಗುಡ್ಡಳ್ಳಿಒರ್ರ್ಯಾರ ಚಿಸ್ಸಾದಕಂಬೀಯು (ಪ) ಶರಣಾರೂ || ನಡಿ || ಚಾಡಾಕೆ ಸಂಜುಂಡು ಚಂದ್ರಾಗಾವಿಯುಸ್ಟೊದ್ದು ಕುಳಿತೂಸೋಡ್ಯಾಸೂ (ಪ) ಪರೂಶೇಯಾಕುಳಿತುಸೊ

ಡ್ಯಾರೂಪರಸೆ ಕೊಂಗಾನಾಡು ಧೂಪಾದಾಹೇರೂ (ಏ) ಬಾರಾಲಿಲ್ಲಾ | ಸಂಟಾನಬರಹೇಳಿ ಎಂಟಾಳಕಳಿಸಾಳು ಸಂಟಾ ಸಂಜಯ್ಯಾ (ಏ) ಬರಾಹೇಳಿ | ಸಂಟಾನಂಜಯ್ಯಾಬರಹೇಳಿ ಚಾಮುಂಡಿ ಒಂಟಿ ಸಿಂಗರಸೀಕಳಿಸಾಳೋ | ಆತಾನಾ ಬರಹೇಳಿ ಆರಾಳಾಕಳಿವಾಳು ಆಸೆಸಿಂಗರಿಸೀಕಳಿವಾಳೂ | ಹಗಲಾನೆತೇರೂ ಮುಗಿಲೂಮುಟ್ಟಿದ ಕಳಸ ಜಗದೊಡೆಯಕೇಳೂ (ಏ) ವಿಷಕಂಠ | ನಂಜನಗೂಡಿಗೆ ನಾಲ್ಕು ಚಿನ್ನದಕಂಭ ನಂದೀಕೋಲೈದು (ಏ) ಬಟೂಐದು | ಗೊಂಬೆ ತೇರೈದೂ ಹರಿವಾಗ ಸಂಜಪ್ಗೆ ಮಂಗಳಾರತಿ (ಏ) ಹದಿನೈದೂ || ನಡಿ || ಮಂಗಳಾರತಿ ಹದೀನೈದು ಬೆಳ್ಗೀವಾಗ ಬೆಳ್ಳೀಯಗಂಟೇ (ಏ) ಧಣೀರೆಂದೊ || ಅರಸೂದೇವ್ಗೀರಿ ಒಪ್ಪೊಬಂಗಾರದ ಉಪ್ಪರಿಕೇಯಾ (ಏ) ಅಳಿದಾನು | ಉಪ್ಪರ್ಕೆಮೇಲಿಂದಾ ಆಳ್ದೊಮಟ್ಟೀಕಟ್ಟಿ ಹೊರಟಾನು ಚಾಮುಂಡಿ (ಏ) ಅರಾಮನೆಗೇ | ಚಂದಾಕೆ ಸಂಬುಂಡು ತುಂಡಂಗೀನಿಟ್ಟವ್ನೆ ಮುಂಗೈಯ್ಯಮೇಲೆ (ಏ) ಗಿಡೂಗಾನು | ಅಂಕಾನಾಡರಸೂಟೆಂಕಾಮುಂದಾದನೂ ಸಂಪೀಗೆ ಹೂವಾ (ಏ) ಹಿಡೂಕೊಂಡು | ಕೆಂಪೂಕುದ್ರೇಸೇರಿ ಹೊರಟಾನು ಸಂಜೈಯ್ಯ ವಂದೀಗೆ ಜಂಗಮ್ರ ವಡಗೊಂಡೂ | ವಂದಿಗೆ ಜಂಗಮರ ವಡಗೊಂಡು ಸಂಜಾನಗೂಡಾ ತೇರ್ಬೀದೀಲಿ ಇಳಿದಾ (ಏ) ಕುದುರೇಯ | ಕುದುರೆತಾಬಿಟ್ಟಾ ಜಂಗಮರಬಿಟ್ಟಾ ಹೊರಟಾನು ಚಾಮುಂಡಿ (ಏ) ಅರಾಮನಿಗೆ|ಆರೂರಾಜ್ಯವ ತಿರುಗಿ ವ್ಯಾಳ್ಯಾವು ತಪ್ಪೀತು (ಏ) ಎಲಿಹೆಣ್ಣೇ ನಡಿನಾಡೆಗಿರಿಗೆ | ವ್ಯಾಳ್ಯಾವುತಪ್ಪೀತು ಎಲೆಹೆಣ್ಣೆರಾತ್ರೀಗೆ ತಾವೂ ಕೊಡ್ಹೆಣ್ಣೇ (ಏ) ತಳಿಗೇನು| ತಾವು ಕೊಡುವಾದಕ್ಕೆ ನಾವ್ಯಾರು ನೀವ್ಯಾರು ನೀವಿದ್ದ ಪಟ್ಣಕ್ಕೇ (ಏ) ಬಿಜಾಮಾಡಿ | ಕದ್ವಾತೆಗ್ಹೆಣ್ಣೇ ಭಂಗಾರಕೊಟ್ಟೀನು ಕೊಟ್ಟೇನುಕೊರಳಾ (ಏ) ಪದಕಾವಾ | ಕದ್ವಾತೆಗೂದಾಳು ಕೈಯೆತ್ತಿಮುಗೀದಾಳು ದೇವನದಶರಗಾ (ಏ) ಹಿಡಿದಾಳೂ | ಸೆರ್ಗಾಬಿಡುಬೀಡೂಸಾವಿಂತೀಗುದಿರ್ಯಾವು ಅಚ್ಚಾಮಲ್ಲಿಗೆ (ಏ)ವನರಾಜಾ|ಅಚ್ಚಾಮಲ್ಲಿಗೆವಾನಾರಾಜಾ ಉದೀರಾವು ಮೆಚ್ಚಿಒಂದ್ಹೆಣ್ಣೆ (ಏ) ಬಿಡೂಶೆರಗಾ | ಹೋದಗಳ್ಗೀಲೀಹಾಕ್ಯಾಳುಮಂಚಾವ ಬೇಕಾದಹೂವ್ವಾ (ಏ) ಮುಡಿಸಾಳೂ| ಬೇಕಾದಹೂವ್ವಾಮುಡಿಸಾಳುಚಾಮುಂಡಿ ಮುನ್ನೀಕೊಂಡಾಳೂ (ಏ) ಆರಗಳಿಗೇ | ಮುನ್ನೀಗೆತಕ್ಕಾದಮುತ್ತಾನೆಚೆಲ್ಲೀವು ಏಟ್ಹೊತ್ತುಚಾಮುಂಡಿ (ಏ) ಕಡುದುಃಖ | ಕಣ್ಣೀರುನಮಗಿಲ್ಲ ಕಡುದುಃಖಾನಮಗಿಲ್ಲ ಎಂದೀನಾಮನಸೂ (ಏ) ನಿವಾಗಿಲ್ಲಾ | ಎಂದೀನಾಮನಸೂನಿವುಗಿಲ್ಲಾ ರಾಯಾರೆ ಎದ್ದೂಹೋಗೀ ನಿವ್ಮಾ (ಏ) ಅಠಾಮನೆಗೇ || ಅರಮನೆಗೆಹೋಗಾಕೆ ಜೊತೆಯಾರ್ಕೆಚಾಮುಂಡಿ

ಕರ್ಪೂರಸಾಮ್ರಾಣಿ (ಪ) ಕಪೂರಾದಾ || ತಟ್ಟೂತಾದಿವ್ಮ್ಯೇಲೆ ಗರಿಗರೀವುಡಿಯಾ
ಹಾಸೀಗೆಚಾಮುಂಡೀ (ಪ) ಗೀಲೂಕ್ಕೇಯ || ಅಕ್ಕಾಚಾಮುಂಡೀಗಿಲುಕೇವುಂಚ
ದವೇಲೇ ಸ್ವಾಮಿಾನಂಜುಂಡೂ (ಪ) ವರೀಗ್ಯವನೆ | ತೂಗೂವುಂಚದವೇಲೆ ಸುಖ
ನಿದ್ರೇಮಾಡಿ ಬೇಗಾನೆ ನಿದ್ರೇ (ಪ) ಕಳಿದಾಳೂ | ಬೇಗಾನೇನಿದ್ರೇಕಳಪಿ ಏನಂದಾ
ಳು ಬಾಗೀಲಬಸ್ವಯ್ನ (ಪ) ಕಾರೇದಾಳೋ | ಬಾಗೀಲಬಸ್ವಯ್ನ ಭಂಡಾರ್ದ ಈರ
ಣ್ಣಾ ಸ್ವಾಮಿಾನುಎಲ್ಗೇ (ಪ) ಕಳ್ಸೀದೀರಿ | ಆ ಮಲ್ಲೀಗೇವಸಕ್ಹೋಗಿ ಮಲ್ಲೀಗೇಕೂ
ಯ್ಕೊಂಡು ಮೆಲ್ಲಾಗೆಸಂಜುಂಡೂಬರುತಾರೆ | ಮೆಲ್ಲಾಗೆನಂಜುಂಡೂ ಬರ್ತಾರೆ
ದೇವೀ ಅವ್ಮಾನೇನಸೂಬ್ಯಾಡಾ (ಪ) ಮನದಲ್ಲೀ | ಮಳೆಗಾಲ್ದ ಮಲ್ಲೀಗೆ ಬೇಸೀಗೆ
ಸಂಪೀಗೆ ಬಿತ್ತಾದೆಬೆಳೆಯೊ (ಪ) ಬೀಳೀದುಂಬೇ | ಬಿದ್ದಾವೆ ನಮ್ಮಾ ಮಠ್ದಲ್ಲಿ ಈವೆ
ಲ್ಲಾ ಸ್ವಾಮಿಾನಾಎಲ್ಗೇ (ಪ) ಕಳ್ಸೀದೀರೊ | ತಂಪ್ನಲ್ಲಿನಂಜುಂಡು ಬರ್ತ್ವಾರೆದೇವೀ
ಅಮ್ಮ ಚಿಂತಿಸಬೇಡ (ಪ) ಮನಾದಲ್ಲಿ | ಕಾಮಕಸ್ತೂರೀಹೂವೂ ದುಂಬೇಯಾಪು
ಷ್ಪಾಸುದರ್ಾವೆ (ಪ) ನಮ್ಮಾಮಠದಲ್ಲಿ | ಸುರಿದಾವೇನಮ್ಮಾ ಮಠದಲ್ಲಿಬಸ್ವಣ್ಣಾಸ್ವಾ
ಮಿಾನಾ ಎಲ್ಗೇಕಳ್ಸೀದ್ರಿ | ಬಸವಣ್ಣಾ ಕೂಗಿದ್ದು ಬೆಟ್ಟಾಕೆ ಎರಗಾವು ಬೆಚ್ಚಿ ಎದ್ವರು
(ಪ) ನಂಜುಂಡು | ಯಾಕಿರಿ ಸ್ವಾಮಿಾ ಬೆಚ್ಚಿದ್ರಿ ಬೆದ್ರಿದ್ರಿ ಏನೂಕಂಡಿರಿನಮ್ಮಾ (ಪ)
ಮಾಠಾದಲ್ಲೀ | ಕಾವೇರಿಹೊಳೆಯಲ್ಲಿ ಕರೆದವ್ರೆ ಜಂಗಮ್ರು ಹಾಲೂಭೋಜನದಾ
(ಪ) ಪರುವೀಗೆ (ಸಮಾರಾಧನೆಗೆ) ಹಾಲೂಭೋಜನದಾಪರುವೀಗೆ ಬಂದವರೇ | ಹ
ಣ್ಣೂಕಾಯಿಾಕೊಟ್ಟು (ಪ) ಬರುತೀನಿ |

(ಎಂಬುದಾಗಿ ಸ್ವಾಮಿಯವರು ಹೇಳಿದರು. ಅದಕ್ಕೆ ದ್ವಾರಪಾಲಕರೂ,
ಭಂಡಾರಪಾಲಕರೂ ಆದ ನಾವು)

ಗಂಡಾನಿಲ್ಲದವೇಲೆ ಅಂಗಾಳತೊಡಿಸಾಳು ತಿಂಗಾಳಾಸಂಬಾಳಾ (ಪ)
ಕೊಡಿಸಾಳು | ತಿಂಗಾಳುಸಂಬಳವಕೊಡಿಸಾಳು ನಿಮ್ಮಡದಿ ಅರಸನಮ್ಮಠಕೇ
ನೀಬರಲಾರೆ |

(ಎಂಡೆವು ಅದಕ್ಕೆ ಸ್ವಾಮಿಯವರು ದೇವಿಯು ಬಂದು ಹೊರಕ್ಕೆ ಯಾಕೆ
ಬಿಟ್ಟೆರಿ ಎಂದು ಕೇಳಿದರೆ, ನಾನು ಹೀಗೆ ಹೇಳಿಹೋದೆನೆಂದು ಹೇಳಿ ಎಂದರು.)

ಏನೆಂದರೆ:—

" ಹಣ್ಕಾಯಿಕೊಟ್ಟೂಬರ್ತೀನಿಚಾಮುಂಡಿ ನಡಿಹೆಣ್ಣೆನಮ್ಮಾಅರಮನೇಗೆ "

(ಈ ಮಾತನ್ನು ಕೇಳಿ ದೇವಿಯು ಮುನಿಸಿಕೊಂಡು ಒಳಗೆ ಹೋಗಿ ಬಾಗಿಲು ಹಾಕಿಕೊಂಡಳು. ಸ್ವಲ್ಪ ಹೊತ್ತಾಗಲು ಸ್ವಾಮಿಯವರು ಬಂದು ಮಠದ ಬಾಗಿಲು ಹಾಕಿರುವುದನ್ನು ನೋಡಿ ಈಚೆಯಲ್ಲೇ ನಿಂತುಕೊಂಡು ಬಾಗಿಲನ್ನು ತೆಗೆಯಲು ದೇವಿಯನ್ನು ಈರೀತಿ ತಾನು ಅರ್ಧನಾರೀಶ್ವರನೆಂದೂ ತನ್ನಲ್ಲಿ ಏನೂ ಮೋಸ ವಿಲ್ಲವೆಂದೂ ಪ್ರಾರ್ಥಿಸಿಕೊಳ್ಳುವರು.)

ರಾಗೀಭಿಕ್ಷಕೆಹೋಗಿ ರಾಜ್ಯಾವಾನಾತಿರುಗಿ ಕುಪ್ಪಾಸಬಡಿದೂ (ಪ) ಘುಜಾ ನೊಂದೂ | ಕುಪ್ಪಾಸಬಡಿದೂಘುಜನೋಯ್ತು ದೇವೀರಿ ಬೇಗೆದ್ದುಕದವಾ (ಪ) ತೇಗೀಬಾರೆ | ಕಾರಂಬೊಕತ್ತಾಲೆ ಘೋರಂಬೊಮಳೆಗಾಲ ಕಾಣಾದಾಹೋಲೀಕೆ ನಾನ್ಯಾಕೆ ಕದ್ವಾ (ಪ) ತೆಗೀಯುಲಿ || ನಾನ್ಯಾಕೆಕದ್ವಾತೆಗ್ಯಾಲಿ ಮಹಾಸ್ವಾಮಿ ಇದ್ದಾಪಟ್ಟಕ್ಕೇ (ಪ) ಜಜಮಾಡಿ | ಅಕ್ಕೀಭಿಕ್ಷಕೆಹೋಗಿ ಹತ್ತೂರಾಜ್ಯವ ತಿರ್ಗೀ ಹೊತ್ತೂತಪ್ಪಿತು (ಪ) ಎಲೆಹೆಣ್ಣೆ | ಬಂದೀಗೆವಬ್ಬರಿಲ್ಲ ಒಡನೆಬಂಗವರಿಲ್ಲ ನಾನ್ಯಾಕೆ ಕದವಾ (ಪ) ತೇಗೀಯಾಲಿ |

(ಈ ಮಾತುಗಳನ್ನು ಕೇಳಿ ನಂಜುಂಡುಸ್ವಾಮಿಯು ದೇವಿಯ ಮನಸ್ಸನ್ನು ಪರೀಕ್ಷಿಸಬೇಕೆಂದು ತಾನೇ ಸ್ವರವನ್ನು ಬದಲಾಯಿಸಿ ಬೀದಿಯಲ್ಲಿ ನೋಡಿದವರು ಹೇಳುವಂತೆ ಹೇಳುತ್ತಾನೆ)

ಗದ್ದೇಬದೀಲಿಬಿದ್ದು ಮಂಡೀಸೊಂದು ಮುಂಗೈಕಿತ್ತೊ (ಪ) ಹಣೆಬಡೆದೂ | ಅರಸ ದೇವೀರೀ ಪುರುಷನೆಲ್ಲಿಗೆಹೋದ ಅರಶೀನಾದುಂಡೇ (ಪ) ತಿರಶೂಲ | ಅರಿಶೀನಾದುಂಡೋತಿರಶೂಲಹಿಡಕೊಂಡು ಗಂಡಾನುಳ್ಳೋಳಾ (ಪ) ಮನೀಗ್ಹೋದ| ರಂಭೆದೇವೀರೀ ಗಂಡಾನೆಲ್ಲಿಗೆಹೋದ ಪುರುಷಾನುಳ್ಳೋಳಾ (ಪ) ಮನೀಗ್ಹೋದ| ದುಂಡೂದೇವೀರೀಗಂಡಾನೆಲ್ಲೀಗ್ಹೋದ ನಂಜನ್ಗೂಡ್ಜೆಂಡಾ ಹೊಳೆತೋಪಿನಲ್ಲಿ | ನಂಜನ್ಗೂಡ್ಜೆಂಡಾಹೊಳೆತೋಪಿನಲ್ಲೀ ಚೆಂಡಾಡಿಸೂಳೆ (ಪ) ಮನಿಗ್ಹೋದ |

ಅದನ್ನು ಕೇಳಿ ದೇವಿಯು

" ತೆಂಗೀನಾಮರದಾಣೆ ತಳ್ಗೀರೊಪುಸ್ಕರ್ಣೆಕಂದಣ್ಣನಾಣೇ (ಪ) ಹೋಗಿಲ್ಲಾ "

(ಎಂದಳು ಇದೇ ಸಮಯವೆಂದು ಸ್ವಾಮಿಯು)

ಕಂದಣ್ಣನಾಣೇ ಹೋಗಿಲ್ಲಾದೇವೀರಿ ಎದ್ದೂಕದ್ವಾ (ಪ) ತೆಗಿಬಾರೆ | ಕದ್ವಾತೆಗ್ಯಾಕೆನೀವ್ಯಾರು ನಾವ್ಯಾರು ನೀವಿದ್ದಪಟ್ಟಕ್ಕೆ (ಪ) ದಾಯಾಮಾಡ್ಸಿ | ಬಾಗೇಮರ್ದಾಣೆ ಬಾಗ್ಲರೊಸಭೆಯಾಣೆ ಬಾಲಣ್ಣನಾಣೇ (ಪ) ಹೋಗಿಲ್ಲಾ |

ತೆಗಿಸನ್ನ ಚಿನ್ನವೆ ತೆಗಿಸನ್ನ ರನ್ನವೆ ತೆಗಿಸನ್ನ ಕೊರುಳಾ ಏ ಪದುಕಾವೆ | ತೆಗಿಸನ್ನ ಕೊರಳಾಪದಕ ಪಟ್ಟದರಾಣಿ ತೆಗೆಯೆ ವಜ್ಜುರದಾ ಏ ಅರಾಗಿಣಿಯೇ | ಕದ್ದಾ ತೇಗಿದಾಳು ಕೈಯೆತ್ತಿಮುಗಿದಾಳು ಚಿನ್ನಾದಗಿಂಡೀಲಿ ಏ ಪನ್ನೀರಾ | ಚಿನ್ನಾ ದಗಿಂಡಿ ಲಿ ಪನ್ನೀರತಕ್ಕೊಂಡು ಪಾದಾಕೆ ಅಗ್ಗಾಣಿ ಏ ಏರೆದಾಳು | ಪಾದಾ ತೊಳದಾಳೂ ತೇಪವಸರ್ಗಾಳು ಹರಿವಾಣಬೆಳಗಿ ಏ ಇರೀಸಾಳು | ಹರಿವಾಣ ಬೆಳಗೀ ಇರಿಸಾಳುದೇವೀರಿ ಶಿವಪೂಜೆಗೇಸ್ವಾಮಿ ಏ ಹೊರಟಾನೊ | ಮಧ್ಯಾ ಹ್ನಮುಳಹೂಯ್ದು ಇಬ್ಬಾಣಿಕೆರೆತುಂಬಿ ಮಗ್ಗುಕಸ್ತೂರಿ ಏ ತೆರೆಹೋದು | ಮಗ್ಗುಕಸ್ತೂರೀ ತೆರೆಹೊಂದಿ ಸಂಜಪ್ಪಾಗೆ ಮಧ್ಯಾಹ್ನದಲ್ಲಿ ಆದೊ ಶಿವಪೂಜೆ | ಹಸನಾದ ವಿಭೂತಿ ಭಸವ್ನಾವತಕ್ಕೊಂಡು ಹೆಸರು ಸಮ್ಮನೆ ಏ ಶಿಶುವೀಗೆ | ನಡಿನಡಿಗಿರೀಗೆಹೋಗೋನೆ || ಪಲ್ಲವಿ || ವೀಧ್ಯೆ | ವೀಧ್ಯೆ | ವೀಧತ್ತ ||

೧೮

ಸಂತೇಗೆ ಹೋಗಾನೆ ಬಾರ್ವಾವಾ ಮನ್ಸ್ಲೇಸೀಸೂ ಇರ್ದೇಯಾ | ಯಾಕೂ ಮಾವ ಸಿಟ್ಕೊಂಡೇ ಮಾಡಿದ್ದೆಲ್ಲಾ ಬಿಟ್ಕೊಂಡೇ | ಆಹಾ ಪಾಪಿದಯ ವಾಗೋ ಏನುಮೋಸ ಮಾಡಿದೇ | ಶಿರ್ರ್ಯಾದಸಂತೇಗೆ ಬಾರೊಮಾವ ಶೀರೇಕು ಪ್ಪುಸವಾ ಕೊಡ್ಸೋಮಾವ | ಬೆಂಗ್ಳೂರ್ಗೆ ಹೋಗಾನೆ ಬಾರೊಮಾವ ಓಲೇಬು ಗ್ಡಿಕೊಡ್ಸೋಮಾವ | ಅರ್ಸೀಕೆರೆಗೆ ಬಾರೋಮಾವ ಕಡ್ಲೇಪೂರಿ ಕೊಡ್ಸೋಮಾವ | ಆಯ್ಯಾವ್ರಸ್ಸಂತೆಗೆ ಬಾರೋಮಾವ ಆಗೋಸಾಮಾನ್ಕೊಡ್ಸೋಮಾವ | ಮೈಸೂ ರ್ಗೋಗಾನ್ಬಾರೋಮಾವ ಪೌಜೂಗಿವ್ಜುತೋರ್ಸೋಮಾವ ||ಯಾಕೋಮಾವ|| ಸೋಬಾನದಿಂದ ಸುಖದಿಂದಾ ಸೋಬಾನುವೇ | ಬಸ್ವಾನಕಟ್ಟೋರ್ಗೆ ಬೊಗ್ಸೇಲಿ ಹೊನ್ನೊಂಟು ಕೆಸರುಕೆಂಭತ್ತೀಬಯಲುಂಟೊ | ಉದ್ದೀಸಕಾಯ್ದಂಗೆ ತಿದ್ದಿ ಅವರ ಬಸವನ ಗುಬ್ಬೀಲಿ ಅವರ ಶರಣಾರೂ | ಉತ್ತಾಹೊಲದಲ್ಲೀ ಸೆಟ್ಟಾವೆಮಲ್ಲೀಗೇ ಸೆಟ್ಟಾಮಲ್ಲೀಗೇವನವಾದೋ|ಕಟ್ಟೀಕೆಳಗಲಾಪುಟ್ಟಾಮಲ್ಲಿಗೆಹೂವಾಹತ್ತೆಂಟಕೂ ಯ್ದೀಕೈತುಂಬಾ | ಹೆಣ್ಣಾಕೊಡ್ರಮ್ಮಾದೇಶ್ವಾತೀರಾಯಾಗೆ ಮಾಶಿಕಪ್ಪತ್ತೀಬರು ವಾಗಃ | ನಾಳೇನಮ್ಮಾಸೇಬಾಲನ್ಗೇ ಶೊಭಾನೇ ಎಲ್ಲಾಬನ್ನೀರೊ ಬಸವಣ್ಣಾ | ಹೆಣ್ಣೊಸಮುಗಾದೊ ಹಣ್ಣೊನಿಮುಗಾದೊ ಮಾಡಿದಾ ಅಡಿಗೇ ಸಭೆಗಾದೋ | ಮದುವೇಗೆಬರುವಾರೂ ಎಂತೆಂತಾಶರಣಾರು ಅಣಕುತ್ತಾತೊಟೀಮಿಣುಕುತ್ತಾ |

|| ವೀಧ್ಯೆ | ವೀಧ್ಯೆ | ವೀಧತ್ತ ||

೧೯

ಓನಾಮಾದೈಯ್ಯಾ ಗೋಪಾಲದೈಯ್ಯಾ ಗೋಪಾಲಶ್ರೀಯಂಗಟೇಶಾ ನೂರಾಯಾ | ಹೊತ್ತಿಸಂತೆ ಎದ್ದೂ ಮತ್ಯಾರನೆನದೇವೂ ಹತ್ತೆಂಟುನಾಮದ ಒಡೆಯಾಸ ಸೈಯ್ಯ || ಊರಿಗ್ಗಿಂದಾಗಿ ನೀರ್ಗೆಪುಂದಾಗಿ ನಾಮಾನಿಕ್ಕೋಸೂ ಇವನ್ಯಾರೂಸೈಯ್ಯ | ನಾಮಾನಿಕ್ಕೋಸೂ ಇವನ್ಯಾರುಮಾಡ್ನಾಡ ಸೇರಾನೀಮುಖದಾತಿಮ್ಮಯ್ಯಾ | ನಾಮಾನಿಕ್ಕಿದ್ರೇನೇಮಾದಿಂದಿಕ್ಬೇಕು ನಾಲ್ವಾರಯೆಂಜಲ ಬಿಡಬೇಕೋ | ಗಂಧಾನಿಕ್ಕಿದ್ರೆ ಅಂದದಿಂದ ಇಕ್ಕಬೇಕು ಕಂಡೋರಯೆಂಜಲ ಬಿಡಬೇಕುಸೈಯ್ಯ | ತಿರುಪತಿಗೆಹೋಗಾನೆ ತಿದ್ದಣ್ಣಹೋರೀಯ ಗೆಜ್ಜೆಸರಪಾಣೀ ಧರಿಸಣ್ಣಸೈಯ್ಯ | ದಾಸೈಯ್ಯಕಾಣೇ ಸೋಸೀದಲಾವಾಣೀ ಏಸ್ದಿಸ್ಕಬಂದ್ಯೋ ಮನಸ್ವಾಪಿಯಾ | ದಾಸೈಯ್ಯಬಂದಾ ಹಾಸೀರೆಗುಡಿಸೀರೆ ಕ್ಯಾಸಕ್ಕಿಮುತ್ತಾಹರದೀರೇಸೈಯ್ಯ | ರಾಯಾರಾಯಾರೀಗಿಂತಾರಾಯಾಕಾಣೊ ತಿಮ್ಮೈಯ್ಯನೂಲಾ ಗೋಣೀಯತರಿಸಾನು | ನೂಲಗೋಣೀಯತರಿಸೀ ಹೊನ್ನಾನೆತುಂಬೀ ಗೋವಿಂದ್ನಗಿರಿಗೇಕಳಿಸಾಸೂಸೈಯ್ಯ | ಅಪ್ಪಾನಗಿರಿಮೇಲೆ ತುಪ್ಪಾದಜಾರೀಕೆ ಬಿತ್ತಾರಿ ನೆರಿಗೇಬಿಗಿದೂಡೀಸೈಯ್ಯ | ಅಣ್ಣಾನಗಿರಿಮೇಲೆ ಎಣ್ಣೇಯಜಾರೀಕೆ ಸೊನ್ನಾರೀ ನೆರುಗೇಬಿಗಿದೂಡೀಸೈಯ್ಯ || ಓನಾಮ ||

೨೦

ಉಯ್ಯಾಲೇ ಬಣ್ಣದುಯ್ಯಾಲೇ ಶ್ರೀಗಂಧಕ್ಕಮ್ಮೋಜೇಸುಯ್ಯಾಲೇ | ಉಯ್ಯಾಲೇನಾಡೋಳೆ ಉಯ್ಯಾಲೆಪಾಡೋಳೆ ಉಯ್ಯಾಲೆಸಣ್ಣಾಧ್ವನಿಯೋಳೆ | ಉಯ್ಯಾಲೇಸಣ್ಣಾಧ್ವನಿಯೋಳೆ ಕಾಳವ್ವ ಉಯ್ಯಾಲೆನಿಳಿಯೇ ಧೊರೆಬಂದಾ | ಜೀಕಾಲೆನಾಡೋಳೆ ಜೀಕಾಲೆಪಾಡೋಳೆ ಜೀಕಾಲೇಸಣ್ಣಾ ಏ ಧ್ವನೀಯೋಳೆ | ಕೈಯ್ಯಕಂಕಣದೋಳೆ ವೈಯ್ಯಭೂಷಣದೋಳೆ ವೈಯ್ಯಾರಿಸಣ್ಣಾಧ್ವನಿಯೋಳೆ | ಮಾವೀನಾಮರದಾಡೀ ಮಾನಿದ್ರೆಮಾಡೋಳೆ ಮಾರುದ್ದಮಂಡೇ ಏ ಮುಡಿಯೋಳೆ | ಮಾರುದ್ದಮಂಡೇಧರಿಸೊದೊಡ್ಡಮ್ಮಾ ನಿನ್ನಮಾಯಾ ಒಬ್ಬರಿಗೂ ತಿಳಿಯಾದೋ | ಪರಿಮೇಲೆಕುಳಿತೂ ಯಾರನೋಡಿದೊಡ್ಡಮ್ಮಾ ದೂರಹೋಗಿ ಅವನೇ ನಿನ್ನಮಾಗಾ | ದೂರಹೋಗಿ ಅವನೆ ನಿನ್ನಮಾಗದೊಡ್ಡಮ್ಮ ಪೂಜೆಗೆ ಹೊಂಬಾಳೆ ತರುವದಕೇ | ಮಾಯಾದದೊಡ್ಡಮ್ಮ ಮಾಘೀನಮರವೇರಿ ಎಟಕೀಸಿನೋಡ್ಯಾಳೊ ಏ ತವರೂರ || ಉಯ್ಯಾಲೆ ||

೨೧

ಲಗುಬೀರಣ್ಣಾ ಲಗುಬೀರಾ ಚಲ್ ಲಘಾಟಿಕೊರವಮರುಬರುತಾರೆ | ಲಘಿ
ವೀಶಿಂಗೀಲಘಿವೀಯೆ ಲಘಿವೀಶಿಂಗೀ ಮಗುವೆಲ್ಲೀ | ಸೀಸುಮಗುವಾಸಾಕೋದ್ನಿ
ಜವೇನೆ ಕಳ್ಳಕೊರಮಣ್ಬರುತಾನೆ | ಚೋರಕೊರಮಣ್ಬರುತಾನೆ || ಏರೀಯಕೆಳಗೇ
ಹೋದಳುಕೊರವಂಜಿ ಹಾರಿಸಿಹುಲ್ಲಾ ಹೆಣೆದಳುಕೊರವಂಜಿ | ಆರೂಕಾಲಿನಸೆಲುವ
ಹೆಣೆದಾಳುಕೊರಸಂಜಿ ಗೌಡುಗೋಳಬೀದೀಗೆ ಹೋದಾಳುಕೊರವಂಜಿ | ನೆಲ್ಲೊ
ನೆಲ್ಲೊ ಎಂದುಸಾರ್ಯ್ಯಾಳು ಕೊರವಂಜಿ ಹಣವೀಗೊಂದೂಸೆಲವ ಮಾರ್ಯ್ಯಾಳುಕೊರ
ವಂಜಿ | ಹಾರವ್ರಕೇರೀಗೇ ಹೊರಟಾಳುಕೊರವಂಜಿ ಗಿಳ್ಕೆಗಿಳ್ಕೇಎಂದು ಸಾರ್ಯ್ಯಾ
ಳುಕೊರವಂಜಿ | ಬೀದೀಬೀದಿಯುಮೇಲೆ ಹೋದಾಳುಕೊರವಂಜಿ ಕೇರಿಕೇರಿಯ
ಮೇಲೆ ಹೋದಾಳುಕೊರವಂಜಿ | ಕಣಿಯು ಕಣಿಯೂಎಂದು ಸಾರ್ಯ್ಯಾಳೂಕೊರ
ವಂಜಿ ಬಾರೆಕೊರವಂಜೀ ಬಾರೆಸಮ್ಮನೆಗೇ | ಕೈತಾರೆ ಕೈತಾರೆ ಕೈತಾರೆದುಂಡೀ
ಕೈನೋಡಿಕಣಿಯಾನು ಹೇಳ್ತೀನಿಮಗಳೆ | ನೀ ಬಡಾಗ್ಲಲಶೀಮೇಗೆ ಹೋಗಿದ್ದೆಮ
ಗಳೆ ಬಾಳೇಯುಮರದಾಡಿಮಲಗಿದ್ದೆಮಗಳೆ | ಬ್ಯಾಡಾರಾಗಾಳಿಸಿಂಗ್ಹಿಡ್ದಾದೇವ
ಗಳೇ ಭಾರೀಯುಪೂಜೇಯ ಹಾಕಲುಬೇಕು | ನೀಮೂಡ್ಲಶೀಮೇಗೆಹೋಗಿದ್ದೆಮಗ್ಳೆ
ಮುತ್ತಗದಮರದಾಡಿ ಮಲಗಿದ್ದೆಮಗಳೆ | ತುರುಕಾರಗಾಳೀ ಹಿಡಿದಾದೇನಿನಗೇ
ಭಾರಿಯಂತ್ರವಕಟ್ಟಿಸಾಲೂಬೇಕು || ಲಗು || ಪ || ಮಂಗಳ್ವಾರದದಿವ್ಸ ಮನೇ
ಸಾರಿಸಬೇಕು ರಂಗೋಲೆಪುಡಿಯಾಸು ಬರೆಯಾಲೂಬೇಕು | ಹಣ್ಣುಕಾಯಿ ಎರ
ಡೂವೆಮೊದಲಾಗಾಬೇಕು ಕಳಿಅಡಿಕೆಚಿಗೂರೇಲೆ ಮೊದಲಾಗಾಬೇಕು | ಕರ್ಪೂರ
ಸಾಮ್ರಾಣಿ ಊದೀನಕಡ್ಡಿ ನಿಂಬೇಯುಹಣ್ಣೂ ಮೊದಲಾಗಬೇಕು | ಕಣ್ಣೀಗೆಬೇ
ಕಾದ ಹೂವ್ವಾಗಬೇಕು ಕೊರವಂಜೀದಿಟ್ವಾನೀನೋಡಬೇಕು | ನಾಕೂಮೂಲೆಗು
ನಾಲ್ಕುಹಣವಾಗಬೇಕು ನಟ್ಟನಡುವಿಗೆ ಒಂದುವರಹಾವಾದರೂಬೇಕು | ಒಳ್ಳೇದು
ಒಂದೂ ಹುಂಜಾಗಾಬೇಕು ಮುಂದೂಒರೋದೊಂದು ಟಗರಾಗಾಬೇಕು ||
ಲಗು ಬೀರಣ್ಣಾ || ಪ ||

೨೨

ಕಿನ್ನೂಡೀ ಕಿರುಗೆಜ್ಜೀ ಕಿವೀಗೆ ನಾಗುರ ಸುತ್ತೂಕಿನ್ನುಡಿಮೇಲೆ ಕಿರು
ಗೆಜ್ಜೀ | ತಾದನೊ | ಚಿನ್ನಾವ ತೂಗ್ಯಾರೊ ರನ್ನಾವ ತೂಗ್ಯಾರೊ ನಿನ್ನ್ಯಾರು
ತೂಗ್ಯಾರೊ ಮೊಳಗಿಲ್ಲಿ | ಮುತ್ತಾನೆ ತೂಗ್ಯಾರೊ ಮಾಣಿಕ್ಯವ ತೂಗ್ಯಾರೊ

ನಾಗವ್ನ ಕಂದಾನಾ ತೂಗ್ಯಾರೊ | ವೊ | ಈರಣ್ಣ ಬರುವಾಗ ನೀರೆರಡು ಭಾಗಾದೊ ಗೋರೀಕಲ್ಲೆರಡೂ ಇಡಿವೂಡೀ | ಎರಿಯಾಹತ್ಯಾನೊ ಎಳೆಗೊಂಬೆ ಮುರಿದಾನೊ ಸಾರಾನೋಸಣ್ಣಧ್ವನಿಯಲ್ಲೀ ಸಾರಾನೊಸಣ್ಣಧ್ವನಿಯಲ್ಲಿ ಈರಣ್ಣ ಹಾರಾನೊಹುಲ್ಲೇಮರ್‍ಯಾಗೇ | ಎರೀಯ ಹತ್ಯಾನೋ ನೀರಾಳನೋಡ್ಯಾನೊ ಎರಿಗೂ ನೀರಿಗೂ ಸಮನೆಂದಾ | ಅಲ್ಲೀ ಮಲ್ಗ್ಯಾವೆ ಹುಲ್ಬಾಯ ಜಿಡ್ಯಾವೆ ಸಾರಂಗವೆಲ್ಲಾ ಸೋಕಾಮೂಡಿದವೂ | ಆಡಿ ಒಂದೋಮರಿಗಳು ಮೇದುಬಾದೋ ಹುಲಿಗಳು ನೋಡಾಡಿ ಬಂದಾ ಈರಣ್ಣ ಯಾವಾಗ ನೋಡಿದ್ರು ಕೋಪೀ ಹೆಗ ಲಮೇಲೆ ಆವಿಗೆಬತ್ತೀ ಬಲಗೈಲಿ | ಜಾಲೀಗೇ ಬತ್ತೀ ಬಲಗೈಲಿ ಹಿಡ್ಕೊಂಡು ಒಬ್ಬಾನೆ ಹೊಡೆದಾನೂ ದೊರೆಮೂಗಾ | ತಂದನೊ ||

೨೩

ದಂಡೇತಾರುದಂಡೇಸ್ವಾಮಿ ದಂಡೇ ಮುತ್ತಿನ ದಂಡೇಗೋಳ | ಮಂಟ ಪಾದ ಮಾನೇಕಟ್ಟಿ ಪಾಂಡಾವಾರು ಲೆತ್ತಾನಾಡಿ ಮತ್ತೆ ಸೋತರೋ | ಇಂಬೀ ಯವನದಲ್ಲಿ ತಳುಗಿದ್ದ ಇವರ್‍ಯಾರೊ ಇಂಬೀಯಹಣ್ಣಾ ಒಲೆಹೂಡೀ | ಇಂಬೀ ಯಾಹಣ್ಣಾಒಲೆಹೂಡಿ ಅಟ್ಕಂಡೂ ಮೂಡಹೋಗವ್ರೇ ಏ ವನದೇಶ | ಬಡಗಾ ಹೋಗವ್ರೇ ವನದೇಶ ಪಾಂಡವರ ಎತ್ತೂ ಹೋಗೀ ಕಾಡಾ ಏ ಮೊಲವಾದೊ | ಎತ್ತೂ ಹೋಗೀ ಕಾಡಾಮೊಲವಾದೊ ಪಾಂಡವರ ಎಮ್ಮೆ ಹೋಗೀ ಕಾಡಾ ಏ ಕಾಡಬ್ಯಾದೋ | ಕುರೀಹೋಗೀ ಕಾಡ ಇರವಾದೋ ಪಾಂಡವರ ಗಂಗಾಳಾ ಹೋಗೀ ತಾವರೆಎಲೆಆದೋ | ಚಂಬೂಹೋಗೀ ಅವರತುಂಬೇಗಿಡವಾದೊ ಏಣ್ಣೀ ಹೋಗೀ ಕಾಡಗೊರಿವ್ಯಾದೊ | ಸತ್ಯವುಳ್ಳ ಪಾಂಡವರು ಸತ್ತಾರೆನ್ನಲುಬ್ಯಾಡ ಸತ್ತಾರೆಲೋಕಾ ಏ ಊಳೀಯಾದೂ ಸತ್ತಾರೆ ಲೋಕಾಊಳಿಯಾದು ಪಾಂಡ ವರು ಬಿತ್ತೀಹೋಗ್ಯವ್ರೇ ಏ ಅವರೇಯ || ವೀಧ್ಯೆ | ವೀಧ್ಯೆ | ವೀಧತ್ತಾ ||

೨೪

ರಂಗೈಯ್ಯ ರಂಗಾವೂ ರಂಗಾರಂಗಾ ರಂಗಾನಮೇಲೇದಯವಾಗೋ | ಉದ್ದೀನಾ ಗಿಡಮುರಿದೂ ಗುದ್ದಾಲೀ ಕಾವಾದೊ ತಿದ್ದಿದೋವು ಏಳು ಏ ಹಲಿ ಗಾದೊ | ಕಡಲೆಗಿಡಮುರಿದು ಕೊಡಲೀಯ ಕಾವಾದೊ ಕಡದಾವು ಏಳೂ ಏ ಹಲೀಗಾದೊ | ರಂಗೈಯ್ಯಾ ಗುಡಿಯಾ ಬಾಗಿಲಗೆ ನಿಲವಾದೊ ರಂಗೈಯ್ನ ಗುಡಿಯಾ ಬಾಗಿಲಗೆ ಕದವಾದೋ | ಬಾಗೂರು ಬಡಗೀಯ ಬೇಗಾನೆ ಬರಹೇಳಿ

ಭಾರೀ ಗುಳುವಾಚೀ ಏ ಸಹಿವಾಗೀ | ಭಾರೀ ಗುಳುವಾಚೀ ಸಹಿವಾಗಿ ರಂಗೈಯ್ನ ಭಾರೀಯಾತೇರಾ ಏ ಕಡದಾರೊ ತಿಟ್ಟೂರ ಬಡಗೀಯು ತಟ್ಟಾನೆ ಬರಹೇಳಿ ಕಟ್ಟೀ ಉಳವಾಚೀ ಏ ಸಹಿವಾಗಿ ಕಲ್ಲಾನೆ ಕುಟುಕೋರು ಚೇಣೂರು ಪಾಂಚಾಳ್ರು ಚಿನ್ನಾದಾ ಉಳಿಯಾ ಏ ಮಸಕೊಂಡು ಚಿನ್ನಾದಾ ಉಳಿಯಾ ಮಸಕೊಂಡು ರಂಗಯ್ನ ಕಲ್ಲುಮಾಳಿಗೆ ಏ ಕಡದಾರೋ ದಾಳಾದಬಾಸ ಏಳೂ ಚೂರೀಪಾಸ ದಾಳಾಕಿಂತಾ ಮುಂದೇ ಏ ಬರೂವ್ರೋನೆ ದಾಳಾಕಿಂತಾ ಮುಂದೆ ಬರುವ್ರೋ ರಂಗಯ್ಯಾಗೆ ಛತ್ರೀ ಹಿಡಿದಾವ್ರೂ ಏ ಹುಲಿಕರಡೀ ಮುರುಡಾದ ನಡಿನೋನೆ ಜೋಡುಸಂಕಿನೋನೆ ರಾಜ್ಯಾವನೆಲ್ಲಾ ಸಲುವ್ರೋನೆ ರಾಜ್ಯಾವನೆಲ್ಲಾ ಸಲುವ್ರೋ ರಂಗೈಯ್ಯಾನೆ ದೂರಾದಪರ್ಸೀ ಏ ಕವಿದಾವ್ರೋ ಸ್ವಾಮಿಾ ರಂಗೈಯ್ನ ತೇರು ಮೇಲಕ್ಕೆ ಹೋಗುವಾಗ ಎಪ್ಪತ್ತು ಪಂಜೂ ಏ ಹಿಡಿಕುದುರೆ | ಸ್ವಾಮಿಾ ರಂಗೈಯ್ಯಾ ತೆಪ್ಪದ್ಕೊಳಕ್ಹೋಗೂವಾಗ ಇಪ್ಪತ್ತು ಪಂಜೂ ಏ ಹಿಡಿದಾರೋ ತಿರುಪತಿಗ್ಹೋಗಾನೆ ತಿದ್ದಣ್ಣಾ ಹೋರೀಯು ಗೆಜ್ಜೆಸರಪಣಿ ಧರಿಸಣ್ಣಾ ||

೨೫

ನೋಡವಳಂದಾವ ಹೂವಿನಮಾಲೆಯು ಚಂದಾವಾ || ಅಕ್ಕ ಕರಿಯುವ್ವ ತಂಗೀಯು ಭದ್ರಕಾಳಿ ತೆಂಗಿನಹಣ್ಣಾ ಏ ಬಲೆಹೂಡಿ ತೆಂಗೀನಹಣ್ಣಾ ಬಲೆಹೂಡಿ ಅಟ್ಟಲ್ಲೋ ತಮ್ಮ ಭದ್ರೈಗೇ ಏ ಅಡಿಗೇಯಾ | ಅಡಿಗೇಯು ಅಟ್ಟಾಳು ಬೆಡಗೀನ ಭದ್ರವ್ವಾ ಅಟ್ಟಅಡಿಗೆಲ್ಲಾ ಏ ಅರಶೀನ ಅಟ್ಟಅಡಿಗೆಲ್ಲಾ ಅರ್ತೀನ ಶೀಗೆಕಾಯಿ ಉಂಡಬಾಯಲ್ಲೀ ಗಮುಗಾಮಾ | ಆಳೂ ಉಣ್ಣೋವಾಗ ಧೂಳೂ ಕವಿಯೂವಾಗ ಆಲೀಕೊಳ್ಳೋರೂ ಇವರ್ಯಾರೋ ಆಲೀಕೊಳ್ಳೋರೂ ಇವರ್ಯಾರು ಕರಿಯುವ್ವ ಆಳುಂಡೂಮನೆಗೇ ಏ ಬರೂವಾಗ ಕೆರೆಏರೀಮೇಲೇ ಬರುವ ಕರಿಯುವ್ವಾಗೆ ಧೊರೆಗಾಳು ಬೀಸ್ಯಾರು ಚವಲಾಪ | ಕಕ್ಕೆಕಾಯ್ಹಂಗೆ ಹಾಕ್ಯಾರೆ ಹುಲಿಬಣ್ಣಾ ಜೀಗುಟ್ಟುತಾವೇಸರಮುತ್ತೂ | ಜೀಗುಟ್ಟುತಾವೇ ಸರಮುತ್ತು ಕರಿಯೌವ್ವ ಧೂಪಾದಂಗಡಿಗೇ ಏ ದಸುಮಾಡೆ || ನೋ || ಪ || ಮೀಧೈ | ಮೀಧೈ | ಮೀಧತ್ತ ||

೨೬

ಸುವ್ವಬನ್ನೀರೋ ಸಭೆಗಾಳೆಲ್ಲಾ ವೇಸಂಗಿದಾಸಾರುಪಾಡೂತ || ಹಟ್ಟಿಕಲ್ಲಿಗೆ ಪುಟ್ಟುಗಂಧಾವನಿಕ್ಕಿ ಪಟಬಾಳೇಹಣ್ಣಾ ಏ ಸುಲದಿಕ್ಕಿ ಪುಟಬಾಳೇಹಣ್ಣಾ

ಸುಲದಿಕ್ಕಿ ಒಳಗೀರೋ (ಸ್ತ್ರೀರ) ಸಿಸ್ತ್ರೆಬಂದಕ್ಕೀ ಏ ತೋಳೆಸಾರೋ | ಹಾದೀ ಕಲ್ಲಿಗೆ ತೇದ ಗಂಧಾವನಿಕ್ಕಿ ಬೂದುಬಾಳೆಹಣ್ಣಾ ಏ ಸುಲದಿಕ್ಕಿ ಬೂದೂಬಾಳೇಹಣ್ಣಾ ಸುಲದಿಕ್ಕಿ ವಳಗೀರೋ ಬಾಲೆ ಬಂದಕ್ಕೀ ಏ ತೊಳಿಸ್ಯಾಳೋ ಹಟ್ಟೀಲಿ ಕಲ್ಲೊರಳು ಕೊಟ್ಗೀಲಿ ಸೇದೊಭಾವಿ ಎತ್ತೀಕುಟ್ಟಿದರೇ ಘಣಿರೆಂದೋ ಹಾದೀಯು ಕಲ್ಗಾಳು ಬೀದೀಯುಭಾವ್ಗಾಳು ಹಾಡೀ ಕುಟ್ಟಿದರೇ ಘಲಿರೆಂದೋ ಹಾಡೀ ಕುಟ್ಟಿದರೇ ಘಲಿ ರೆಂದೋ ವನಕೆಯ ಮಾಡಿದ ಬಡಗೀ ಏ ಸುಖಿಬಾಳೋ ರಾಗೀಯು ಬೀಸೂತ ರಾಗಾವಪಾಡುತ ನಾರಾಯಣಸ್ವಾಮಿಯು ನೆನೆಯುತಾ | ಬತ್ತಾವ ಕುಟ್ಟುತ್ತಾ ಚಕ್ಕಂದನಾಡೂತ ಮುಕ್ಕಣ್ಣೀಶ್ವರನಾ ಏ ನೆನೆಯುತಾ ಮುಕ್ಕಣ್ಣೀಶ್ವರನಾ ನೆನೆ ಯುತ್ತ ಕುಟ್ಯಾರು ಸ್ವಾಮಿ ನನ್ನೈಯ್ಯನಾ ಏ ಮದುವೇಗೆ | ವಾರಾರಗಿತ್ತೀರು ನಾರೀರು ಮೂವ್ವಾರು ಬ್ಯಾರೇ ಬಂದೂಶರಗಾ ಏ ಮೇಲೆಕಟ್ಟಿ ಬ್ಯಾರೆ ಬಂದೂ ಶೆರಗಮೇಲೆಕಟ್ಟೀಕೊಂಡು ತುಂಗಿಬಿಟ್ಟಾರೂ ಜಂತಾದ ವನಾಕೇಯು | ಅಕ್ಕಕ್ಕಾ ತಂಗೇರು ಲೆಕ್ಕಾಕೇಳೂಮುಂದಿ ಅಕ್ಕೀಲಿ ಎಳ್ಳೂ ಬೆರದ್ಹಂಗೆ ಅಕ್ಕೀಲಿ ಎಳ್ಳೂ ಬೆರ ದ್ಹಂಗೆ ಮಾಡ್ಯಾರು ಚಿಕ್ಕ ತಮ್ಮೈಯನಾ ಏ ಮದೂವೇಯ ಮನೆಹಿಂದಲ್ಮಾವು ನೆನದಾರೆ ಘಮ್ಮೆಂದೊ ನೆನದ್ಹಂಗೆಬಂದಾ ಏ ನನ್ನ ತಮ್ಮಾ ನೆನೆದಂತೆ ಬಂದಾ ನನ ತಮ್ಮ ಬಾಳೇಯ ಗೊನೆಯ್ಹಂಗೆ ತೋಳಾತಿರವೂತಾ | ನೆನೆಹಾಕೀದಕ್ಕಿ ಮನೆ ಯಲ್ಲಾ ಘಮ್ಮೆಂದೋ ನೆನದ್ಹಂಗೇ ಬಂದಾ ನನ ತಮ್ಮಾ | ಏಧೈ |ಏಧೈ |ಏಧತ್ತ ||

೨೭

ನಿಲ್ಲೂ ನಿಲ್ಲೈಯ್ಯರಾಜ |ನಿಜವಾನಾವೇನೂಬಲ್ಲೊ ಮಲ್ಲೀಗೆಹಾರಗಳೆ ಲ್ಲಾವೊ ನಿಲ್ಲೈಯ್ಯ | ನಿಮ್ಮಕೇರಿಗೆಬಂದರಿನ್ನೂ ನಿಮ್ಮತ್ತೆಮಾವಾ ಕಂಡರೆಹೆಣ್ಣೆ ಏನೆಂತಾಕೇಳುವರ್ಹೆಣ್ಣೆ ರಾಜ ನಿಲ್ಲೈಯ್ಯರಾಜ | ಅತ್ತೆಯಾದರೆಸಂತೆಗೆಹೋದಳು | ಮಾವನಾದರೆ ಮನೆಯಲಿಲ್ಲ ಗಂಡಾನಾದರೆ ದಂಡಿಗೆಹೋದ || ನಿಲ್ಲು || ಹಾಗಂದ ಮಾತಾಕೇಳಿ ನಾಳೆಬರುವೆನಿನ್ನ ಬಳಿಗೆ ಮನೆಯಕುರುಹ ತೋರ್ಹೆಣ್ಣೇ ನಿಲ್ಲೈಯ್ಯ ರಾಜ | ಹಿತ್ತಲ್ಲಿಕಿತ್ತಾಳೆ ಮುಂದೆ ಬಜಾರಾದ ಅಂಗಾಡಿ ಕತ್ತಾಲೆ ಕವಿದಾವೂ ಕಣ್ಣಿಗೇ ನಿಲ್ಲಯ್ಯರಾಜ | ಮನೆಯಗಂಡಮಾತುಭಾರಿ ಮಂಚಾಬಿಟ್ಟು ಇಳಿಯ ಲಾರದಾಟೀಬಾರೋ ಮೋಟುಗೋಡೇಯಾ ನಿಲ್ಲೈಯ್ಯರಾಜ | ಕಾಚೇನ್ಹಳ್ಳಿಯ ಮೇಲೆ ಕಾಯಿಮೊಸೊಪ್ಪುಕೂಯೋಬಾಲೆಕರ್ಡ್ರಾರೇಕೆ ಮಾತಾನಾಡೊಲ್ಲೆ ನಿಲ್ಲೈಯ್ಯ ರಾಜಾ | ಅತ್ತಾನೋಡು ಇತ್ತಾನೋಡು ಚಿತ್ರಲ್‌ಕಲ್‌ದುರ್ಗಾನೋಡುಗುಡ್ಡಾ ಹತ್ತಿನೋಡು ನಮ್ಮತಮ್ರೋ ನಿಲ್ಲಯ್ಯರಾಜಾ || ಏಧೈ | ಏಧೈ | ಏಧತ್ತ ||

೨೮

ಉದರ ಉದರಿ ಮಲ್ಲೀಗೆ ನೀ ಉದರಾದೀರೂಮಲ್ಲೀಗೆ | ಉದರೀದಾರೆ ಶಿವನಾಪಾದದಾಣೇಮಲ್ಲೀಗೆ | ಮಲ್ಲೀಗೆಮಳೆಹುಯ್ಯಲೋ ಜೋಜೀಗೆಕೆರೆಕಟ್ಟಾ ಲೋ ನೀಬಾಗಾದೀರೋ ಮಲ್ಲೀಗೆ ನೀಬಳಕಾದೀರೂ ಮಲ್ಲೀಗೆ ನೀಬಾಗೀದಾರೇ ಶಿವನಾಪಾದದ ಆಣೇಮಲ್ಲೀಗೆ ||

ಸೋಬಾನದಿಂದ ಸುಖದಿಂದಾ ಸೋಬಾನುವೇ | ಗಿರಿಜೀಯ ಕೇಳೊಕೆ ಗಿರಿ ಯಿಂದಮಲ್ಲೈಯ್ಯಬಂದ ಗಿರಿಯುದ್ದಹೊನ್ನುಗಳಕೊಂಡೂ || ಸೋ || ಗಿರಿವೃದ್ಧ ಹೊನ್ನಾ ಅಳಕೊಂಡುಬಂದವ್ರೆ ಗಿರಿಯು ದೂರೆಂದೂ ಗಿರ್ಜೀಯಕೊಡರಂತೆ | ಪರ್ವತವೆಂಬೋಕುದುರೆ ಏರೀಕೊಂಡು ಗಿರಿಜೆಕೇಳಾಕೇಶಿವಬಂದಾ | ಹಾಲೂ ಅನ್ನಾ ಉಣ್ಣು ಸರಮುತ್ತುನೀಕಟ್ಟು ಸಾಲುಮಾಳಿಗೆಯಲ್ಲಿ ಇರುವಂಥಾಗಿರಿಜೀ | ಸಾಲೂಮಾಳಿಗೆಯಲ್ಲಿ ಇರುವಂಥಮೂಡಲರಾಯಾಗೊಳಿಗೆ ನಿನ್ನಕೊಡಬೇಕೋ | ಹಾಲೂ ಅನ್ನವಲ್ಲೆ ಸರಮುತ್ತಕಟ್ಟೊಲ್ಲೆ ಸಾಲೂಮಾಳಿಗೆಯಲ್ಲೀ ಇರವೊಲ್ಲೇ| ಸಾಲೂಮಾಳಿಗೆಯಲ್ಲಿ ಇರವೊಲ್ಲೆ ಮೂಡಣರಾಯಗೊಳು ನಮ್ಮಹಿರಿಯಣ್ಣಾಂದಿರು | ತುಪ್ಪವನ್ನ ಉಣ್ಣುಗಿರಿಜೆ ಬಟ್ಟುಮುತ್ತಕಟ್ಟುಗಿರಿಜೆ ಪಟ್ಟಾಮಾಳಿಗ್ಯಲ್ಲಿ ಈರೂಗಿರಿಜೆ | ಪುಟ್ಟಮಾಳಿಗ್ಯಲ್ಲಿ ಇರುಗಿರಿಜೆ ಮೂಡಲ ಶಿಟ್ಟೀಗೋಳಿಗ್ನನ್ನಾ ಕೊಡಬೇಕೋ ಸೋಬಾನುವೆ | ತುಪ್ಪವನ್ನವಲ್ಲೆ ಬಟ್ಟುಮುತ್ತುಕಟ್ಟವಲ್ಲೆ ಪುಟ್ಟು ಮಾಳಿಗೇಲೀ ಇರವಲ್ಲೇಸೋಬಾನುವೇ | ಪುಟ್ಟಾಮಾಳಿಗೆಲ್ಲಿ ಇರುವೊಲ್ಲೇ ಮೂಡಲಶೆಟ್ಟಿಗೋಳು ನಮ್ಮ ಕಿರಿಯಣ್ಣಾಸೋಬಾನುವೆ | ಕಾಡೂಗಣ್ಣೀನೋಳೆ ಕೂಡೀದಹುಬ್ಬಿನೋಳೆ ಕೋಡೀಲಿನೀರಾ ಮೊಗಿಯೋಳೆ | ಏ ಕೋಡೀಲನೀರಾಮುಗೆ ಯೊಗಿರಿಜೆಯಕಂಡು ಮಲ್ಲೈಯ್ಯ ಜಪವಾಮಾಡೂತಾರೆ | ಜಪಾವಮರೆತಾರು ಏನೆಂದುನುಡಿದಾರು ಗಿರೀಜೆನಮ್ಮಗಿರಿಗೆ ಬರಬೇಕೊ | ಗಿರೀಗೆಬರುವುದು ನ್ಯಾಯುವೆಶರಣರೆ ಬಂದುಹೋಗಿ ನಮ್ಮ ಅರಮನೇಗೆ ನೀವೇ || ಸೋ || ಪೀಲ್ಲೀಯಕಾಲಿನೋಳೆ ಚಲ್ಲೀದನಡುವಿನೋಳೆ ತಲ್ಲಣಿಸಿನೀರಾಮುಗಿಯೋಳೇ | " ಪಟ್ಟೀಶೀರೇಯಾ ಎತ್ತಿನ್ಮೇಲೆಹೇರಿಕೊಂಡು ಹೋಗಿಬನ್ನಿ ಅವ್ರಮನೆಗಂಟಾ ನೀವು | ಶಾಲೂ ಶೀರೇಯಾ ಹೋರಿಮ್ಯೋಲೆಹೇರಿಕೊಂಡು ಹೋಗಿಬನ್ನಿ ಅವರಮನೆಗಂಟಾ ಸೋಬಾನುವೆ || ಹೋಗಿಬನ್ನಿ ಅವ್ರಮನೆಗಂಟಾವಗಿರಿಜೆಯ ಕೊಟ್ಟಾರೊ ಕೊಡರೂ ಕೇಳಿಬನ್ನಿ | " (ಪಟ್ಟೀಸಿರೆಯ ಕೇಳಿಬನ್ನಿ ಇಲ್ಲಿಯವರೆಗೆ ಗಿರಿಜೆಯೇ ಹೇಳಿದವೂ ತೆಂದುತಿಳಿಯಬೇಕು) ಅಲ್ಲಿಂದ ಮನೆಗೆ ಬಂದು

ಹಟ್ಟೀಲಿಗಿರುಜಮ್ಮ ಕುಟ್ಟೊತ್ತೇನಂದಾಳು ಅಪ್ಪಾಜಿಸನ್ನಾ ಕೊಡಬೇಕೋ| ಹಾದೀಲಿಗಿರುಜಮ್ಮ ಹಾಡೂತೇನಂದಾಳು ತಾಯಮ್ಮ ಸನ್ನಾ ಕೊಡಬೇಕೋ | ಹಾದೀಲಿವ್ರುಗೋಳ್ನೀರು ಬೀದೀಲಿವರಗೋರು ತ್ಯಾಗಾದೆಲೇಹಿಡಿದು ತಿರಿದುಂಬೋ | ತ್ಯಾಗಾದೆಲೇಹಿಡಿದು ತಿರಿದುಂಬೋಜೋಗಿಯ ಪಸುಮೆಚ್ಚದೆ ಸೀರಗಿರುಜೇ | ಹಾದಿ ಅವರ ಅರಮನೆಬೀದಿ ಅವ್ರಪಟ್ಟಶಾಲೆ ತ್ಯಾಗಾದೆಲೆ ಅವ್ರಹರಿವಾಣಾ ಸೋಬಾನುವೇ | ತ್ಯಾಗಾದೆಲೆ ಅವರಹರಿವಾಣಾ ಅಪ್ಪಾಜಿಕೊಡು ಬೇಕೂಬೆಟ್ಟಾ ದಾಋುಷಿಗೊಳಿಗೆ | ತಾಯಮ್ಮ ಸನ್ನ ಕೊಡು ಬೆಟ್ಟಾದ ಎಪ್ಪತ್ತ ಒಂದೂ ಜಟೆಯಾ ಋುಷಿಗಳಿಗೇ | ಹಾದಿಯ ಅರುಬೀಯಜೋಡೀಸಿ ಆಯೋರು ಆಯದಲ್ಲಿ ಕಂತೆಹಿಡಿಯೋರೋ ಸೋಬಾನುವೆ || ಹಾದಿಯಲ್ಲಿ ಆಯ್ದುಅರುಬಿ ಹಸ್ರೂ ಸಕ್ಲಾತಿಕಾಣೆ ಆಯಿಾದಕಂತೆ ಅವರಮನೇಯಸ್ವಾಮಿಕಾಣೆ | ಇದ್ದಾಬೆಟ್ಟದಮೇ ಲೆಸಿದ್ದಾರು ಮೋರುತ (ಮುಹೂರ್ತ) ಮಾಡಿ ಜಿದ್ದಾತರಗೆಲೆಯಾಮೇಲುವೊರೋ ಹಸ್ರೊಚಿಗರೆಲೆಮೆಲುವೋರು ಬಂದಲ್ಲ ಹಸೆಯೊಳುಗಿರಿಜಮ್ಮ ಕೂಡಳಂತೇ | ಹಸೆ ಯೊಳುಗಿರಿಜಮ್ಮ ಕೂತದ್ದ ತಾಕಾಣ್ಣೆ ಅವರಪ್ಪಬ್ಯಾಗಸೊಂದು ಓಲೇಯಬರ ದಾನು | ಹತ್ತುಅಂಕಣದರಮನೆ ಮೇಲೆಬೋದಿಗೆಸಾಲು ಮಾಡಿಯಮೇಲಮಲ ಗಿರುವ್ರೋ | ಮಾಡಿಯಮೇಲೆ ಮಲಗಿರುವ ಮಲ್ಲೈಯ್ಯ ಓಲೆಬಂದಾವೇ ಓದೇ ಳೋ | ಓಲೆಬಂದಿದ್ದರೆ ನಾಳೋದಿಕೊಂಡೇನು ಮೂವಸಮಗಳುಸಿರಿ ಗಿರಿಜೇಸೋ ಬಾನುವೆ | ಮೂವಿಸಮಗ್ಳು ಶಿರಿಗಿರಿಜೆಕೈಲಿರುವ ಮುತ್ತೀನುಂಗುರುವಾ ಗೆಲು ಬೇಕೋ ಸೋಬಾನುವೇ | ಅತ್ತೆಮಗ್ಳು ಶಿರಿಗಿರ್ಜೆಕೈಲಿರುವೊ ಹೂವ್ವಿನುಂ ಗುರುವಾ ಗೆಲುಬೇಕು | ಬಾರಮ್ಮಗಿರುಜಮ್ಮ ಭಾವಾನೋಡ್ಯಾರಂತೆ ಅಂಗಾ ಲಪದ್ಮಾಸುಳಿಸುದ್ದಾ | ಅಂಗಾಲಪದ್ಮಾ ಸುಳಿಸುದ್ದಾನೋಡಾರಂತೆ ಬಾರೇಮ ಲ್ಲೈಯ್ಯನ ಎದುರೀಗೇ | ಮಲ್ಲೀಗೆಹೂವಕೊಯ್ದು ಮಾಲೆಕಟ್ಟಿಮೈಸೂರು ಧೊರೆಗಳು ಕಳಿಸವರೇ ಸೋಬಾನುವೆ | ಮೈಸೂರು ಧೊರೆಗಳು ಏಸಂತಕ ಳಿಸಿದ್ರು ಭೋಗೂ ಮಲ್ಲೈಯ್ಯನ ಮದ್ವೆಗೇ | ಸೋಭಾನುವೆ | ಮಲ್ಲೈಯ್ಯ ಸ್ವಾಮಿಾ ಮದ್ವಣಗ ಆಯ್ತಾನೆಂನು ದೂರಾಲಪರಸೇ ಕಪಿದಾವೋ | ಮೂಡಾಲ ಶೀಮಿಂದ ಮುತ್ತೀನ್ಯೆರಣೆಬಂದೊ ಮುತ್ತೀನ ಬಾಸಿಂಗ ಸಹಿವಾಗೀ ಸೋಬಾ ನುವೆ || ತವರೂರು ಅನ್ನೋದು ಎತ್ತಲಾಗಿ ಕಾಣದಲ್ಲೋ ಮಹೂರ್ತಕೆ ನಿಂತವ್ರೆ ವನದಲ್ಲಿ | ಸೋ || ಸೋಬಾನದಿಂದ ಸುಖದಿಂದಾ ಸೋಬಾನವೇ ವೀಧ್ಯೆ | ವೀಧ್ಯೆ | ವೀಥತ್ತ || (ಶೋಭಾನದಿಂದ ಸುಖದಿಂದಾ ಶೋಭಾನವೆ)

೨೯

ಮಲ್ಲಿಗೇಮಲ್ಲಿಗೇ ಮಾತಾಡ್ಮಲ್ಲಿಗೇ ಮಾತಾಡುಮಾತಾಡು ಶ್ಯಾವಂತಿಗೆ | ಒಬ್ಬೀಗೆನಾಕ್ಮೊಲೆ ಒಬ್ಬೀಗೆ ಎರಡ್ಮೊಲೆ ಒಬ್ಬೀಗೆ ಸದ್ಯಾವೊಲೆಯಿಲ್ಲ ಮಲ್ಲಿಗೆ |

(ಮೇಲಿನ ಒಗಟೆಯುಪದ್ಯವನ್ನು ಹೇಳಿ ಒಂದು ಗುಂಪಿನವರು ತಾವೇ ಕೋಲಾಟ ಆಡುತ್ತಿರುವಾಗ ಎದುರು ಗುಂಪಿನವರು ಮುಂದೆ ಹೇಳುವರೀತಿ ಆ ಒಗಟೆಯ ಅರ್ಥವನ್ನು ಹೇಳಿ ಅವರೊಡನೆ ಕೋಲಾಟವಾಡಿ ಆ ಮೇಲೆ ತಾವೂ ಒಂದು ಒಗಟೆಯನ್ನು ಹೇಳುತ್ತಿದ್ದರು. ಇವುಗಳನ್ನು ಆಯಾ ಕಾಲದಲ್ಲೆ ಕಪಿತ್ವವಾಡುತ್ತಿದ್ದರು)

ಹಸೀಗೆ ನಾಕ್ಮೊಲೆ ಆಡಿಗೆ ಎರಡ್ಮೊಲೆ ಕೋಳಿಗೆ ಸದ್ಯಾ ಮೊಲೆಯಿಲ್ಲ ಮಲ್ಲಿಗೆ | ಒಬ್ನಿಗೆ ಕಾಲ್ಕೊಟ್ಟೆ ಒಬ್ನಿಗೆ ಕೈಕೊಟ್ಟೆ ಒಬ್ನಿಗೆ ಸೀರೆ ಅಳುಕೊಟ್ಟೆಮಲ್ಲಿಗೆ | ಕಂಚಾಗ್ರನಿಗ್ಗೆ ಕಾಲ್ಕೊಟ್ಟೆ ಒಳಾಗ್ರನಿಗ್ಗೆ ಕೈಕೊಟ್ಟೆ ಅಗ್ಸನಿಗ್ಗೆ ಸೀರೆ ಅಳುಕೊಟ್ಟೆ| ಒಬ್ಬಾನಹಾಕಿದ್ದೆ ಒಬ್ಬಾನನೂಕಿದ್ದೆ ಒಬ್ಬಾನ ಎಳ್ಕೊಂಡ್ಮಲಗಿದ್ದೆ | ಕದ್ವಾನಹಾಕಿದ್ದೆ ತಾಳಾನನೂಕಿದ್ದೆ ತಲ್ದಿಂಬ ಎಳ್ಕೊಂಡ್ಮಲ್ಗಿದ್ದೆ ಮಲ್ಲಿಗೆ ||

|| ಪೀಧ್ಯ | ಎೀಧ್ಯ | ಪೀಧತ್ತ ||

೩೦

ಬಾಲಾಗೋಪಾಲನಿನ್ನ ಮಗ ಬಾಲಾನೇನೇಗೋಪಮ್ಮಾ | ನಾರಾಯಣ ಬಾರೋ ನಾರೀಕಂದಯ್ಯಬಾರೊ ನರ್ಲೋಕದೊಳಗೇ ಇರ್ವೋನೆಕೃಷ್ಣಯ್ಯ || ಸುರಲೋಕದೊಳಗೆ ಇರುವೋನೆಕೃಷ್ಣಯ್ಯ ನಂದಾಗೋಪಂದನ ಕರಕೋಳೊ ಗೋಪಮ್ಮ | ಗೋಪಮ್ಮನಿನ್ನ ಮಗ ದೀಪಾದಕುಡಿಕಾಣೆ ದೀವಿಗೆಕುಡಿಯಂತೆ ಉರಿವನೇನ ಗೋಪಮ್ಮ || ಹೋಗಿಬಂದು ನಮ್ಮಾ ಕೆಲ್ಸಾವಕಳೆಯುವ ನಂದಾಗೋಪಂದನ ಕರಕೊಳೇಗೋಪಮ್ಮ |ಗಂಧಾದಮರದಡಿ ರನ್ನಾದಕಲ್ಲಿನೊರ್ಳು ಆಡೀರಾಜುಣವೂ ತೊಡಿಸೋಳೇ ||

ನೀಲೀನಾಮದ ಗೊಲ್ಲಾರ್ಹುಡುಗಿ | ಹಾಲೂಮಾರುತ ಬಂದಾಳಾಕೆ ||
ಹಾಲೂಮಾರಿದ ಸುಂಕಾಕೇಳಿದರೆ | ನೀಲೀನಾಮವತೋರ್ಯಾಳೆ ||
ಹಸರೂಕಡಗದ ಗೊಲ್ಲಾರ್ಹುಡುಗಿ | ಮೊಸರೂಮಾರುತ ಬಂದಾಳಾಕೆ ||
ಮೊಸರೂಮಾರಿದ ಸುಂಕಾಕೇಳಿದರೆ | ಹಸರೂಕಡಗಾತೋರ್ಯಾಳೋ ||
ಪಚ್ಚೇಕಡಗದಗೊಲ್ಲಾರ್ಹುಡುಗಿ | ತುಪ್ಪಾಮಾರುತಬಂದಾಳಾಕೆ ||
ತುಪ್ಪಾಮಾರಿದಸುಂಕಾಕೇಳಿದರೆ | ಪಚ್ಚೇಕಡಗಾತೋರ್ಯಾಳು ||

ಮಾಧವಗೋವಿಂದ ಬಂದ ನೋಡಿರಮ್ಮ |
ಅವ್ನ ಪಾದದಕಿರುಗೆಜ್ಜೆ ಧ್ವನಿಯ ಕೇಳೀರಮ್ಮ |
ಅವ್ನ ಇಸಿಯುದಿಂದ ಬಾಲೆಸೀರೆಸೆಳ್ವಾನಮ್ಮ |
ತಾಳಾತಂಬೂರಿಸದ್ಗೆ ಕುಣಿಯೋನಮ್ಮ || ಮಾ || ಪ ||

ಬಾಲಾಗೋಪಾಲನೆ ಗೋಪೀಕಂದಲೋಲನೆ || ವೀಧ್ಯೆ | ಏಧತ್ತ ||

ಮೇಲಿನ ಪದ್ಯಗಳಲ್ಲಿ ದೇವತಾಸ್ತುತಿಗಳೂ ವೀರರ ವರ್ಣನೆಗಳೂ ಇವೆ. ಅವುಗಳನ್ನು ಕಾವ್ಯದೃಷ್ಟಿಯಿಂದ ವಿಮರ್ಶಿಸಿದರೆ ಪಾಮರಸಾಹಿತ್ಯದಲ್ಲಿ ರಸ, ಶ್ಲೇಷೆ, ಅಲಂಕಾರ, ಪ್ರತಿಭಾ ಇವುಗಳ ಪ್ರವಾಹವೇ ತೋರಿಬರಬಹುದು. ಕೆಲವು ಪದ್ಯಗಳನ್ನು ಸಂಪೂರ್ಣವಾಗಿ ಬರೆದಿಲ್ಲ. ಏಕೆಂದರೆ — ಒಂದು ರಥವರ್ಣನೆಗೆ ಆರಂಭಿಸಿದರೆ ಚಕ್ರದಿಂದ ಕಳಶದ ವರೆಗೆ ಪ್ರತಿಯೊಂದು ಪದಾರ್ಥವನ್ನೂ ವರ್ಣಿಸಿ ಅದರಲ್ಲಿ ಮೇಲಿನ ಸಾಲಿನ ಅರ್ಧವನ್ನೇ ಮತ್ತೆ ಕೆಳಗಿನಸಾಲಿನ ಪೂರ್ವಾರ್ಧವನ್ನಾಗಿ ತೆಗೆದುಕೊಂಡಿರುವರು. ಆ ರೀತಿ ಪ್ರತಿಯೊಂದನ್ನೂ ಹೇಳುವುದು ಕೋಲಾಟದವರ ಗತ್ತಿಗೂ ಮುಂದಿನ ಪದವನ್ನು ಜ್ಞಾಪಿಸಿಕೊಳ್ಳುವುದಕ್ಕೂ ಅನುಕೂಲವೇ ವಿನಾ ಬರವಣಿಗೆಯುಲ್ಲೂ ಆ ರೀತಿ ಬರೆದರೆ ಬೇಜಾರಾಗಬಹುದೆಂದು ಬಿಟ್ಟದ್ದಾಗಿದೆ. ನಮ್ಮೂರಲ್ಲಿ ಮುದುಕರು ಇನ್ನೂ ಬೇರೆಬೇರೆ ಪದಗಳನ್ನು ಹಾಡುತ್ತಿದ್ದರು. ಪ್ರತಿಯೊಂದು ಹಳ್ಳಿಯುಲ್ಲೂ ಇದೇರೀತಿ ಬೇರೆಬೇರೆ ಪದ್ಯಗಳು ರಸದೃಷ್ಟಿಯಿಂದ ಶ್ರೇಷ್ಠವಾಗಿ ರಚಿಸಲ್ಪಟ್ಟಿವೆ ಸಾಹಿತಿಗಳು ಸಂಗ್ರಹಿಸಬೇಕಾಗಿ ಪ್ರಾರ್ಥನೆ.

ಈ ರೀತಿಯಾದ ಅನೇಕಪದ್ಯಗಳನ್ನು ಹೇಳಿಕೊಂಡು ಕೋಲಾಟವಾಡುವರು. ಅನಂತರ ರಂಗದಬೀದಿಯಲ್ಲೇ ಇರುವ ಓಕುಳಿಗುಂಡಿಯಲ್ಲಿ ಆರತೀನೀರು (ವಸಂತ) ಮಾಡಿ ತುಂಬಿ ಪರಸ್ಪರ ಎರಚಾಡುವರು. ಪ್ರತಿಮನೆಯ ಮುಂದೆ ಒಂದೊಂದು ಹಂಡೆಯ ತುಂಬಾ ಓಕುಳಿ ಮಾಡಿಡುವ ಪದ್ಧತಿ. ಊರಿನ ಬೀದಿಯ ಸುತ್ತಲೂ ಓಕುಳಿಯಾಡಿ ಹೊಳೆಗೆ ಹೋಗಿ ಸ್ನಾನಮಾಡಿ ಬರುವರು. ಆಗಣ ಸಮಯದಲ್ಲಿ —

ಓಕ್ಳೀಯುಗುಂಡೀಗೆ ನಾಕೂಚಿನ್ನದಕಂಭ ಚಿನ್ನಾದಾಕಂಭಾ ಏಳೇಳೋ | ಚಿನ್ನಾದಾಕಂಭಾ ಏಳೇಳುಹನುಮಂತಾ ನಿನ್ನಾ ರಂಗಾದೊಳೆಲ್ಲಾ ಐಭೋಗಾ | ಏಳೇಳನ್ಮಂತ್ರಾಯ ಏಟೊತ್ತು ಸುಖಿಸಿದ್ನೆ ಪೂಜಾರಿಬಂದೂ ಒದ್ಗ್ಯವ್ನೆ | ಪೂಜಾ

ರಿಬಂದೂಒದ್ಗ್ಯವ್ನೆ ಮಲ್ಲೀಗೆಮುಗ್ಗರಳಿ ಬಾಯಾ ಬಿಡುತಾವೆ | ರಾಮಾರತ್ತೇರೀ ಲಕ್ಷ್ಮ್ಮಣ್ಕದ್ರೇರೀ ತಾಯಿಸೀತಮ್ಮಾ ಮರವೇರೀ | ತಾಯಿಸೀತಮ್ಮಾಮರ ವೇರಿ ಏನಂದ್ಲು ದೂರಾದಾಪರಸೆ ಬರಲಿಲ್ಲೋ | ರಂಗಕ್ಕೆ ಹರಿಬಂದ ರಂಭೇಸು ಮೂಡ್ಯಾಳು ಎಂಭತ್ತಾರಾದಾ ಒಡ್ವೇಯಾ | ಎಂಭತ್ತಾರಾದಾ ಒಡ್ವೇಯ ಇಕ್ಕೊಂಡು ರಂಗಕ್ಕೆ ಆರ್ತೀಬೆಳ್ಗ್ಯಳೋ | ಒಕ್ಕೀಯಗುಂಡೀಗೆ ನಾಕೂಚಿ ನ್ನದಕಂಭ ಚಿನ್ನಾದಾಕಂಭಾ ಏಳೇಳೋ ||

ಈ ಪದ್ಯವನ್ನೂ ಇನ್ನೂ ಅನೇಕ ಪದ್ಯಗಳನ್ನೂ ಹೇಳುವರು. ಕಡೆಯ ದಿನ ಊರಿನ ಬೀದಿಯಲ್ಲೆಲ್ಲಾ ರಂಗ ಕುಣಿಯುತ್ತಾ ಬರುವರು. ಆಗ ಮನೆಮನೆಗೆ ಪಂಚಾಮೃತ ಮಾಡಿ ಅದನ್ನೂ ಕಡಲೆಪುರಿಯನ್ನೂ ತಟ್ಟೆಗಳಲ್ಲಿ ತುಂಬಿ ಕೈಯಲ್ಲಿ ಹಿಡಿದುಕೊಳ್ಳುವರು ರಂಗ ಕುಣಿಯುವವರಲ್ಲಿ ಯಾರು ಬೇಕಾದರೂ ಹೋಗಿ, ತಲೆಯನ್ನು ಬಗ್ಗಿಸಿ ಕೈಯಲ್ಲಿ ಮುಟ್ಟದೆ ಬಾಯಲ್ಲೇ ತಿನ್ನಬೇಕು. ಹೀಗೆ ಎಷ್ಟೋ ತಟ್ಟೆಗಳು ಬರಿದಾಗುವುವು. ಕೆಲವು ಜನ ಗೃಹಸ್ಥರು ದುಡ್ಡನ್ನು ಮುಯ್ಯಾದೆ ಗಾಗಿ ಇವರಿಗೆ ಕೊಡುತ್ತಿದ್ದರು. ಸಂಜೆಯ ಹೊತ್ತಿಗೆ ಊರಹೊರಗೆ ಹೊಲೆಯರ ಬೀದಿಯಲ್ಲಿರುವ ಮಾಯಮ್ಮನ ಗುಡಿಯಲ್ಲಿ ತಾವು ಕಟ್ಟಿಕೊಂಡಿರುವ ಗೆಜ್ಜೆಗಳ ನ್ನೆಲ್ಲ ಬಿಚ್ಚಿಟ್ಟು ಕಣ್ಣಿಗೆ ಒತ್ತಿಕೊಂಡು ದೇವರಿಗೆ ಮಂಗಳಾರತಿ ಮಾಡಿ "ಗೆಜ್ಜೆ ಒಪ್ಪಿಸಿದೊ" ಎಂದು ಹೇಳಿ ಮನೆಗೆ ಬರುವರು. ಇಲ್ಲಿಗೆ ಸಾಮಾನ್ಯವಾಗಿ ರಂದಗ ಹಬ್ಬವಾಯಿತೆಂದು ಹೇಳಬಹುದು.

## ಗ್ರಾಮದೇವತೆ ದೊಡ್ಡಮ್ಮನ ಹಬ್ಬ

## ದೊಡ್ಡಮ್ಮನ ಕತೆ

ಒಂದಾನೊಂದು ಊರು. ಒಬ್ಬಾನೊಬ್ಬ ಬ್ರಾಹ್ಮಣ. ಅವನು ವೇದ ಶಾಸ್ತ್ರ ಪುರಾಣಗಳಲ್ಲಿ ಬಹಳ ಗಟ್ಟಿಗನಾಗಿದ್ದನು. ಮನೆಯಲ್ಲಿ ಬೇಕಾದಷ್ಟು ಹಸು, ಎಮ್ಮೆ, ಕರು, ಎತ್ತುಗಳು ಗಿಜಿಗುಟ್ಟುತ್ತಿದ್ದುವು. ಅವುಗಳನ್ನು ಮೇಯಿ ಸಿಕೊಂಡು ಒಂದು ಮನೆಗಟ್ಟಲು ಒಬ್ಬ ಹೊಲೆಯರ ಹುಡುಗನನ್ನು ಗೊತ್ತುಮಾ ಡಿದ್ದನು. ಆ ಹುಡುಗನು ಜಾತಿಯಲ್ಲಿ ಹೊಲೆಯನಾಗಿದ್ದರೂ ಬುದ್ಧಿಯಲ್ಲಿ ಒಲುಸೂಕ್ಷ್ಮ. ಪ್ರತಿನಿತ್ಯವೂ ಆ ಬ್ರಾಹ್ಮಣನು ಸಂಧ್ಯಾವಂದನೆ ಮಾಡುವಾಗ

ಕೈ, ಬಾಯಿಗಳನ್ನಾಡಿಸುವುದನ್ನೂ ಪಾರಾಯಣ ಮಾಡುವುದನ್ನೂ ದೂರದಿಂದಲೇ ನೋಡಿ ತಾನೂ ಅದರಂತೆ ಗುಟ್ಟಾಗಿ ಆಚರಿಸುತ್ತಿದ್ದನು. ಹತ್ತಿಪ್ಪತ್ತು ವರ್ಷಗಳಾದಮೇಲೆ ಅವನಿಗೆ ಬ್ರಾಹ್ಮಣನ ಮನೆಯಲ್ಲಿ ಕೆಲಸಕ್ಕೆ ಇರಲು ಬೇಜಾರಾಗಿ ಇನ್ನೊಂದು ಊರಿಗೆ ಓಡಿಹೋದನು. ಆ ಊರಿನಲ್ಲಿ ಒಬ್ಬ ಶ್ರೋತ್ರಿಯನಾದ ಬ್ರಾಹ್ಮಣನಿದ್ದನು. ಅವನಿಗೆ ಒಬ್ಬಳೇ ಮಗಳು. ಹುಡುಗಿಗೆ ಮದುವೆ ವಯಸ್ಸಾಗಿದ್ದುದರಿಂದ ಆ ಬ್ರಾಹ್ಮಣನು ಗಂಡನ್ನು ಹುಡುಕಿ ಹುಡುಕಿ ಸಾಕಾಗಿ ಸುಮ್ಮನೆ ಮನೆಯಲ್ಲಿ ಕೂತುಬಿಟ್ಟನು. ಒಂದುದಿನ ಮಧ್ಯಾಹ್ನ ಹನ್ನೆರಡು ಘಂಟೆಗೆ ಸರಿಯಾಗಿ ಗರಿಮುರಿ ಮಡಿಮಾಡಿಕೊಂಡ ಅತಿಥಿಯೊಬ್ಬನು ಭಗವದ್ಗೀತೆಯ ಶ್ಲೋಕಗಳನ್ನು ಹೇಳಿಕೊಂಡು ಯಾರು ಒಳಗೆ ಎಂದುಕೊಂಡೇ ಒಂದನು. ಅವನು ಧರಿಸಿದ್ದ ವಿಭೂತಿಪಟ್ಟೆಗಳು ಶರತ್ಕಾಲದ ಮೋಡಗಳಂತಿದ್ದುವು. ಬೆಳದಿಂಗಳಂತಿರುವ ಬಟ್ಟೆಯನ್ನು ಧರಿಸಿದ್ದನು. ಕೈಯಲ್ಲಿದ್ದ ಚೊಂಬು ಚಂದ್ರನಂತೆ ಕಾಣುತ್ತಿತ್ತು. ಜನಿವಾರವು ರಾತ್ರಿಯ ಮಿಂಚಿನಂತೆ ಫಳಫಳನೆ ಹೊಳೆಯುತ್ತಾ ಇತ್ತು. ಯಾರೋ ಅತಿಥಿಯು ಬಂದನೆಂದು ಮನೆಯವರೆಲ್ಲಾ ಸಡಗರದಿಂದ ಓಡಾಡಿ ಊಟಕ್ಕೆ ಎಲೆ ಹಾಕಿದರು. ಹೊಸಬನಿಗೂ ಮನೆಯವರಿಗೂ ಊಟವಾಯಿತು ತಾಂಬೂಲ ಹಾಕಿಕೊಂಡರು. ಯೋಗಕ್ಷೇಮ ಮಾತಾಡಿದರು. ಪ್ರಸಕ್ತಾಪತ್ತೇನ ಗೋತ್ರಪ್ರವರಗಳನ್ನು ಕೇಳಿದರು. ಅತಿಥಿಯು ತಾನೂ ಕನ್ಯಾನ್ವೇಷಣಕ್ಕಾಗಿಯೇ ಬಂದಿರುವೆನೆಂದನು. ಕರ್ಮಸಂಯೋಗದಿಂದ ಹೊಸಬನಾಗಿ ಮನೆಗೆ ಬಂದಿದ್ದವನು ಬ್ರಾಹ್ಮಣನ ಅಳಿಯನಾದನು. ಆ ಅಳಿಯನೇ ಇನ್ನೊಂದೂರಿಂದ ಓಡಿಬಂದ ಹೊಲೆಯರ ಹುಡುಗ

ಬೇರೆ ಮನೆಯಲ್ಲಿದ್ದ ಆ ನೂತನದಂಪತಿಗಳಿಗೆ ಒಂದು ಮಗುವಾಯಿತು. ಒಂದಾನೊಂದುದಿನ ಹೆಂಡತಿಯು ಗಂಡನನ್ನು ಕುರಿತು "ಅತ್ತಮ್ಮನವರು ಒಂದು ದಿನವಾದರೂ ಬಂದು ನಮ್ಮನ್ನು ನೋಡಲಿಲ್ಲ. ಮಗುವನ್ನೆತ್ತಿ ಮುದ್ದಾಡಲಿಲ್ಲ. ಯಾಕೆ? ಅವರಿರುವರೋ ಅಥವಾ ಇಲ್ಲವೋ? ಅವರನ್ನು ಖಂಡಿತ ನೀವು ಕರೆದುಕೊಂಡು ಬರಬೇಕು. ಕರೆತಾರದಿದ್ದರೆ ಒಂದು ತೊಟ್ಟು ಗಂಗಾಮೃತ ಕುಡಿಯುವುದಿಲ್ಲ" ಎಂದು ನಿರ್ಬಂಧಪಡಿಸಿದಳು. ಗಂಡನ ಮುಖವು ಸಪ್ಪಗಾಯಿತು. ಆದರೂ ಧೈರ್ಯಮಾಡಿ "ನಾಳೆ ಕರತರುವೆನು" ಎಂದು ಹೇಳಿ ಕತ್ತಲೆಯಲ್ಲಿ ತನ್ನೂರಿಗೆ ಸೇರಿ ತಾಯಿಯನ್ನು ಕರಕೊಂಡು ಬರುತ್ತಾ ದಾರಿಯಲ್ಲಿ ಅವಳನ್ನು ಕುರಿತು "ನಾನೀಗ ನಿನ್ನ ನನ್ನೆಂತ್ರೀ ಮನ್ಗೆ ಕರ್ಕೊಂಡ್ಹೋಯಿತ್ತೀನಿ

ನನ್ಹೆಂಡ್ತಿ ಏಟ್ಮಾತಾಡ್ಸಿದ್ರೂ ಮಾತಾಡ್ಬ್ಯಾಡ ನಿನ್ಮಗ್ನಾಣೆ. ನಾಳೀಕ್ಕೊಪ್ಪ ತ್ನಿಂದಾ ನಮ್ಮೂರ್ಗೇ ನಿನ್ನ ಬಿಟ್ಬಿತ್ತೀನಿ" ಎಂದನು. ಅವಳೂ "ಹಂಗೇ ಆಗ್ಲೀ ಮಗ ನನ್ಸೊಸೇ ಹೇಂಗವ್ಳೋ ಕಣ್ತುಂಬಾನೋಡ್ದೆ, ಓಟೇ ಸಾಕಲ್ವಾ' ಎಂದಳು. ಇಬ್ಬರೂ ಬೆಳಗಾಗುವುದರೊಳಗೆ ಮನೆಗೆ ಬಂದು ಸೇರಿದರು. ಆ ದಿನ ಮಧ್ಯಾಹ್ನದ ಊಟ ಮುಗಿಸಿಕೊಂಡು ಅತ್ತೆಯು ಹೊರಟಳು, ಸೊಸೆಯು ಇವತ್ತು ಇದ್ದು ನಾಳೆ ಖಂಡಿತ ಹೊರಡಿ ಎಂದಳು. ಅವಳ ಮಾತಿನಂತೆ ಅವತ್ತೂ ಇದ್ದಳು. ಹೀಗೆಯೆ ನಾಲ್ಕೈದು ದಿನಗಳು ಕಳೆದುಹೋದವು. ನಿತ್ಯವೂ ಒಬ್ಬಟ್ಟು ಪಾಯಸ ತಿಂದು ತಿಂದು ಅತ್ತೆಯ ಬಾಯಿ ಸಪ್ಪೆ ಬಿದ್ದುಹೋಯಿತು.

ಒಂದು ದಿನ ತಡೆಯಲಾರದೆ ಅತ್ತೆಯು ತನ್ನ ಎಲೆಗೆ ಬಡಿಸಿದ್ದ ಕಡುಬನ್ನು ನೋಡಿ ಏಟ್ಮಾಡಿದ್ರೇನ್ಮಗಾ "ನಮ್ಮಲ್ಲಿ ಮಾಡೊ ಕೋಣನ್ನಾಲ್ಗೆ ತಿಂದ್ಹಂಗಾಯ್ತದಾ, ಈ ಸೀಸಪ್ಪೆ ತಿಂತಿಂದ್ನಾಕಾಯ್ತವ್ವ" ಎಂದಳು. ಬ್ರಾಹ್ಮಣಿಯ ಎದೆಯು ಧಸಕ್ಕೆಂದಿತು, ಕಣ್ಣು ಕತ್ತಲೆಯಾಯಿತು, ನಿಂತಜಾಗದಲ್ಲೇ ಕೂತು ಬಿಟ್ಟಳು. ಸ್ವಲ್ಪ ಹೊತ್ತಾದ ಮೇಲೆ ಚೇತರಿಸಿಕೊಂಡು ಎದ್ದು, ಆಗಿನ ಕೆಲಸಕಾರ್ಯಗಳನ್ನೆಲ್ಲಾ ಸಂದೇಹ ಬರದಂತೆ ನೆರವೇರಿಸಿದಳು. ಅತ್ತೆಯೂ ಗಂಡನೂ ಬೀದಿಯಕಡೆ ಹಜಾರದಲ್ಲಿ ಏನೇನೋ ಪಿಸುಪಿಸನೆ ಮಾತಾಡುತ್ತಿದ್ದರು. ಬ್ರಾಹ್ಮಣಿಯು ಹಿತ್ತಲಕಡೆ ಬಾಗಿಲಿನಿಂದ ತಂದೆಯ ಮನೆಗೆ ಹೋಗಿ ಅಪ್ಪಾ, ಅಪ್ಪಾ ನಾಯಿಮುಟ್ಟಿದ ಮಡಕೆಯನ್ನು ಏನುಮಾಡುವುದು, ಅದು ಶುದ್ಧಿ ಹ್ಯಾಗಾಗುವುದು ಹೇಳಪ್ಪಾ, ಎಂದಳು. ಆ ಮಾತುಕೇಳಿ ತಂದೆಯು ಅದಕ್ಕೇನು ಮಾಡುವುದಕ್ಕಾ, ಆ ಮಡಕೆಯೊಳಗೆ ಒಂದು ತೊಳಸೀದಳ ಹಾಕಿ ಬೆಂಕಿಯಲ್ಲಿ ಸುಟ್ಟುಬಿಟ್ಟರೆ ಏನೋಸ್ವಲ್ಪ ಶುದ್ಧಿ ಎನ್ನಬಹುದು ಎಂದನು. ತಟ್ಟನೆ ತಂದೆಯ ಮನೆಯಿಂದ ಹಿಂತಿರುಗಿ ಬಂದು ಗಂಡನ ಮನೆಯನ್ನು ಸೇರಿದಳು. ಅವಳಿಗೆ ಮೊದಲೇ ಸಂದೇಹವಿತ್ತು; ಅತ್ತೆಯ ಮಾತನ್ನು ಕೇಳಿದಮೇಲಂತೂ ತನ್ನ ಸರ್ವನಾಶವಾಯಿತೆಂದು ತಿಳಿದಳು. ರಾತ್ರಿಯಾಯಿತು. ಬ್ರಾಹ್ಮಣಿಯು ಅಂದು ಎಂದಿಗಿಂತ ಹೆಚ್ಚಾಗಿ ಎಲ್ಲರನ್ನೂ ಉಪಚರಿಸಿದಳು. ಬಾಕಿಯವರಿಗೆಲ್ಲಾ ಗಾಢನಿದ್ರೆಯು ಹತ್ತಿತು. ಇದೇ ಸಮಯವೆಂದು ಬ್ರಾಹ್ಮಣಿಯು ಬೃಂದಾವನದ ಹತ್ತಿರಕ್ಕೆ ಬಂದು "ಸ್ವಾಮಿ, ಕೃಷ್ಣಭಗವಂತ, ನನ್ನ ಅಪರಾಧ ಏನಿದ್ದರೂ ಕ್ಷಮಿಸು. ನನಗೆ ಸ್ವರ್ಗ ಬೇಡ. ನನಗೆ ಮೋಕ್ಷವೂ ಬೇಡ, ಆದರೆ ನಾನಾ ಕಾರಣಗಳಿಂದ ನೊಂದವರಿ

ದ್ದಾರಲ್ಲಾ ಅವರ ಆತ್ಮಗಳಿಗೆ ಶಾಂತಿಯುನ್ನುಂಟುಮಾಡುವ ಶಕ್ತಿಯುನ್ನು ಕೊಡು. ನನ್ನ ಆತ್ಮವು ಭೂಲೋಕದಲ್ಲೇ ಇರಲಿ, ಇದಿಷ್ಟನ್ನು ಅನುಗ್ರಹಿಸು. ಸರ್ವಜ್ಞನಾದ ನೀನು ಕೈ ಬಿಡಬೇಡ " ಎಂದು ಪ್ರಾರ್ಥಿಸಿ ಒಂದು ತುಳಸೀದಳವನ್ನು ಕಿತ್ತು ಬಾಯಲ್ಲಿಟ್ಟುಕೊಂಡಳು. ಒಳಗೆ ಬಂದು ಒಲೆಯಲ್ಲಿದ್ದ ಬೆಂಕಿ ಕೆಂಡವನ್ನು ಉರಿ ಮಾಡಿ ಮನೆಯ ನಾಲ್ಕುಮೂಲೆಗೂ ಬೆಂಕಿಯಿಟ್ಟು ತಾನು ಮಗುವು ಮಲಗಿದ್ದ ಹಾಸಿಗೆಯ ಮೇಲೆ ಕೂತುಕೊಂಡಳು. ಬೆಂಕಿಯು ಧಗದ್ಧಗಾಯಮಾನವಾಗಿ ಹಬ್ಬಿಕೊಂಡಿತು. ಆಗ ಆಕೆಯು ಅತ್ತೆಯೇ, ನಿನ್ನ ವಂಚಕಮಗನು ಕೋಣನಾಗಿ ಹುಟ್ಟಲಿ, ಅದನ್ನು ಕಡಿದು ಅದರ ನಾಲಿಗೆಯನ್ನು ಬೇಯಿಸಿ ನಿನಗೆ ಊಟಕ್ಕೆ ಬಡಿಸಲಿ, ಅದನ್ನು ತಿಂದು ನೀನು ತೃಪ್ತಿಪಡು, ಅವನನ್ನು ಕಡಿಯುವಾಗ ನನ್ನ ಬಾಗಿಲಿಗೆ ಮರೆಯಾಗಿ ತೆರೆಯಿರಲಿ ಎಂದು ಶಪಿಸಿದಳು. ಬೆಳಗಿನ ಹೊತ್ತಿಗೆ ಮನೆಯೆಲ್ಲಾ ಸುಟ್ಟು ಬೂದಿಯಾಗಿ ಹೋಗಿತ್ತು. (ಇದೆಲ್ಲ ಅಜ್ಜಿಕತೆ. [illegible].) ಎಷ್ಟೋ ದಿನಗಳು ಕಳೆದ ಮೇಲೆ ಜನಗಳು ಬ್ರಾಹ್ಮಣಿಯ ಮಹಾತ್ಮೆಯನ್ನು ತಿಳಿದುಕೊಂಡು ತಮ್ಮ ತಮ್ಮ ಊರುಗಳಲ್ಲಿ ಅವಳಿಗಾಗಿ ಒಂದೊಂದು ದೇವಸ್ಥಾನವನ್ನು ಕಟ್ಟಿಸಿ ವರ್ಷಕ್ಕೊಂದಾವರ್ತಿ ಹಬ್ಬ ಮಾಡುತ್ತಿದ್ದರು ಆ ಹಬ್ಬವು ನಮ್ಮೂರಿನಲ್ಲೂ ನಡೆಯುತ್ತಿತ್ತು. ಮೊದಲು ಮೊದಲು ಮುರುಕಲು ಮಂಟಪವಿತ್ತು. ಈಚೀಚೆಗೆ ಮುಖಂಡರು ಮದ್ದಿಕದ ಹಣದಿಂದ ಅಂದವಾಗಿಯೂ ಗೋಪುರ ಮುಖಮಂಟಪಗಳಿಂದ ಕೂಡಿದ್ದಾಗಿಯೂ ಇರುವ ಒಂದು ದೇವಸ್ಥಾನವನ್ನೇ ಕಟ್ಟಿಸಿರುವರು. ರಂಗಸ್ಥಳದಲ್ಲಿ ಆ ದೇವಸ್ಥಾನದಿಂದ ವಿಶೇಷ ಕಳೆಯುಂಟಾಗಿತ್ತು. ದೊಡ್ಡಮ್ಮನಿಗೆ ಹರಕೆ ಮಾಡಿದವರೂ ಹಬ್ಬ ಮಾಡಬಹುದು. ಊರೊಟ್ಟು ಹಬ್ಬವೂ ಮಾಮೂಲಿನಂತೆ ನಡೆಯುವುದು. ಹೆಣ್ಣುದೇವರಾದ್ದರಿಂದ ಮಂಗಳವಾರದ ದಿನ ದೊಡ್ಡಮ್ಮನನ್ನು ಕರತರುವ ರೂಢಿ.

## ದೊಡ್ಡಮ್ಮದೇವರ ಹಿಂದೆ ಹೇಳುತ್ತಾ ಬರುತ್ತಾ ಇದ್ದ ಪದ್ಯಗಳಲ್ಲಿ ಒಂದಿದು

ದೊಡ್ಡಮ್ಮ ಎಂಬೋಳು ದೊಡ್ಡವ್ವ ಚಿಕ್ಕೌಕಿಳು ಕಣ್ಣೊನಮ್ಮೇಲೆ ಬಿಡಬೇಡಾ | ಕಣ್ಣೊನಮ್ಮೇಲೆಬಿಡಬೇಡ ಮಹಾತಾಯಿ ಕಣ್ಣೇನಲ್ಲವೈಯುಮದೂರ್‍ಗಿ | ಗದ್ದೆಮೇಲೆಂದಾ ಎದ್ದಾರೆದೊಡ್ಡಮ್ಮ ಅಲ್ಲಿದ್ದಾರ್ರಿಸ್ಗೇಶಿವನಾಣೆ | ಅಲ್ಲಿದ್ದಾರ್ರಿನ್ಗೆ ಶಿವ್ನಾಣೆ ಸೀರ್‍ಯಾದಾವೊಗ್ಗೂ ತಂದಿವ್ನೀಮುಡಿಬಾರೆ | ಅತ್ತಾಗಾಸ್ರೆಂದ್ರೇ

ಇತ್ತಾಗ್ಸಾರಿದ್ರೊ ಎತ್ತಾಗ್ಸಾರಿದ್ರೋ ತಳ್ವಾರಾ | ಯತ್ತಾಗ್ಸಾರಿದ್ರೋ ತಳ್ವಾರ ಗೋಡಾನ್ಮಾನೆ ಅಕ್ಕೀ ಹೊಂಬಾಳೇ ಬರ್ಲಿಲ್ಲಾ | ಯತ್ತಾಗ್ಸಾರಿದ್ರೊ ತಳ್ವಾರ್ಗೌಡಾನ್ಮಾನೆ ಕಾಯಿ ಹೊಂಬಾಳೇ ಬರಲಿಲ್ಲಾ | ಇಪ್ಪತ್ತುವರ್ಷಾದತುಪ್ಪುಂಡ ಕೋಣಾನಜತ್ತೀ ( ಜೋಡೀ ) ಮಿಣಿಹಾಕೀ ಹಿಡ್ದ್ಯಾರ್ಸೀ | ಜತ್ತೀ ಮಿಣಿಹಾಕೀ ಹಿಡ್ದ್ಯರ್ಸಿ ಕೋಣಾನ ಕತ್ತೀಲಿ ಕೊರಳಾಕಡ್ಸೀದ್ರು | ಕತ್ತೀಲಿ ಕೊರ್ಳಾಕಡ್ಸಿದ್ರೆ ನಾನು ನೆತ್ತೀಲಿ ನೆಣ್ವಾಕೀಳ್ಸೀಸು | ನೆತ್ತೀಲಿ ನಾನೂ ನೆಣ್ವಕೀಳಿಸದಿದ್ರೆ ರೂಢೀಈಶ್ವರನಾಮಗಳೇನೆ | ಹನ್ನೆರ್ಡುವರ್ಷಾದ ಎಣ್ಣುಂಡಾಕೋಣಾನ ಸಣ್ಣಾಮಿಣಿಹಾಕೀ ಹಿಡ್ದ್ಯಾರ್ಸಿ | ಸಣ್ಣಾಮಿಣಿಹಾಕಿ ಹಿಡ್ಸ್ಯರ್ಸಾದಿದ್ದರೆ ಮುಕ್ಕಣ್ಣೀಶ್ವರನಾಮಗಳೇನೆ | ತಾಯಿದೊಡ್ಡಮ್ಮಾ ಏನುಟ್ಟುಮೆರೆದಾಳು ಕಾಗುಟ್ಟುಕರಿದಾಮುಸುಗೀಟ್ಟೂ | ಕಾಗುಟ್ಟು ಕರಿದಾಮುಸುಗಿಟ್ಟು ಹಾರವ್ರಮಾನೇ ಹೂಬಣ್ಣಾನುಟ್ಟೂ ಮೆರೆದಾಳೂ | ಹಾರವ್ರಗೇರೀಗೆ ಹೋದಾಳುದೊಡ್ಡಮ್ಮಾ ನಾಗಾಳಾಹೂವಾಮುಡ್ಯಾಲ್ಲೀ | ನಾಗಾಳಹೂವಾ ಮುಡ್ಕಲ್ಲಿಕಟ್ಕೊಂಡು ನಾರೀರ್ಗೊಂದೊಂದಾಕೊಡ್ತಾಳೆ | ಒಕ್ಕಲ್ಗೇರೀಗೇ ಹೊಕ್ಕಾಳೆ ದೊಡ್ಡಮ್ಮ ಒಕ್ಕಾಳಾಹೂವಾಮುಡ್ಕಲ್ಲಿ | ಒಕ್ಕಾಳಾಹೂವಾ ಮುಡ್ಕಲ್ಲಿಕಟ್ಕೊಂಡು ಒಕ್ಕಲ್ರೊಂದೊಂದಾಕೊಡ್ತಾಳೆ || ಇತ್ಯಾದಿ ಇತ್ಯಾದಿ ||

ರಾತ್ರಿಯಹೊತ್ತಿಗೆ ಊರುಹೊರಗಿರುವ ಬೇವಿನಮರದ ಕೆಳಗೆ ದೊಡ್ಡಮ್ಮನನ್ನು ಬಿಟ್ಟುಬರುತ್ತಿದ್ದರು. ಮಣ್ಣಿನಲ್ಲಿ ಒಂದು ವಿಗ್ರಹವನ್ನು ಮಂಗಳವಾರದ ದಿನವೇ ಮಾಡಿಸಿ ಹೊಳೆಯ ಸಮೀಪದಿಂದ ತರುತ್ತಿದ್ದರು. ಅದನ್ನೇ ಊರ ಹೊರಗೆ ಬಿಟ್ಟು ಬರುವುದು ಎಲ್ಲಿಯೂ ಹೊಲೆಯರ ಜಾತಿಯವಳು. ಉತ್ಸವವು ಹೊರಟಾಗ ಅವಳಿಗೆ ಅನೇಕರು ದುಡ್ಡುಕಾಸುಗಳನ್ನು ಬಹುಮಾನವಾಗಿ ಕೊಡುತ್ತಿದ್ದರು. ಹೊಲೆಯರಲ್ಲಿ ಕೆಲವರು ಕೋಣನ ಕಾಲಿನ ಮೂಳೆಯನ್ನು ಬಲಗೈಯಲ್ಲಿ ಹೆಂಡದ ಬುರುಡೆಯನ್ನು ಎಡಗೈಯಲ್ಲಿ ಹಿಡಿದು ನೀಗ್ರೋ ಜನಗಳಂತೆ ನರ್ತನಮಾಡುತ್ತಿದ್ದರು.

## ದೊಡ್ಡಮ್ಮನ ಉತ್ಸವದ ಹಿಂದೆ ಹೆಂಗಸರು ಹೇಳಿಕೊಂಡು ಬರುವ ಹಾಡು

ಕಬ್ಬೂಗಟ್ಟಾದಿಂದ ಯಮದುರ್ಗಿ ಬಂದಾಳು ಕಬ್ಬೂಸಕ್ಕರೆಸವಿಗೊಂಡು. ಕಬ್ಬೂಸಕ್ಕರೇಸವಿಗೊಂಡು ಬಂಡ್ಲೋಳೆ ಹೆಬ್ಬಾಗಿಲಲ್ಲೀ ನೆಲಸವ್ವಾ || ಸೋಬನ್ನಿರೇ || ಊರೀಗ್ಬಂದವ್ಳೇ ಒಕ್ಲೀಕ್ಬಂದವ್ಳೇ ಊರೆಲ್ಲಾ ನಾಳೋ ಗೌಡ್ರಾನಿಗೇ |

ಊರೆಲ್ಲನಾಳೋಗೌಡಾಶಾನ್ಯೋಗ್ಳೀಗೆ ಕೊಡಾಕ್ತಂದವ್ಳೇಹರಿಬೂಪ | ಮಾರೀ ದಂಡೂಬಂದೊ ಊರ್ಮ್ಕಂದೆನಿಂದಾದೆ ಸೇರೀಕೊಳ್ಳಣ್ಣಾಉಡುಬೇಯ | ಸೇರಿಕೊ ಳ್ಳಣ್ಣ ಉಡುಬೇಯರಾಜ್ಯಾಕೆ ಕೇಡೂಗಾಲಾ ಬಂದುಕವಿದಾವೆ, ತೊಟ್ಟೀಯ ಗೌಡನ ತಟ್ಟಾನೆಬರಹೇಳಿ ಪಟ್ಟದ್ಕೋಣಾನಾ ಹೊಡಕೊಂಡೂ | ಮಾಳಿಗೌ ಡಾನಾ ಬೇಗಾನೆಬರಹೇಳಿ ಮಾರಿಕೋಣಾನಾ ಹೊಡಕೊಂಡು | ಮಾಳಿಗೌಡಾ ನಾಬರಹೇಳಿ ಬಂಡಿಹೊಳೆ ಮಾರೀಕೋಣಾನಾಹೊಡಕೊಂಡು ಸಿಲ್ಲೀಕಾಲೋಳೆ ಚೆಲ್ಲೀದನೆರ್ಗೈಳೆ ಎಲ್ಲಿಗ್ಹೊರಟವ್ವಾ ದುಗುಪಯಣಾ | ಎಲ್ಲಿಗ್ಹೊರಟ್ಯವ್ವಾ ದುಗುಪಯಣಬಂಡ್ಹೋಳೆ ರಾಜಾಬೀದೀಲಿ ಐಭೋಗಾ | ಆರಾತೀಹೊರಟಾವು ಕೀರೂತೀ ಉಳ್ಳೋಳ್ಗೆ ಕೇರಿಕೇರೀಲಿ ಮೆರೆಯೋಳೀಗೆ | ಕೇರೀಕೇರೀಲಿ ಮೆರೆಯೋ ದೊಡ್ಡಮ್ಮಾಗೆ ಆರಾತಿಹೊಂಟಾವು ಐನೂರೂ | ಉತ್ತಾಹೊಲದಲ್ಲೀಪತ್ತಾರೆ ಕೂಯ್ಯೋಳೆ ಮುತ್ತಿಕ್ಕೀದೋಲೇಕಿವಿಯೋಳೇ | ಮುತ್ತಿಕ್ಕಿದೋಲೇಕಿವಿಯೋಳೆ ದೊಡ್ಡಮ್ಮ ಪತ್ರೆಕೂದಾಳೇ ಶಿವನೀಗೇ | ಹರ್ಗೀದ್ಹೊಲ್ದಲ್ಲೀ ಮರ್ಗಾವಕೂದಾಳೆ ಹರಳಿಕ್ಕೀದೋಲೇಕಿವಿಯೋಳೆ | ನಿಲ್ಲೇದೊಡ್ಡಮ್ಮಾನಿಲವಾನೋಡೇನೆಂದು ಮುಂ ದಲ್ಪಟ್ಟಣದಾ ಋಷಿಗೋಳು | ಮುಂದಲ್ಪಟ್ಟಣದಾ ಋಷಿಗಳು ಬರ್ತಾರೆಂದು ನಿಲ್ಲೇನೀಶಿವನಾ ಇದುರೀಗೆ | ಒಕ್ಕೂಲ್ದವಹಾಸ್ಯವಳೆ ಒಕ್ಕೂವಹೊದ್ಯಾಳೆ ಪುತ್ತಾ ನಾತೂಗೀಮಲಗೀಸೀ | ಪುತ್ತಾನಾತೂಗೀ ಮಲಗೀಸಿ ದೊಡ್ಡಮ್ಮ ಕಿತ್ತೂರ್ಗೆ ದಾಳೀಹೊರಟಾಳೊ | ಬಾಗೂರ್ಗೆ ದಾಳೀಹೊರಟಾಳೆ | ಕರಿಯಾಕಡ್ತೀಸೀರೆ ಕಣಕಾಲೀಗರಸಾಣ ಕೆಣಕಾದೀರಿವಳೂ ಕಿಡಗಣ್ಣೀ | ಕೆಡಕಾದೀರಿವಳೂ ಕಿಡಗ ಣ್ಣಿ ದೊಡ್ಡಮ್ಮ ಮಲ್ತೋರಮನೆಯಾಮುರಿದಾಳೂ | ಬಾಡ್ಹೋಳೆ ದೊಡ್ಡಮ್ಮಾ ಸೀಮೇಗೆ ದೊಡ್ಡಮ್ಮದೊಡ್ಡೌಳು ರಾಣೀಗೊಂಡೇವಾಬಲಗೈಲೀ | ರಾಣೀಗೊಂ ಡೇವಾ ಬಲಗೈಲ್ಹಿಡ್ಕೊಂಡೂ ಅವಳು ರಾಜಾಬೀದೀಲೀಬರುತಾಳೇ | ಊರ್ಮ್ಕಂ ದೇಕೂಕ್ಕೊಂಡು ಏನ್ನೋಡೀದೊಡ್ಡಮ್ಮಾ ದೂರಾಹೋಗವ್ನೇನಿನಮಾಗಾ | ದೂರಾಹೋಗವ್ನೇನಿನ್ಮಾಗ್ಮಡ್ವಾಳ್ಸಟ್ಟಿ ಪೂಜೇಗ್ಹೊಂಬಾಳೇತರುವೂದಾಕೇ | ನರ ಸೀಪುರ್ದಾಲ್ಲೀಎರ್ಸ್ಗವ್ರೆ ಬಣ್ಣಾವಾ ಅರಸೀದೊಡ್ಡಮ್ಮಾಮುಸುಗೀನಾ | ಅರಸೀ ದೊಡ್ಡಮ್ಮಾಮುಸುಗೀನಾಬಣ್ಣಾಕೆ ಎರಸವ್ರೆ ನೀಲೀಕುದುರೇಯಾ | ಬಾಗಾಲೂ ಚಿಕ್ಕಾದು ಬಾಗ್ಪಾರೆದೊಡ್ಡಮ್ಮಾ ಬಾಗೀಲಲ್ನಿನ್ನಾಮಗದೀರೂ | ಬಾಗೀಲಲ್ನಿ ನ್ನಾಮಗ್ದೀರು ನಿಂತ್ಕೊಂಡು ಬಾಗ್ಲೀಗೆ ಛತ್ರೀ ಎರಿಸ್ಯಾವ್ರೇ | ಹಾರುವ್ಗಿತ್ಹೊ

ಡ್ಡವ್ಮ್ಮಾ ಹಾದೀಲ್ಲ್ಹಳ್ಳ್ಯಾತೋಡಿ ಹಾಡೀಕುಟ್ಯ್ಯಾಳೋ ಅರಿಶೀಣಾ | ಬೀದೀಯಾ ಮನೆಯೋಳೆ ಬೀಸಣ್ಗೆ ನೆರ್‍ಗ್ಯ್ಯೋಳೆ ಜಾಜೀಹೂವೀನಾಜಡೆಯೋಳೇ | ಕೈಯಾಕಂಕಣಾವೋಳೆ ವ್ಯೈಯ್ಯ್ಯಾಭೂಷಣದೋಳೆ ಒಯ್ಯ್ಯಾರಿಸಣ್ಣಾಧ್ವನಿಯೋಳೆ | ಒಯ್ಯ್ಯಾರಿಸಣ್ಣಾಧ್ವನಿಯಾದೊಡ್ಡವ್ಮ್ಮಾ ಉಯ್ಯ್ಯಾಲೆನಿಳಿಯೇ ದೊರೆಬಂದಾ | ಚಂದ್ರಗಾವೀಸೀರೆ ಚಂದ್ಯಾಕಣೆದೊಡ್ಡಮ್ಮ ಚಂಡೀಕೂತವ್ಯೇಹೊಳೆಯಲ್ಲೀ | ಚಂಡೀಕೂತವ್ಯೇ ಹೊಳೆಯಲ್ಲಿದೊಡ್ಡಮ್ಮ ನಿನ್ಗೊಂಡೇಯಾಸೆರಗಾವರೆಮಾಡೇ | ಕತ್ತೀಯುಕಿತ್ತಾಳು ಕಲ್ಮೇಲೆನೆಟ್ಟ್ಯಾಳೂ ನೆತ್ತೀಯಾಜುಂಗಾ ಒದರ್‍ಯಾಳೂ | ಏಳೂರು ಸಿಡಿಬಂದು ತಾನಾಕೆನಿಂತಾವು ತಾಯೂರಸಿಡೀ ಬರಲಿಲ್ಲಾ | ತಾಯೂರಸಿಡೀ ಬರಲಿಲ್ಲ ದೊಡ್ಡಮ್ಮ ಕೋಡ್ಗಲ್ಲಹತ್ತೀದನಿತೋರೇ | ಅಮ್ಮಾನಾಗುಡಿಮುಂದೇ ಗಮ್ಮನ್ನೊದೇನೀರೆ ಗಂಡೂಭೂತಾಳೇ ಗಜಲಿಂಬೇ | ಗಂಡೂಭೂತಾಳೇಗಜಲಿಂಬೇಗಮನಾಕೆ ಹಿಂಡೂಮಾವೆಲ್ಲಾಫಲಬಿಟ್ಟೋ | ಊರೂಮುಂದೊಂದೂ ಎಳೆಯಾ ಬೇವಿನಮಾರ ಹೋಗಿನಿಲ್ಲಾಕೇನೆರಳಿಲ್ಲಾ | ಹೋಗೀನಿಲ್ಲಾಕೇನೆರಳಿಲ್ಲದೊಡ್ಡಮ್ಮ ಈಬೇವೀನಾಮರ್‍ವ್ವಾಸಂಬ್ಯೋಳೇ | ಗದ್ಗೇವೋಗ್ಯಿಂದಾ ಎದ್ಬ್ಯಾರೆದೊಡ್ಡಮ್ಮ ಸೀರ್‍ಯಾದಾಮಗ್ಗಾತಂದೀವ್ನಿ | ಸೀರ್‍ಯಾದಾಮಗ್ಗಾತಂದಿವ್ನಿಮುಡಿಬಾರೆ ಜಾಜೀಯಮಗ್ಗೊ ಅರಳ್ಯಾವೇ | ತಾಯಿಾದೊಡ್ಡಮ್ಮಾನಾ ದುಂಡೂತುರುಬಿನಮೇಲೆ ದುಂಡೂಮಲ್ಲೀಗೇಗಿಡಹುಟ್ಟೀ | ಪೂಜಾರ್‍ಕೇಳಾನೂಸರಮಾಲೆದೊಡ್ಡಮ್ಮ ನಿನ್ಪೂಜೇಹೊತ್ತೀಗೆ ಅರಳ್ಯಾವ್ರೋ | ಈಗ್ಬಂದೋರ್‍ಯಾರೇ ಪಾದಾತೊಳ್ದೋರ್‍ಯಾರೇ ಈಗ್ಬಂದುತೇಜೀ ಇಳ್ದೋರುಯಾರೆ | ಈಗ್ಬಂದುತೇಜೀಯ ಇಳ್ದೋರು ದೊಡ್ಡಮ್ನ ಪಾದಾದಾಪೂಜೇಮಾಡ್ಯಾರೇ | ಬಂದಂಥಾರಾಯಾರು ಮಾಡಿದರ-ಸೇವೆಯ ಪಾದಾದಾಸೀರೂ ಹರಿದಾವ್ರೋ | ತಾಯಿ ದೊಡ್ಡಮ್ಮಾಗುಡಿಯ ಬಾಗಿಲಮುಂದೆ ಪಾಲಾಡೂತಾವೇ ಗಜಲಿಂಬೇ | ವಾಲಾಡೂತಾವೇ ಗಜಲಿಂಬೆಹೆಣ್ಮಕ್ಳ ಸಂಬೀಸಿ ಮನೆಗೇ ಕಳಿಸವ್ವಾ | ಕಾಗೀಯಸೀರೆ ಗೋದೂವೆಮಡಲಕ್ಕಿ ಹತ್ತೀನೋಡ್ಯಾಳೇ ಡಿಲ್ಲೀಯಾ | ಪಟ್ಟಣದಹಾದೀಲಿ ಕುಟ್ಟಕ್ಕಿತೊಳ್ಳೋಳೆ ಪಟ್ಟೀಯಸೀರೇನೆರ್‍ಗ್ಯೇಳೇ | ಹಾಸನದಹಾದೀಲಿ ಕ್ಯಾಸಕ್ಕಿತೊಳ್ಳೋಳೆ ದಾಸ್ವಾಣಾಳ್ಹುವೀನಾನೆರ್‍ಗ್ಯೇಳೇ | ತಾಯಿನೀನ್ಹುಟ್ಟೀ ನಾಲ್ವತ್ತೊಂದ್ವರ್ಷದೊ ನಾಲೀಗೇಮೋಲೇಗೆಜಲಿಕ್ಕೀ | ನಾಲೀಗೇಮೋಲೇ ಗೆಜಲಿಕ್ಕಿಹುತ್ತಿಕ್ಕಿ ನಿನ್ನೆತ್ತೀಲ್ಯಾಡಾನೇ ಎಳೆನಾಗಾ | ಸುಳಿನಾಗಾ | ಮುತ್ತೀನನಾನಾದಾ ಮುದಿನಾಗಾ | ಅದರೊತ್ತೀಲ್ಯಾಡಾನೇ ಎಳೆ

ನಾಗಾಸುಳಿನಾಗಾ ತಾಯಿದೊಡ್ಡಮ್ಮಾ ಗುಡಿಮುಂದೇ | ಹೆಡ್ಗೇಲ್ಹಣ್ಣೂಬಂದೊ ಗಡ್ಗೇಲ್ಹುಪ್ಪಾಬಂದೊ ಇಟ್ಟಾಡಿಬಂದೋ ಇಡಗಾಯಿ | ಇಟ್ಟಾಡೀಬಂದೋ ಇಡಗಾಯಿ ದೊಡ್ಡಮ್ಮ ನಿಗೆ ಒತ್ಲಲ್ಸಿಬಂದೋ ಮರಿಗೋಳೂ | ರಾಗೀಮಾಡೋ ಕೇರಿ ರಾಯುರ್ದ್ಕೊರೋಜಗ್ಲಿ ತಾಯಿದೊಡ್ಡಮ್ಮಾ ನಲಿದಾಡೊಬೀದಿ | ತಾಯಿದೊ ಡ್ಡಮ್ಮಾ ನಲಿದಾಡೊಬೀದೀಲಿ ಸಾಲಿಟ್ಟುಬಂದೋಮುಡಲಕ್ಕೀ | ಅಕ್ಕೀಮಾಡೋ ಕೇರಿ ಮಕ್ಕಳಾಡೋಬೀದಿ ಅಕ್ಕಾದೊಡ್ಡಮ್ಮಾನಲಿದಾಡೊಬೀದಿ | ಅಕ್ಕಾದೊಡ್ಡ ಮ್ಮಾನಲಾಡ್ದೊಬೀದೀಲಿ ಲೆಕ್ಕಿಲ್ದೆಬಂದೋಮುಡಲಕ್ಕಿ | ಓಡೋಡಿಬಂದಾಳೆ ಓಣೀ ಲಿಸಿಂದಾಳೆ ಕೈಬೀಸಿಹನುಮಾನ ಕರೆದಾಳೆ | ಕೈಬೀಸಿ ಹನುಮಾನಕರೆದು ಏನೆಂ ದಾಳು ಪಂಜೀಗೆ ಎಣ್ಣೇತರಹೇಳಿ | ಪಂಜೀಗೆ ಎಣ್ಣೆ ತಾರಾದಹನುಮಾನ ಬಡವಾ ಸೀನ್ಹೋಗೊಮನೆಗೆಂದ್ಲೂ | ಯಾಕೆದೊಡ್ಡಮ್ಮಾ ನಿನ್ಮಾ ಕಾಸಪ್ಪೆಗಾದೆ ನೋಡೋ ಕ್ಬಂದೋರೂ ನಗುತಾರೆ | ನೋಡೋಕ್ಬಂದೋರೂ ನಗುತಾರೆದೊಡ್ಡಮ್ಮ ನಿಂಕೋ ಣನ್ಕೊಟ್ಟೀನೂ ಕಲೆಯಾಗೆ | ದೊಡ್ಡಮ್ಮ ಎಂಬೋಳು ದೊಡ್ಡಾಳು ಚಿಕ್ಕಾಳು ದೊಡ್ಡಾಬೀದೀಲಿ ಮೆರ್ಯೋಳು | ಗಾಲೀಬಂದೊಗಾಲಿ ಕೀಲುಬಂದೊಕೀಲು ಕಬ್ಬಿಣದಗಾಲೀ ಬಂಡೀಯು | ಕಬ್ಬಿಣದ ಬಂಡಿಮೇಲೆ ಬರುವ್ರೊದೊಡ್ಡಮ್ಮಾನ ಓಲೆಹೊಳ್ದಾವೇಬಿಸಲೀಗೇ | ಬಂಡೀಬಂದೋ ಬಂಡಿಕಂಡುಬಂದೋಬಂಡಿ ಕಬ್ಬಿ ಣದ ಬಂಡಿಮೇಲೆ ಬರುತಾಳೇ | ಕಬ್ಬಿಣದ ಗಾಲಿಮೇಲೆ ಬರುವ್ರೋದೊಡ್ಡಮ್ಮಾನ ಬಂಡಿಹೊಳೆದಾವ್ರೋ ಬಿಸಲೀಗೇ ( ಬೆಳಕೀಗೆ ) | ಗಂಧಗಮ್ಮೆಂದೂ ಬಂದೋರು ಯಾರಮ್ಮ ಗಂಧಾದಾಭರಣೀ ಹಿಡಕೊಂಡು | ಗಂಧಾದಾಭರಣೀ ಹಿಡಕೊಂಡು ದೊಡ್ಡಮ್ಮ ಕೇರೀಕೇರೀಲೀ ಮೆರೆದಾಳೋ | ಸೋಬನ್ನಿರೆ ಸೋಬನಾಬನ್ನೀರೇ ||

---

## ಪಶುಪಾಲನೆ

---

ನಮ್ಮೂರಿನಲ್ಲಿ ದನಕರುಗಳಿಲ್ಲದ ಮನೆಯೇ ಇರಲಿಲ್ಲ. ಒಕ್ಕಲಿಗರಿಗೆ ಅದೇ ಒಂದು ತಿರುಗಾಡುವ ಆಸ್ತಿಯಾಗಿದ್ದಿತು. ಕಷ್ಟಪಟ್ಟು ಆರೈಕೆಯನ್ನೂ ಮಾಡು ತ್ತಿದ್ದರು. ಬೆಳಿಗ್ಗೆ ಎರಡಾಳುದ್ದ (ಸುಮಾರು ಹತ್ತುಗಂಟೆ) ಹೊತ್ತಿಗೆ ದನಕರುಗ ಳನ್ನು ಮೇಯಿಸುವುದಕ್ಕೆ ಬಿಡುತ್ತಿದ್ದರು. ಬೆಟ್ಟದ ತಪ್ಪಲುಗಳೂ, ಗೋಮಾಳ ಗಳೂ, ಹೊಲದ ಬದುಗಳೂ ಹೇರಳವಾಗಿದ್ದವು. ಸಾಮಾನ್ಯವಾಗಿ ಎಂಟು

ವರ್ಷಕ್ಕೆ ಮೇಲ್ಪಟ್ಟು ಹದಿನಾಲ್ಕುವರ್ಷದ ಒಳಗಿರುವ ಹೆಣ್ಣುಗಂಡೆಲ್ಲ ದನವನ್ನು ಕಾಯಲು ಹೋಗುತ್ತಿತ್ತು. ಮೂರುನಾಲ್ಕು ವರ್ಷದ ಹುಡುಗರು ದನಗಳ ಹಿಂದೆ ಹೋಗಿ ಸಗಣಿಯನ್ನು ಆಯ್ದು ತಿಪ್ಪೆಯನ್ನು ಬೆಳೆಸುತ್ತಿದ್ದವು. ಕಾಡಿಗೆ ಹೋದ ಹುಡುಗರು ಸಂಜೆಯುವರಿವಿಗೂ ದನಗಳನ್ನು ಮೇಯಿಸಿ ಊರಕಡೆಗೆ ದನವನ್ನು ತಿರಿಗಿಸಿದಾಗ ಅವರು ಹೊರಲು ಸಾಧ್ಯವಾದಷ್ಟು ತೂಕ ಸೌದೆ ಹೊರೆ ಯನ್ನು ತಲೆಯಮೇಲಿಟ್ಟುಕೊಂಡು ಕಂಕುಳಲ್ಲಿ ಹಂಗರು ಬರಲುಗಳನ್ನು ಇರಕಿ ಕೊಂಡು ಬರುವ ವಾಡಿಕೆಯಿತ್ತು. ಹಸುಗಳನ್ನು ಮೇಯಿಸುವ ಜಾಗಗಳಲ್ಲಿ ಹುಡುಗರು ಹಂಬಿನ ಉಯ್ಯಾಲೆಯಾಡುವರು. ಸಣ್ಣಸಣ್ಣ ಕಲ್ಲುಗಳಿಂದ ಪುಟ್ಟ ದಾದ ದೇವರಗುಡಿ ಕಟ್ಟಿ ಕಾಡುಹೂವುಗಳಿಂದ ಸ್ವಾಮಿಯನ್ನರ್ಚಿಸುವರು ಕಕ್ಕೆ ಹಣ್ಣು ಕಾರೇಹಣ್ಣು ಬಿಲ್ಪತ್ರೇಕಾಯಿ ಹುಣಸೇಕಾಯಿಗಳನ್ನು ನಿವೇದನಮಾಡು ವರು. ಕೆಲವರು ಕೊಳಲುಗಳಿಂದ ತಾವೇ ತಾವಾಗಿ ಗಾನಮಾಡುವರು. ಮತ್ತೆ ಕೆಲವರು ಕೊಳಲಿನಂತೆ ಇಂಪಾದ ಯಕ್ಷಗಾನ ಹಾಡುವರು, ನಲಿಯುವರು, ಕುಸ್ತಿಮಾಡುವರು. ಎಷ್ಟೋಸಲ ರಾಜರ ದರ್ಬಾರುಗಳೂ ನಡೆದುಹೋಗುವುವು. ಕಾಡಿನ ತಿಂಡಿಯ ಜೊತೆಗೆ ಊರಿನ ತಿಂಡಿಯನ್ನೂ ಬೆರಸಿ ರುಚಿ ನೋಡುವರು. ಬಿಸಿಲೆನ್ನದೆ ಮಳೆಯೆನ್ನದೆ ಗಾಳಿಯ ಬಡಿತವೆನ್ನದೆ ಮೃಗಗಳ ಕಾಟವನ್ನು ಲೆಕ್ಕಿಸದೆ ಆ ಅರಿಯದ ಹುಡುಗರು ಪಶುಪಾಲನೆ ಮಾಡುತ್ತಾ ಹಸುಗಳನ್ನು ಒರಗಿಕೊಂಡು ದಾರಿಗರನ್ನು ನೋಡುವುದನ್ನು ನೋಡಲು ಎಷ್ಟೋಸಂತೋಷವಾಗಿದ್ದಿತು. ಮನೆಗೆ ಬಂದಮೇಲೆ ಹಿಟ್ಟುಂಡು ಕೆಲವರು ಯಕ್ಷಗಾನದ ಆಟ ಕಲಿಯುವ ಮನೆಗೆ ಹೋಗುತ್ತಿದ್ದರು. ಇಷ್ಟು ಪಶುಸಮೃದ್ಧಿಯಿದ್ದರೂ ಸಮುದ್ರದ ನಂಟಸ್ತನ ಉಪ್ಪಿಗೆ ಬಂಡಾಟ ಎನ್ನುವಂತೆ ಹಾಲು ಮೊಸರು ಬೆಣ್ಣೆಗಳಿಗೆ ಕುಗ್ರಾಮವಾ ಗಿತ್ತು, ಒಳ್ಳೇಜಾತಿಯ ಹೋರಿಗಳೂ ಹಸುಗಳೂ ಅಪರೂಪವಾಗಿದ್ದವು, ಹಿಂದೆ ಇದ್ದವಂತೆ. ಈಚೆಗೆ ಜರ್ಮನಿ ಯುದ್ಧವಾದಾಗ ಯಾರೋ ಕೆಂಪುಜನರು ಬಂದು ಒಳ್ಳೇ ಹೋರಿಗಳನ್ನೆಲ್ಲಾ ಕೊಂಡುಕೊಂಡು ಹೋಗಿಬಿಟ್ಟರೆಂದು ಹೇಳಿದರು.

ದನಗಳಿಗೆ ಸಾಮಾನ್ಯವಾಗಿ ಒದಗುವ ಕಾಯಿಲೆಗಳಿಗೆಲ್ಲಾ ನಮ್ಮೂರವರೇ ಚಿಕಿತ್ಸೆ ಮಾಡುತ್ತಿದ್ದರು. ಚಪ್ಪೇರೋಗದ ಉಚ್ಚಾಟ (ದೊಡ್ಡರೋಗ ಎಂದು ಹೆಸರು) ಹೆಚ್ಚಿದಾಗ ಊರುಮಧ್ಯದಲ್ಲಿರುವ ಗೋಗಲ್ಲು ಪೂಜೆ ಮಾಡುವ ವಾಡಿ ಕೆ, ಗೋಗಲ್ಲಿನೊಳಗೆ ಒಂದು ಯಂತ್ರವನ್ನು ಕೊರೆದಿದ್ದರು. ಕೆಲವರು ಗೊಡ್ಡು

ಬಂತು. (ಜೂನ್ ಹತ್ತನೇ ತಾರೀಕು) ಗದ್ದೆಯ ವ್ಯವಸಾಯ ಹೊಲದ ವ್ಯವಸಾಯ ಎರಡೂ ಒಟ್ಟಿಗೆ. ಹೆಂಗಸರಿಗೂ ಪುರಸತ್ತಿಲ್ಲ, ಗಂಡಸರಿಗೂ ವಿರಾಮವಿಲ್ಲ. ಯಾರನ್ನಾದರೂ ಸ್ವಲ್ಪ ಬಾರೋಗೌಡ ಇಲ್ಲಿ ಅಂದರೆ ಹೋಗೀ ಸೋವಿ್ಾ, ಹರ್ತೆಮುಳ್ಗ್ಗೊ, ಹಡಗು ಮುಳ್ಗ್ಗೊ, ಅಂತಾ ಈಗ ಹರ್ತೇ ಹರ್‍ವಾಕ್ಹೋಗ್ಬೇಕು ಆ ಮೇಲೆ ಬತ್ತೀನಿ ಅನ್ನುತ್ತಿದ್ದರು. ಗದ್ದೆಯ ವ್ಯವಸಾಯಕ್ಕೆ ಅದಲುಬದಲೀ ಆಳುಗಳ ಕ್ರಮವೇ ಹೆಚ್ಚು, ಇವತ್ತು ನಾವು ಒಬ್ಬನ ಗದ್ದೆಗೆ ಪೈರು ನಾಟಹಾಕುವುದಕ್ಕೆ ಹೋದರೆ ಅವನು ನಮಗೆ ದುಡ್ಡುಕೊಡುವಂತಿಲ್ಲ, ನಾವು ನಾಟಿ ಹಾಕುವ ದಿನ ಅವನು ಬಂದೇತೀರಬೇಕು. ಈ ಕ್ರಮಕ್ಕೆ ಮುಯ್ಯಾಳು ಎಂದು ಹೆಸರು. ಮುಯ್ಯಾಳು ಬರದಿದ್ದರೆ ಲಗ್ನ ಕಟ್ಟಿದ ದಿನ ವಿವಾಹ ಭಂಗಮಾಡಿದವನ ಪಾಪವನ್ನು ಅವನ ತಲೆಯ ಮೇಲೆ ಹೊರಿಸುತ್ತಿದ್ದರು. ಪ್ರಥಮೈಕಾದಶಿ ಹಬ್ಬವು ಬಂತು. (ಉಪಾಸದ ಹಬ್ಬ) ಹುಡುಗರೂ ದೊಡ್ಡವರೂ ಎಲ್ಲರೂ ಹೊಲಗಳ ಬೈಲಿನಲ್ಲಿ ಪಟ ಆಡಿಸುವ ಸಂತೋಷದಲ್ಲಿದ್ದರು. ಕಾರಹಬ್ಬದ (ಹುಣ್ಣಿಮೆಯ) ದಿನ ಆರಂಬದ ಸಾಮಾನುಗಳಿಗೆಲ್ಲಾ ಪೂಜೆ ಮಾಡುವ ವಾಡಿಕೆ.

**ಶ್ರಾವಣಮಾಸ**—ಇಷ್ಟು ಹೊತ್ತಿಗೆ ಹೊಲಗಳಲ್ಲಿ ಗಿಡ್ಡರಾಗಿಯು ಬಂದು ದೊಡ್ಡರಾಗಿಯ ನಾಟಿಯನ್ನು ಹಾಕಿದ್ದರು. ಗದ್ದೆಗಳ ನಾಟಿಯೂ ಪೂರೈಸಿತ್ತು. ಮಖೇಮಳೆಯನ್ನು ಕಾಯ್ದು ಹುಯ್ದರೆ ಮೊಗೆ ಹೋದರೆ ಹೊಗೆ ಅನ್ನುತ್ತಿದ್ದರು. ಪುಷ್ಯದ ಮಳೆಯನ್ನು ಪುಸ್ಯವು ಹುಸಿದರೆ ಸಸ್ಯವು ಸಾಯಿತು ಎಂದೂ ಆರಿದ್ರೆ ಮಳೆಯು ಗುಡುಗಿದರೆ ಮುಂದೆ ಮಳೆಯಾಗುವುದಿಲ್ಲವೆಂದೂ, ಪುನರ್ವಸೂಮಳೆಯೂ ಗುಡುಗಿದರೆ ಸುವೃಷ್ಟಿಯಾಗುವುದೆಂದೂ ತಿಳಿದಿದ್ದರು. ಪ್ರತಿ ಶನಿವಾರ ಎಲ್ಲರೂ ಸ್ನಾನಮಾಡಿ ದೇವರ ಭಜನೆ, ದೇವರ ದರ್ಶನ, ದೇವರನಾಮದ ಹಾಡುಗಾರಿಕೆಗಳಲ್ಲಿ ಮಗ್ನರಾಗಿದ್ದರು. ರಾತ್ರಿವೇಳೆ ಊರುಸುತ್ತಲೂ ಭಜನೆ ಬರುತ್ತಿತ್ತು. ಕೆಲವರು ಜಾತಿಪದ್ಧತಿ (ಮಾಂಸ) ಊಟವನ್ನು ಈ ತಿಂಗಳಲ್ಲಿ ನಿಲ್ಲಿಸಿದ್ದರು.

**ಭಾದ್ರಪದಮಾಸ**—ಗೌರಮ್ಮನ ಹಬ್ಬ, ಗಣಪತಿ ಹಬ್ಬಗಳ ಸಡಗರ. ಎಲ್ಲೆಲ್ಲೂ ತೆಂಗಿನಕಾಯಿ ಸೌತೇಕಾಯಿಗಳ ಓಡಾಟ, ಇವುಗಳಿಗೆ ತೆಂಗಿನಕಾಯಿ ಹಬ್ಬವೆಂದರೂ ಸಲ್ಲುವುದು. ಹುಡುಗರು ಈಗಲೇ ಪಟಾಕಿ ಪಟಾಸು ಸುರು ಸುರುಬತ್ತಿಗಳನ್ನು ಹತ್ತಿಸುತ್ತಿದ್ದರು. ಗೌರಮ್ಮನ ಮಂಟಪ ಕಟ್ಟಿರುವ ಮನೆಯ್ಲು

ಮದುವೆ ಮನೆಯಂತೆ ಸದಾ ಸಡಗರದಿಂದ ಕೂಡಿತ್ತು. ರೈತರೆಲ್ಲಾ ಮನೆಯ ಹೊಸಲಿಗೆ ಕಾಯಿ ಒಡೆದಿಟ್ಟು ಧೂಪ ಹಾಕಿ ಪೂಜಿಸುತ್ತಿದ್ದರು. ಭಾದ್ರಪದ ಕೃಷ್ಣಪಕ್ಷವನ್ನು (ಮಾಳಪಕ್ಷ) ಎಂದು ಕರೆಯುವರು. ಆಗ ನವಗ್ರಹದಾನ ಎಡೆ ಕಟ್ಟಳೆಯ ದಾನಗಳು ವಿಶೇಷ. ಮುಖಂಡರು ವಸ್ತ್ರಗಳನ್ನೂ ದಾನದ ಜೊತೆಗೆ ಸೇರಿಸಿದ್ದರು. ಪ್ರತಿಯೊಬ್ಬರೂ ಕಷ್ಟಪಟ್ಟು ಪಿತೃಋಣವನ್ನು ತೀರಿಸುತ್ತಿದ್ದರು. ಈ ಪಕ್ಷವನ್ನು ತಲೆ ಬೀಳುವ ಪಕ್ಷ ಎನ್ನುವ ರೂಢಿ ಹದಿನೈದು ದಿನಕ್ಕೆ ಮುಂಚಿತವಾಗಿಯೇ ನಂಟರು ನಾಲ್ವಾರಿಗೆ ಹೇಳಿ ಬರುತ್ತಿದ್ದರು. ಎಡೆ ಇಟ್ಟ ಬೆಳಿಗ್ಗೆ ಮದುವೆಯಾದ ಸಂಜೆ ಹಳ್ಳಿಗರು ಸಾಲಾಗಿ ತಮ್ಮ ತಮ್ಮ ಪರಸ್ಥಳಕ್ಕೆ ಹೋಗುತ್ತಿದ್ದರು. ಇಹಪರದ ಭಕ್ತಿಗಳನ್ನು ಕಾಣುವ ಈ ಎರಡು ಸಂದರ್ಭವು ಬಲು ಪ್ರೇಕ್ಷಣೀಯವಾಗಿತ್ತು.

**ಆಶ್ವಯುಜಮಾಸ**—ಮೈಸೂರಿಗೆ ಫೌಜಿಗೆ ಹೋಗುವ ಸಂಭ್ರಮ. ವ್ಯವಸಾಯಕ್ಕೆ ಸ್ವಲ್ಪ ವಿರಾಮಕಾಲ.

**ಕಾರ್ತಿಕಮಾಸ**—ದಲ್ಲಿ ಪ್ರತಿಯೊಬ್ಬರೂ ಮನೆಯ ಬಾಗಿಲಿನಲ್ಲಿ ದೀಪ ಹತ್ತಿಸಿಡುತ್ತಿದ್ದರು. ದೊಡ್ಡವರು ದೊಡ್ಡದಾದ ಬಿದಿರು ಅಥವಾ ಅಡಕೆಯ ಗಳುವನ್ನು ನೆಟ್ಟು ಅದರಮೇಲೆ ಲಾಂದ್ರಗಳನ್ನು ಹತ್ತಿಸುತ್ತಿದ್ದರು. ಆಗ ದೇವತೆಗಳು ಸಂಚರಿಸುವ ಮಾಸವೆಂದು ನಂಬಿದ್ದರು.

**ಮಾರ್ಗಶಿರ ಪುಷ್ಯಮಾಸ**—ಗಳಲ್ಲಿ ಊರೊಳಗೆ ಜನಗಳೇ ಕಮ್ಮಿ. ಎಲ್ಲರೂ ಬೈಲುಗಳಲ್ಲೇ ತಂಗಿರುವರು. ಹೊಂಬಣ್ಣದ ಪೈರುಗಳನ್ನು ನೋಡಿದರೆ ಲಕ್ಷ್ಮಿಯು ತಾಂಡವವಾಡುವಂತಿತ್ತು. ಪೈರನ್ನು ಕುಯಿದು ಒಟ್ಟಿ, ಎಕ್ಕಿ, ಕೊಚ್ಚಿ, ಕೇರಿ, ರೇಖುಮಾಡಿ ಗುತ್ತಿಗೇದಾರರಿಗೆ ಕೊಡುತ್ತಿದ್ದರು. ಸ್ವಂತವಾದರೆ ಮನೆಗೆ ತರುತ್ತಿದ್ದರು. ಭತ್ತವನ್ನೆಲ್ಲಾ ಕುಯಿದಮೇಲೆ ಹೋಯಿಲ್ಗೊ ರಂಗ ಹೋಯಿಲ್ಗೊ ಸ್ವಾಮಿ ಎಂದು ಎಲ್ಲರೂ ಹರ್ಷಧ್ವನಿಮಾಡುತ್ತಿದ್ದರು. ಕಾಳಿನ ರಾಶಿಯಸುತ್ತಲೂ ಇದೇ ರೀತಿಯಾಗಿ ಕೂಗಿಕೊಂಡು ಮೊರದ ಅಂಚಿನಿಂದ ಗೆರೆಹಾಕುತ್ತಿದ್ದರು. ಆಗ ದಾನಧರ್ಮಗಳು ಅಧಿಕ. ಹಳ್ಳಿಯ ಕಡೆ ದುಡ್ಡಿನ ಓಡಾಟ ಕಮ್ಮಿ. ಎಲ್ಲದಕ್ಕೂ ದಿನಸಿಯನ್ನು ಕೊಡುತ್ತಿದ್ದರು. ಮೊದಲು ಪೂಜಾರಿಗೆ ಹೊರೆಹುಲ್ಲು ಮೊರಭತ್ತ ಸಲ್ಲುತ್ತಿತ್ತು. ಅನಂತರ ಆಗಸರು, ಓಲಗದವರು, ಬಡಗಿಗಳು ಒಂದು ಹೊರೆ ಭಾರಿಯಾದ ಅರಿಹುಲ್ಲನ್ನು

(ಭ ತ್ತ ಸ ಹಿ ತ ವಾ ದ ಹುಲ್ಲು) ಹೊತ್ತುಕೊಂಡು ಬರುವರು. ಈ ಹಡದೇ (ಭ ತ್ತ ಸ ಹಿ ತ ವಾ ದ ಹುಲ್ಲು) ಹೊತ್ತುಕೊಂಡು ಬರುವವರಿಗೆ ಹಡದೇ ಒಕ್ಕಲೆಂದು ಹೆಸರು ಅಗಸನು ಒಳ್ಳೇದು ಕೆಟ್ಟದ್ದರಲ್ಲಿ ವರ್ಷಪರ್ಯಂತರ ಬಟ್ಟೆ ಒಗೆಯುವುದು, ಬಡಗಿಯು ವರ್ಷಪರ್ಯಂತರ ಆರಂಬದ ಸಾಮಾನು ಮಾಡಿಕೊಡುವುದು, ಓಲಗದವರು ಒಂದುವರ್ಷದ ವರೆಗೆ ಉದ್ಯೋಗ ಮಾಡುವುದು ವಾಡಿಕೆ. ದಾಸಯ್ಯನು ಒಂದು ತುತ್ತೂರಿ ಊದಿ ಬವನಾಸಿ ತುಂಬಾ ಭತ್ತ ತುಂಬಿಕೊಂಡು ಹೋಗುತ್ತಿದ್ದನು. ಇತ್ತೀಚೆಗೆ ಎರಡುಕಣಾ ಕಾಯ್ದು ದಾಸಯ್ಯ ಕೆಟ್ಟ ಅನ್ನುವುದು ನಿಜವಾಗುತ್ತಲಿತ್ತು. ಇದರ ಮೇಲೆ ಪಾಪಿ ಪರದೇಶಿಗಳಿಗೆ ಕೊಡುತ್ತಿದ್ದರು. ಇಷ್ಟೆಲ್ಲಾ ದಾನಧರ್ಮಗಳು ನಡೆದು ಮನೆಗೆ ದಿನಸಿಯನ್ನು ತಂದಮೇಲೆ ಊರೊಳಗೆ ಕೋಲೇ ಬಸವಣ್ಣನಾಟ, ಡೊಂಬರ ಆಟ, ಯಕ್ಷಿಣಿ ಆಟ, ಚಕ್ಕಳ ಗೊಂಬೆ ಆಟ ಮುಂತಾದವು ಕಾಯ್ದುಕೊಂಡಿದ್ದವು. ಇವುಗಳಿಗೂ ಭತ್ತವನ್ನು ಸುಮಾರಾಗಿ ಕೊಡುತ್ತಿದ್ದರು. ಒಂದು ದಿನ ನಮ್ಮೂರ ಅಕಸಾಲಿಗನ ಮನೆಯಲ್ಲಿ ಜಗಳವಾಗುತ್ತಿತ್ತು. ಹೊಸಬರಿಬ್ಬರು ನಾವು ನಿಮಗೆ ಹಿರೀಮಕ್ಕಳು, ನಮಗೆ ಕೊಡುವುದನ್ನು ಕೊಡಿ ಎಂದು ಆಚಾರಿಯ ಕಾಲುಕಾಲಿಗೆ ಬೀಳುತ್ತಿದ್ದರು. ಇದೇನು ಗದ್ದಲ ಎಂದು ಕೇಳುವ ಹೊತ್ತಿಗೆ ಕಂಕಳುಚೀಲದಿಂದ ಒಂದು ಹಿತ್ತಾಳೆ ಹಲಗೆಯ ಶಾಸನವನ್ನು ತೆಗೆದು ನೋಡಿ ಸ್ವಾಮಿ, ಇದೇನು ನಾವು ಮಾಡಿದ್ದೆ, ಹಿಂದಿಲಿಂದ ಬಂದದ್ದು ಎಂದು ತೋರಿಸಿದರು. ಅದರಲ್ಲಿ ಹೀಗಿತ್ತು (ಸಾರಾಂಶ)

ಹಿಂದೊಂದಾನೊಂದು ಕಾಲದಲ್ಲಿ ಕಾಂಚೀನಗರದ ರಾಜನು ಅಲ್ಲಿನ ಕಾಳಕಾಮ್ಮನವರ ರಥೋತ್ಸವ ಸಮಯದೊಳ್ ಕಂಚಿನ ತೇರಂ ತೆಪ್ಪದಮೇಲಿಟ್ಟು ಸರೋವರದೊಳಗೆ ತೆಪ್ಪೋತ್ಸವ ಮಹೋತ್ಸವ ದರ್ಶನದಿಂ ಆನಂದಲಹರಿಯಲ್ಲಿರುವಾಗ ಇದ್ದಕ್ಕಿದ್ದ ಹಾಗೆ ತೆಪ್ಪದೊಡನೆ ತೇರೂ ಮುಳುಗಿಹೋಯಿತು. ಆಗಲಾ ನೃಪಂ ಅಧಿಕ ಚಿಂತಾಕುಲನಾಗಿ ಮಂಚದ ಮೇಲೆ ಮೊಕ್ಕಡೆಯಾಗಿ ಮಲಗಲು ಈ ಸಮಾಚಾರವು ನಗರದಲ್ಲಿ ಹರಡಿ ಜನರೆಲ್ಲಾ ಹಾಹಾಕಾರಪಟ್ಟರು. ರಾಜನು ಆ ತೇರನ್ನು ಯಾರು ಮೇಲೆತ್ತುವರೋ ಅವರಿಗೆ ಬೇಕಾದ್ದು ಕೊಡುವೆನೆಂದು ಡಂಗೂರ ಹೊಡೆಸಿದನು. ಅನೇಕರು ಪ್ರಯತ್ನಪಟ್ಟು ನಿರಾಶರಾದರು. ಕಡೆಗೆ ಗೊಲ್ಲರ ಕೆಲಸ ಮಾಡಿಕೊಂಡು ಅರಮನೆಯಲ್ಲಿದ್ದ ಇಬ್ಬರು ಹುಡುಗರು ಅನೇಕ ಉಪಾಯಗಳಿಂದ ರಾಜಗೊಡಂಬಡಿಸಿ ತಮ್ಮ ಮಂತ್ರಶಕ್ತಿಯಿಂದ ತೆಪ್ಪಸಹಿತವಾಗಿ ತೇಠನ್ನು ಮೇಲಕ್ಕೆತ್ತಿ ತೆಪ್ಪೋತ್ಸವವನ್ನು ಸಾಂಗವಾಗಿ ನೆರವೇರಿಸಿದರು.

ಈ ಕಾರಣಕ್ಕಾಗಿ ರಾಜನು ಅವರಿಗೆ ಶಾಸನ ಮಾಡಿಕೊಟ್ಟಿರುವನು. ಅದರಲ್ಲಿ ಕಾಶಿಯಿಂದ ರಾಮೇಶ್ವರದವರೆಗಿನ ಎಲ್ಲಾ ವಿಶ್ವಕರ್ಮನ ಸಂತತಿಯವರು ಈ ಕಂಚೀ ಗೊಲ್ಲರಿಗೆ ಭತ್ಯ ದುಡ್ಡು ಮಿರಾಸೆ ಕೊಟ್ಟು ತಲತಲಾಂತರದಲ್ಲೂ ಕಾಪಾಡಿ ಕೊಂಡು ಬರಬೇಕೆಂದಿದೆ. ತೆಲುಗು ಅಕ್ಷರ ಕೆಲವು. ಭಾಷೆಯೂ ತೆಲಗೆ ಈಗ ನಮ್ಮ ದೇಶದಲ್ಲಿ ನೆಲಸಿರುವ ಅವರ ಸಂತತಿಯವರಿಗೆ ಪುಣಜಮಕ್ಕಳು, ಹಳೇಮ ಕ್ಕಳು ಎಂದು ಹೆಸರಾಗಿದೆ (ಕಂಚಿ ಗೊಲ್ಲರೇಬೇರೆ ಎಂದು ಕೆಲವರ ಮತ) ಇದಿರಲಿ. ಕಡೆಗೆ ಒಂದು ದಿನದ ವರೆಗೂ ಭಂಡಾಟ ಆಡಿ ನಮ್ಮೂರ ಆಚಾರಿಯ ಹತ್ತಿರ ಒಕ್ಕಳ ಭತ್ತ ಕಿತ್ತುಕೊಂಡು ಹೊರಟ. ಹೀಗೆ ಪುಷ್ಯ--ಮಾಘಮಾಸಗಳಲ್ಲಿ ಪಳೂ ಮೂರೂ ತಲೆಯಿಂದ ಬಂದ ಸಂಪ್ರದಾಯದಂತೆ ಕೊಟ್ಟು, ಕಂದಾಯಕ್ಕಾಗಿ ಕೊಟ್ಟು, ಬಡ್ಡಿ ಬಟ್ಟೆಬರೆಗೆ ಕೊಟ್ಟು ಮಿಕ್ಕರೆ ಹೊಟ್ಟೆಪಾಡಿಗಾಗುತ್ತಿತ್ತು. ಮಾರ್ಗಶಿರ, ಪುಷ್ಯ, ಮಾಘಮಾಸಗಳಲ್ಲಿ ಒಂದೊಂದು ದಿನ ನಾಗರಪಂಚಮಿ ಎಂದು ಹಾವಿನ ಹುತ್ತಕ್ಕೆ ಪೂಜೆ ಮಾಡುವ ವಾಡಿಕೆ. ಸುಬ್ರಾಯನ ಷಷ್ಟಿಯ ಲ್ಲೂ ನಾಗಪ್ಪನಿಗೆ ತನಿ ಎರಿಯುತ್ತಿದ್ದರು ಆದರೆ ತರಕಾರಿ ಸುಗ್ಗಿಯಕಾಲವಾದ ಮೇಲಿನ ಮೂರು ತಿಂಗಳುಗಳಲ್ಲಿ ಹೂವು ಪಂಚಮಿ, ಕಾಯಿ ಪಂಚಮಿ, ತಳಲು ಪಂಚಮಿ ಎಂದು ಹುತ್ತದ ಹತ್ತಿರ ಪೂಜೆ ಊಟಗಳು ನೆರವೇರುತ್ತಿದ್ದವು (ಆ ದಿನ ಏಕಾದಶಿಯಾಗಿದ್ದರೂ ಪಂಚಮಿಯೆ.) ಅವರೇಕಾಯಿ ಈ ಸಮಯದಲ್ಲಿ ಹೂವು ಕಾಯಿ ತಳಲುರೂಪವನ್ನು ತಾಳುತ್ತಿದ್ದುದರಿಂದ ಈ ಹೆಸರು ಬಂದಿರಬಹುದು.

ಮಾಘಮಾಸದಲ್ಲಿ ಹೇಮಗಿರಿ ರಂಗನ ಪರಸೆ, ಸುಮಾರು ಲಕ್ಷಪ್ರಜೆ ಗಳೂ ಐವತ್ತುಸಾವಿರ ದನಗಳೂ ಸೇರುತ್ತಿದ್ದವು. ಮೈಸೂರಿನ ಅಂಗಡಿ ಬೀದಿಯು ಹದಿನೈದು ದಿನ ಇಲ್ಲೇ ತಳುಗುತ್ತಿತ್ತು. ನಾಟಕದವರು, ಸರ್ಕಸ್ಸಿ ನವರು, ಚಿತ್ರದರ್ಶಕರು, ಮತಬೋಧಕರು ಇತ್ಯಾದಿಗಳಿಗೊಂದು ಸುಗ್ಗಿಯ ಕಾಲ. ನಮ್ಮೂರಿನಲ್ಲಿ ಕಸ ಕಡ್ಡಿಗೂ ಆಗ ಬೆಲೆ. ಹದಿನೈದು ದಿನ ಕಾಡು ಬೆಟ್ಟವು ಸಿಂಗರಿಸಿದ ಪಟ್ಟಣವಾಗಿತ್ತು. ನೀರು ನೆರಳಿಗೆ ಅನುಕೂಲವನ್ನು ದೇವರೇ ದಯ ಪಾಲಿಸಿದ್ದನು. ನಮ್ಮೂರವರು ತೇರೊಪ್ಪತ್ತು ಎಂದು ಹಸಿದಿದ್ದು ದೇವರದರ್ಶನ ಮಾಡಿಕೊಂಡು ಬಂದು ಆ ಮೇಲೆ ಊಟ ಮಾಡುವರು. ಫಾಲ್ಗುಣಮಾಸದಲ್ಲಿ (ಕಾಮನ ಹುಣ್ಣಿಮೆ) ಚುಂಚನಗಿರಿ ಜಾತ್ರೆಗೆ ಹೋಗಿ ಬರುವ ವಾಡಿಕೆಯಿತ್ತು. ಸುಬ್ಬರಾಯನ ಷಷ್ಟಿಗೆ ರಾಮನಾಥಪುರಕ್ಕೂ ಪೋಣೋರ್ಮಿಗೆ ಸಂಜನಗೂ

ಡಿಗೂ ವೈರಮುಡಿಗಾಗಿ ಮೇಲುಕೋಟೆಗೂ ಶ್ರವಣಬೆಳ್ಗೊಳ ತಲಕಾಡುಗಳಿಗೂ ಸಾಮಾನ್ಯವಾಗಿ ಪ್ರಸಿದ್ಧವಾದ ತೀರ್ಥಯಾತ್ರೆಗಳಿಗೆಲ್ಲಾ ನಮ್ಮವರು ತಂಡತಂಡವಾಗಿ ಹೋಗಿಬಂದು ಪುಣ್ಯಸಂಪಾದನೆ ಮಾಡುತ್ತಿದ್ದರು. ಚುಂಚನಗಿರಿ ಮಠದ ಗುರುಗಳೂ ಸ್ವಯಮಾಚಾರ್ಯಪುರುಷರೂ ಶಿಷ್ಯರ ಮೇಲೆ ದೀಪಧೂಪದ ಕಾಣಿಕೆ ಎತ್ತಲು ಬಂದು ತಂಗುತ್ತಿದ್ದರು. ಇವರಿಗೆಲ್ಲಾ ಮಾಮೂಲು ಸಲ್ಲುತ್ತಿತ್ತು. ಒಬ್ಬರಾದರೂ ಬಾಯಿಬಿಟ್ಟು ಶಿಷ್ಯರಿಗೆ ಸಾಮಾಜಿಕ ನೀತಿಯ ಬೌದ್ಧಿಕವಿಚಾರಗಳನ್ನು ಹೇಳುತ್ತಿರಲಿಲ್ಲ. ಶಿಷ್ಯರು ಇವರು ಗಲಾಟೆಯಿಲ್ಲದೆ ಹೋದರೆ ಸಾಕೆಂದು ತವಕಪಡುತ್ತಿದ್ದರು. ನೀಲಗಿರಿ ಬೊಂಬಾಯಿಕಡೆ ತಿರುಗಿಬಂದ ಕೆಲವು ಜನ ರೈತರು ಓಹೋ ಮುಂಚೆ ಕೊಡ್ರಪ್ಪ ಗುರ್ಗಳ್ಗೆ, ಒಂದ್ಹೆಸರ್ಬಲಾಕಾಣೆ ಒಂದು ಮನೆ ಆಯಾ ಹೇಳೋದ್ಯಾಕಣೆ, ಕೊಡಿ ಕೊಡಿ ಎಂದು ಒಟಗುಟ್ಟುತ್ತಿದ್ದರು. ಅಂತೂ ಇಂತೂ ಅದೂ ಮಾಮೂಲಿನಂತೆ ನಡದೇಹೋಗುತ್ತಿತ್ತು.

## ನಮ್ಮೂರಿನ ಹೊಲೆಯರು

ಈ ಹೊಲೆಯರ ಗುಂಪನ್ನು ನೋಡಿದರೆ ನಮ್ಮೂರಿನಲ್ಲಿ ಮೂರು ಅಂತಸ್ತಿನ ಜನರಿದ್ದರೆಂದು ಧಾರಾಳವಾಗಿ ಹೇಳಬಹುದು. ಒಂದು ಯಜಮಾನಿಕೆ, ಎರಡನೇದು ಆಳುತನ, ಮೂರನೇದು ಇವರಿಬ್ಬರ ದಳ್ಳಾಳತನ, ಆಳುತನದ ಗುಂಪೇ ಹೊಲೆಯರು. ಮುಕ್ಕಾಲುಪಾಲು ಇವರೆಲ್ಲಾ ಊರೊಳಗೆ ರೈತರ ಮನೆಯಲ್ಲಿ ಜೀತಗಾರರಾಗಿದ್ದರು. ಹೆಂಗಸರು ಮೈತುಂಬಾ ಬಟ್ಟೆಯುಡುತ್ತಿದ್ದರು. ದೊಡ್ಡವರಾಗಿದ್ದ ಗಂಡಸರೂ, ಕೆಲವು ಜನ ಹೆಂಗಸರೂ, ಕುಲವಾಡಿಗಳಾಗಿದ್ದರು. ಅವರು ಗ್ರಾಮಸ್ಥರ ಕೆಲಸ ಗ್ರಾಮದ ಕೆಲಸ, ಸರ್ಕಾರದವರಿಗೆ ಮತ್ತು ಇನಾಂದಾರರಿಗೆ ಸೌದೆ ಸೊಪ್ಪು ಒದಗಿಸುವುದು, ಮೂಟೆ ಹೊರುವುದು ಇವುಗಳಲ್ಲೇ ಜೀವವನ್ನು ತೇದುಬಂದಿದ್ದರು. ಇನಾಂತಿ ಜಮೀನು ಕುಲವಾಡಿಕೆಗಾಗಿ ಬಿಟ್ಟಿತ್ತು. ವಿದ್ಯಾಭ್ಯಾಸವಂತೂ ಶುದ್ಧ ಸುಂಠಕಾಯಿ. ಮಾಂಸಭಕ್ಷಣ, ಮದ್ಯಪಾನ ಇವು ವಂಶಪಾರಂಪರ್ಯವಾಗಿ ಬಂದ ಸಂಪ್ರದಾಯ. ಹೊಲೆಯರು ಮಾಯಮ್ಮದೇವರನ್ನು ಪೂಜಿಸುತ್ತಿದ್ದರು. ಓಲಗದ ಕೆಲಸ, ಮನೆ ಕಟ್ಟುವ ಕೆಲಸ, ಕ್ಷೌರದ ಕೆಲಸ ಎಲ್ಲವೂ ಅವರಲ್ಲೇ ನಡೆಯುವುದು. ಒಡತನ, ಕೊಳಕುವೃತ್ತಿ, ಅವಿದ್ಯೆ

ಇವುಗಳೇ ಅವರು ಜೀತಗಾರರಾಗುವುದಕ್ಕೆ ಕಾರಣ. ಇಷ್ಟಾದರೂ ಅವರು ಉಸಿರಿನಿಂದಿರುವುದಕ್ಕೆ ದೇಹಬಲ, ನಂಬಿದರೆ ಪ್ರಾಣಕೊಡುವ ಸ್ವಭಾವ, ಇವು ಗಳು ಮೂಲಕಾರಣವಾಗಿದ್ದವು. ಸಂಪ್ರದಾಯಗಳೆಲ್ಲಾ ಹೆಚ್ಚುಕಮ್ಮಿ ಮೇಲೆ ಹೇಳಿದಂತೆ ಮದುವೆ ಪ್ರಸ್ತಗಳಲ್ಲಿ ನಡೆಯುತ್ತಿದ್ದವು.

## ಸತ್ತ ಮೇಲೆ

ಮನುಷ್ಯನು ಏನಾದರೊಂದು ನೆವದಿಂದ ಸಾಯುವುದು ಸ್ವಭಾವವಷ್ಟೆ. ನಮ್ಮೂರಿನ ಜನಗಳಿಗೆ ಕಾಯಿಲೆಯೇ ಮುಂತಾದವು ಕಾಣಿಸಿಕೊಂಡರೆ, ದೇವ ರಿಗೆ ಹರಕೆ ಕಟ್ಟುವುದು, ಯಾರಾದರೂ ಮಾಟಕೂಟಗಳನ್ನು ಮಾಡಿಸಿದ್ದಾರೆಂಬ ಭೀತಿಯ ಮೇಲೆ ಅದಕ್ಕೆ ಪ್ರತೀಕಾರ ಮಾಡುವುದು ವೈದ್ಯರೆಂದು ಹಳ್ಳಿಯಲ್ಲಿ ಪ್ರಸಿದ್ಧರಾಗಿರುವವರ ಮನೆಗೆ ಹೋಗಿ ಸ್ವಲ್ಪ ಔಷಧಿ ತರುವುದು, ಯಂತ್ರ, ಮಂತ್ರ ಮಾಡಿಸುವುದು ಇವಿಷ್ಟು ಚಿಕಿತ್ಸಾ ಪ್ರಕರಣಗಳು. ಒಂದುವೇಳೆ ಕರ್ಮ ವಶದಿಂದ ದೈವಾಧೀನವಾದರೆ ಪಟೇಲನಿಗೆ ತಿಳಿಸಿಬಿಟ್ಟರೆ ಅವನು ಕುಲವಾಡಿ ಯನ್ನು ಕೊಂಬು ತಮಟೆ ಸಹಿತ ಕರಕೊಂಡು ಬಂದು ಸತ್ತವರ ಮನೆಯ ಮುಂದೆ ಬೆಂಕಿ ಹಾಕಿಸಿ ಬೇಗನೆ ಹೆಣವನ್ನು ಒಪ್ಪಾ (ಸಮಾಧಿ) ಮಾಡುವ ತರದೂದು ನಡೆಸುತ್ತಿದ್ದನು. ಮಾರನೇ ಬೆಳಗ್ಗೆ ಸರಕಾರಕ್ಕೆ ಸತ್ತವರದಿಯನ್ನು ತಿಳಿಸಿಬಿಡು ತ್ತಿದ್ದನು ಸ್ವಲ್ಪಹೊತ್ತು ಮನೆಯವರ ದುಃಖಾತಿರೇಕವು ನಡೆದು ಸಮಾಧಾನ ವಾದಾಗ ಹೆಣಕ್ಕೆ ಬಿಸಿನೀರಿನಿಂದ ಸ್ನಾನಮಾಡಿಸಿ ಬೇರೆ ಬಟ್ಟೆಯುಡಿಸಿ ಶೃಂಗಾರ ಮಾಡಿ ಮಸಣಕ್ಕೆ ಒಯ್ಯುತ್ತಿದ್ದರು. ಅರ್ಧ ದಾರಿಯಲ್ಲಿದ್ದ ಹೆಣವಿಡೊಬಸ್ರೀ ಮರದ ಕೆಳಗೆ ಮೃತದೇಹವನ್ನಿಳುಕಿ ಮುಂದುಗಡೆ ಹೊರುತ್ತಿದ್ದವರು ಹಿಂದುಗ ಡೆಗೂ ಹಿಂದುಗಡೆಯವರು ಮುಂದುಗಡೆಗೂ ಬದಲಾಯಿಸಿಕೊಳ್ಳುತ್ತಿದ್ದರು. ರುದ್ರಭೂಮಿಗೆ ಹೋದನಂತರ ಕುಲವಾಡಿಯು ಹಳ್ಳ ತೆಗೆಯುತ್ತಿದ್ದನು. ಅವನಿಗೆ "ಶ್ಮಶಾನದ ಯಜಮಾನಿಕೆ" ಎಂದೂ ಜಾಗದ ಖರೀದಿ ಎಂದೂ ಒಂದಾಣೆ ಒಂದು ಒಕ್ಕಳ ಭತ್ತ ಮಿರಾಸು ಕೊಡುವುದು ವಾಡಿಕೆಯಾಗಿತ್ತು. ಶವವನ್ನು ಹಳ್ಳದಲ್ಲಿ ಮಲಗಿಸಿ ಬಾಳೆಲೆ ಮುಚ್ಚಿ ಮೇಲೆ ಮಣ್ಣನ್ನು ಎಳೆದು ಗಟ್ಟಿ ಮಾಡು ತ್ತಿದ್ದರು. ಇಲ್ಲದಿದ್ದರೆ ನರಿಗಳು ಬಲು ಆಳದವರೆಗೂ ಬಗಿದ ಬಿಡುವುವು ಎಂದು

ಹೇಳಿದರು. ಬಸರಿಯರು ಸತ್ತರೆ ಅವರನ್ನು ಕಾಡುಗಿಡದಲ್ಲಿರಿಸಿ ಕತ್ತಿನ ನೇರಕ್ಕೆ ಕವೆಕಡ್ಡಿಯನ್ನು ಕೊಟ್ಟು ಎಲೆ ಮುಚ್ಚಿ ಗಡಿಗೆಯಲ್ಲಿ ನೀರಿಟ್ಟು ಬಂದುಬಿಡುತ್ತಿದ್ದರು. ಸೂತಕ ಸಂಬಂಧವುಳ್ಳವರು ನದಿಯಲ್ಲಿ ಸ್ನಾನಮಾಡುವರು ಬಾಕಿಯುವರು ಸುಮ್ಮನೆ ನದಿಯಲ್ಲಿ ಕೈಕಾಲುಮಾತ್ರ ತೊಳೆದುಕೊಂಡು ನೀರನ್ನು ಮೇಲೆ ಪ್ರೋಕ್ಷಿಸಿಕೊಳ್ಳುವರು. ಹೊಲೆಯರು ಸಗಣೀನೀರನ್ನು ಚುಮುಕಿಸಿಕೊಂಡು ಮನೆಗೆ ಹೋಗುವರು. ಅಗಸನು ಮಡೀಬಟ್ಟೆಯನ್ನು ಇಟ್ಟುಕೊಂಡಿದ್ದು ಸ್ನಾನಮಾಡಿದವರಿಗೆ ಕೊಟ್ಟು ಅವರ ಮೈಲಿಗೇ ಬಟ್ಟೆಯನ್ನು ತೆಗೆದುಕೊಂಡು ಒಗೆಯುತ್ತಿದ್ದನು. ಅವನಿಗೂ ಮಿರಾಸಿತ್ತು. ಅರ್ಧದಾರಿಯಲ್ಲಿ ಕೂತು ಎಲ್ಲರೂ ಎಲೆ ಅಡಕೆ ಹಾಕಿಕೊಂಡು ಮನೆಗೆ ಬಂದಮೇಲೆ ಸತ್ತವರ ಮನೆಗೆ ಅಕ್ಕಪಕ್ಕದ ಮನೆಯ ನಂಟರಿಷ್ಟರು ದುಃಖದ ಕೂಳೆಂದು ಅಟ್ಟ ಅಡಿಗೆಯನ್ನು ಹತ್ತುದಿನಗಳವರೆಗೂ ತಂದಿಡುತ್ತಿದ್ದರಂತೆ. ಈಗದು ಅಪರೂಪವಾಗಿದೆ. ಮೂರನೇದಿನ ಬಸರೀಮರದಕೆಳಗೆ ಮಣ್ಣನ್ನು ದಂಡಾಕಾರವಾಗಿ ತಿದ್ದಿ ಹುಗ್ಗಿ ಹಾಲು ತುಪ್ಪ ಎಳನೀರು ಬಾಳೇಹಣ್ಣುಗಳನ್ನು ಅದರಮೇಲೆ ಹಾಕಿ ಎಲ್ಲರೂ ಎಲಡಕೆ ಹಾಕಿಕೊಂಡು ಮನೆಗೆ ಬರುತ್ತಿದ್ದರು. ಸತ್ತದಿನ ದುಃಖದಲ್ಲಿ ಭಾಗಿಗಳಾಗಲು ಬಾರದಿದ್ದವರು ಸುತ್ತಮುತ್ತಲ ಹಳ್ಳಿಗಳಿಂದ ಮೂರನೇ ದಿನ ಹಾಲೂ ತುಪ್ಪ ಬಿಡುವ ಹೊತ್ತಿಗೆ ಎಷ್ಟುಕೆಲಸವಿದ್ದರೂ ಬಿಟ್ಟುಬರುತ್ತಿದ್ದರು. ಹೊಳೆಯಲ್ಲಿ ಬಿದ್ದು ಶಿಡಿಲುಬಡಿದು ಮರವು ಮೇಲುರುಳಿ ಪ್ಲೇಗೂ ಕಾಲರಾ ತಗಲಿ ಮೃತರಾದರೆ ಎಡಮೃತ್ಯು (ಅಪಮೃತ್ಯು) ವಿನಲ್ಲಿ ಹೋದನೆಂದು ಹತ್ತುದಿನದ ಮೇಲೆ ಕಡೆಗೆ ತಿಂಗಳ ಮೇಲೆ ಹಾಲು ತುಪ್ಪ ಬಿಡುತ್ತಿದ್ದರು. ಹನ್ನೊಂದನೇ ದಿನ ಹಾಲು ತುಪ್ಪ ಬಿಡುವದಿನ ಕ್ರಮದಂತೆ ಸತ್ತಕೂಳನ್ನು ಹಾಕಿ ಸೋಮೇಶ್ವರಸ್ವಾಮಿಯವರ ದೇವಸ್ಥಾನದ ಬಳಿಗೆ ಬಂದು ಉತ್ತರಾಧಿಕಾರಿಯು ಬಾಗಿಲಕಡೆಗೆ ಬೆನ್ನುಮಾಡಿ ಕೈಯಲ್ಲಿ ಬೆಣ್ಣೇ ಉಂಡೆಯನ್ನು ಹಿಡಿದು ಸೋಮೇಶ್ವರಸ್ವಾಮಿಯೆ ನನ್ನನ್ನು ಯಾರು ಕಲ್ಲಿನಿಂದ ಹೊಡೆಯುತ್ತಾರೊ ಅವರನ್ನು ಬೆಣ್ಣೆಯಿಂದ ಹೊಡೆಯುವೆನು ಸತ್ತವರಿಗಾಗಿ ಸ್ವರ್ಗದ ಬಾಗಿಲನ್ನು ತೆಗೆ ಎಂದು ಬಾಗಿಲಿಗೆ ಬೆಣ್ಣೆ ಉಂಡೆಯನ್ನು ಎಸೆಯುವನು (ಪೂಜಕರು ಇವತ್ತು ಸ್ವರ್ಗದ ಬಾಗಿಲು ತೆಗೆಸಲು ಬರುವರೆಂದು ಮೊದಲೇ ಹೋಗಿ ದೇವರಿಗೆ ದೀಪ ಹಚ್ಚಿ ಬಾಗಿಲು ಹಾಕಿಕೊಂಡು ಒಳಗಿರುತ್ತಿದ್ದರು) ಆ ಮೇಲೆ ಅಕ್ಕಿಸದ ಉಂಡೆಯನ್ನು ತೆಗೆದು

ಕೊಂಡು ಸ್ವಾಮಿಯೇ, ನನಗೆ ಕೆಟ್ಟದ್ದನ್ನು ಹಾರೈಸುವವರಿಗೆ ಮಂಗಳವನ್ನು ಕೋರುತ್ತೇನೆ. ಸತ್ತವರಿಗೆ ಸ್ವರ್ಗದ ಬಾಗಿಲುತೆಗೆ ಎಂದು ಹೇಳಿ ಅದನ್ನು ಎಸೆಯು ವನು. ತಿರುಗಿ ಒಂದು ಶೀಗೇಪುಡಿ ಉಂಡೆಯನ್ನು ತೆಗೆದುಕೊಂಡು ಸ್ವರ್ಗದ ದೊರೆಯೇ ಕಷ್ಟಪಡಿಸುವುದಕ್ಕಾಗಿ ನನ್ನಬಳಿಗೆ ಬರುವವರಿಗೆ ಹಿತವನ್ನು ಬಯಸಿ ಅವರನ್ನು ಎದುರುಗೊಳ್ಳುವೆನು. ಸತ್ತವರಿಗಾಗಿ ಸ್ವರ್ಗದ ಬಾಗಿಲನ್ನು ತೆಗೆ ಎಂದು ಬೇಡಿ, ಆ ಶೀಗೇಪುಡಿ ಉಂಡೆಯನ್ನೂ ಬಾಗಿಲಿಗೆ ಅಂಟಿಕೊಳ್ಳುವಂತೆ ಎಸೆದು ದೇವರ ಕಡೆಗೆ ಮುಖ ಮಾಡಿ ನಿಲ್ಲುವನು. ಅರ್ಚಕನು ತನಗೆ ಬರಬೇಕಾದ ಮಿರಾಸು ತೆಗೆದುಕೊಂಡು ಮಂಗಳಾರತಿ ಮಾಡಿ ಎಲ್ಲರನ್ನೂ ಸಮಾಧಾನ ಪಡಿಸಿ ಮನೆಗೆ ಕಳುಹಿಸುವನು. ತಿಥಿಯ ದಿನ ಮನೆಗೆಲ್ಲ ಸುಣ್ಣಬಣ್ಣ ಮಾಡಿ ತೋರಣ ದಿಂದ ಅಲಂಕರಿಸಿ ಶುದ್ಧಿ ಮಾಡುವರು. ಹಳೆ ಮುಸುರೆ ಮಡಕೆ ಕುಡಕೆಗಳನ್ನು ತಿಪ್ಪೆಗೆ ಬಿಸಾಡುವರು. ಮನೆಯೊಳಗೆ ಶುದ್ಧವಾದ ಒಂದು ಜಾಗದಲ್ಲಿ ಕಲಶವ ನ್ನಿಟ್ಟು ಅದಕ್ಕೆ ಮೃತಪಟ್ಟವನ ವಸ್ತ್ರಾಭರಣಗಳನ್ನು ತೊಡಿಸಿ ಅದರ ಮುಂದೆ ಎಡೆ ಇಕ್ಕುವರು. ದೀಪದ ಗೂಡಿಗೆ ಮನೆಯಲ್ಲಿರುವ ದೇವರ ಪಟಗಳಿಗೆ ಆಕಾಶ ದಲ್ಲಿರುವ ಸೂರ್ಯಭಗವಂತನಿಗೆ ಧೂಪವನ್ನು ಬೆಳಗಿದ ಮೇಲೆ ಆ ಎಡೆಯನ್ನು ದಾಸಪುರುಷರಿಗೆ ಹಂಚುತ್ತಿದ್ದರು. ಅವರು ಹೊಗಳಿದ ಮೇಲೆ ಅವರವರ ಎಡೆ ಯನ್ನು ತೆಗೆದುಕೊಳ್ಳುತ್ತಿದ್ದರು. ಅಷ್ಟುಹೊತ್ತಿಗೆ ನಂಟರಿಷ್ಟರೂ ಬಂದು ಅವರೂ ಮನೆಯವರೂ ಊಟ ಮಾಡಿ ಸತ್ತವರ ಗುಣಕಥನ ಮಾಡುತ್ತಿದ್ದರು. ಹನ್ನೆರಡನೇ ದಿನ ಪ್ರಾತಃಕಾಲ ಬಸರೀಮರದ ಬುಡದಲ್ಲಿ ಎಳನೀರು ಹೊಂಬಾಳೆ ಯನ್ನಿರಿಸಿ ದಾಸಯ್ಯನು ಗಟ್ಟಿಯಾಗಿ ಹೊಗಳಿ ಸತ್ತವರು ಸ್ವರ್ಗಕ್ಕೆ ಹೋದ ರೆಂದು ಹೇಳಿ ತನ್ನ ಊರಿಗೆ ಹೊರಟುಹೋಗುತ್ತಿದ್ದನು. ದಿಕ್ಕಿಲ್ಲದ ಹೆಣಗಳಿಗೆ ಗ್ರಾಮಸ್ಥರೇ ತಂದೆ ತಾಯಿಗಳೆಂದು ಬೇರೆ ಹೇಳಬೇಕಾಗಿಲ್ಲ. ಹನ್ನೊಂದನೇದಿನ ಅವರವರ ದಡೂತಿಯಿದ್ದಷ್ಟು ದಾನ ಧರ್ಮಗಳನ್ನು ಕೊಡುತ್ತಿದ್ದರು. ತೊನ್ನು ಹಿಡಿ ದವರ ಹೆಣವನ್ನು ಸುಟ್ಟುಬಿಡುತ್ತಿದ್ದರು. ಅಂತಹುದನ್ನು ಹೂತರೆ ಮಳೆ ಬರುವು ದಿಲ್ಲವೆಂದು ನಂಬಿದ್ದರು. ಸತ್ತವರ ಇಷ್ಟದಂತೆ ಅವರನ್ನು ತಮ್ಮ ಹೊಲ ಹುಲ್ಲು ಕೊಪ್ಪಲುಗಳಲ್ಲಿ ಸಮಾಧಿ ಮಾಡುವುದೂ ಉಂಟು. ತಿಥಿಯ ದಿನ ಉತ್ತರಾಧಿ ಕಾರಿಯು ತಲೆಯನ್ನೆಲ್ಲ ಬೋಳಿಸಿಕೊಳ್ಳುತ್ತಿದ್ದನು. ಅದೇ ಅವನ ಉತ್ತರಾಧಿ ಕಾರಿತ್ವದ ಹೆಗ್ಗುರುತು. ಏನಾದರೂ ಆಸ್ತಿಪಾಸ್ತಿಗಳ ಜಗಳ ಬಂದಾಗ ಅವನಿಗೆ ತಲೆ ಬೋಳಿಸಿಕೊಂಡಿರುವನು ನಾನಲ್ಲವೇನೊ? ಅನ್ನುವುದು ಕೇಳಿಬರುತ್ತಿತ್ತು.

# ಸಾಮಾನ್ಯ ವಿಷಯಗಳು

ಹೇಮಗಿರಿಬೆಟ್ಟದ ಸಮೀಪದಲ್ಲೇ ಹೇಮಾವತಿಯು ಸ್ವಭಾವವಾಗಿ ಪಶ್ಚಿಮವಾಹಿನಿಯಾಗಿರುವುದು. ಬಹಳಕಾಲಕ್ಕೆ ಹಿಂದೆ ಭೃಗುಮಹರ್ಷಿಗಳು ಇಲ್ಲಿ ತಪಸ್ಸು ಮಾಡಿ ಸ್ವಾಮಿಯನ್ನು ಪ್ರತ್ಯಕ್ಷ ಮಾಡಿಕೊಂಡರು. ಅವರು ತಪಸ್ಸು ಮಾಡುತ್ತಾ ಕುಳಿತುಕೊಳ್ಳುತ್ತಿದ್ದ ಕಲ್ಲಿಗೆ ಗಾಯತ್ರೀಶಿಲೆ ಎಂದು ಹೆಸರು ಬಂದಿದೆ. ಬೆಟ್ಟದಮೇಲೆ ಒಂದು ಸಾಮಾನ್ಯವಾದ ಗುಹೆಯಿದೆ. ಇದಕ್ಕೆ ಭೃಗುಕ್ಷೇತ್ರವೆಂದು ಹೆಸರು. ಬೆಟ್ಟದಮೇಲೆ ನಿಂತು ನೋಡಿದರೆ ಪ್ರಕೃತಿಸೌಂದರ್ಯದ ಸವಿಯನ್ನು ಎಷ್ಟುಬೇಕಾದರೂ ಸವಿಯಬಹುದು. ಒಂದು ಸಲ ಮೈಸೂರು ದಿವಾನರು ಬಂದು ಇಲ್ಲಿಯ ಸೊಬಗನ್ನು ನೋಡಿ "ನಾವೇನಾದರೂ ಇಲ್ಲಿ ಕಟ್ಟಡ ಮುಂತಾದ ಕೆಲಸಗಳಿಗೆ ಕೈಹಾಕಿದರೆ ಪ್ರಕೃತಿಸೌಂದರ್ಯದ ಕೊಲೆಮಾಡಿದಂತೆಯೇ ಸರಿ" ಎಂದರು. ದೂರದಿಂದ ನೋಡಿದರೆ ಬೆಟ್ಟದ ಮೇಲಿರುವ ದೇವಸ್ಥಾನವು ಸ್ವರ್ಗಮಾರ್ಗದ ಕೈಮರದಂತೆ ಕಾಣುವುದು. ಇಲ್ಲಿ ರಥವು ಬೆಟ್ಟದ ಸುತ್ತಲೂ ಹರಿಯುವುದು. ಬೇವಿನಮರದ ಗುಂಪೇ ಎಲ್ಲೆಲ್ಲೂ ಇರುವುದರಿಂದ ವಾಯುಗುಣವು ಬಹಳ ಆರೋಗ್ಯಕರವಾಗಿದೆ. ಇಲ್ಲಿ ಚಿನ್ನ ಸಿಕ್ಕುವುದೆಂದು ಯಾರೋ ಕೆಂಪು ಜನರು ಬಂದು ಅಲ್ಲಲ್ಲೇ ಅಗೆದು ಏಕೋ ಹಾಗೆಯೇಬಿಟ್ಟುಹೋಗಿರುವರು.

ನಮ್ಮೂರಿನ ದಕ್ಷಿಣದಿಕ್ಕಿನಲ್ಲಿ ಹೊಸಪಟ್ಟಣವೆಂಬ ಕೋಟೆಯಿದೆಯಷ್ಟೆ. ಪುರಾತನಕಾಲದಲ್ಲಿ ಅಲ್ಲಿ ಎರಡು ಕೊಳಗಳಿದ್ದು ಅವುಗಳ ಸಮೀಪದಲ್ಲಿ ಋಷಿಯೊಬ್ಬನು ತಪಸ್ಸು ಮಾಡುತ್ತಿದ್ದನಂತೆ. ಈಗ ಒಂದು ಕೊಳ ಹೂತುಹೋಗಿದೆ. ಇನ್ನೊಂದು ಸುಮಾರಾಗಿ ಕಾಣುವುದು. ಇವುಗಳ ಹತ್ತಿರ ದೊಡ್ಡ ನವಾಬರು (ಹೈದರಾಲಿಯವರು) ಅರಮನೇ ಕಟ್ಟಲು ಪಾಯ ಮೆಟ್ಟಿ ನೆಲಕ್ಕೆಲ್ಲಾ ಗಾರೇಗಚ್ಚು ಹಾಕಿಸಿರುವರು. ಶ್ರೀರಂಗಪಟ್ಟಣದಂತೆ ಒಂದು ಕೋಟೆ ಕಟ್ಟಿಸಿರುವರು. ಒಟ್ಟು ಜಮೀನಿನ ಆಕಾರ ನೂರೈವತ್ತು ಎಕರೆ. ಸುತ್ತಲೂ ಹೇಮಾವತಿಯು ಹರಿಯುವುದು. ಕೋಟೆ ಕೆಲಸವು ಅರ್ಧವಾಗಿರುವಾಗ ದೊಡ್ಡ ನವಾಬರು ಸತ್ತರು ಚಿಕ್ಕ ನವಾಬರು (ಟಿಪ್ಪೂಸುಲ್ತಾನರು) ಕೋಟೆ ತೆನೆ ವಿನಾ ಬಾಕಿ ಕೆಲಸವನ್ನೆಲ್ಲಾ ಪೂರೈಸಿರುವರು. ಆಗ ನಮ್ಮೂರವರೂ ಹೋಗಿ ಕೂಲಿ

ಮಾಡುತ್ತಿದ್ದರಂತೆ. ಐದು ತಿಂಗಳಿಗೆ ಒಳಪಟ್ಟ ಗರ್ಭಿಣಿಯರು ಕೂಲಿಗೆ ಒಂದರೆ ಹೊಟ್ಟೆಯೊಳಗಿರುವ ಮಗುವಿಗೆ ಅರ್ಧಕೂಲಿ ಕೊಡುತ್ತಿದ್ದರಂತೆ ಒಂದು ದಿನ ಚಿಕ್ಕ ನವಾಬರು ತಾವೇ ಸ್ವತಃ ಕೂಲಿಯವರಿಗೆ ದುಡ್ಡು ಬಟವಾಡೇ ಮಾಡಿ ಕೋಟೆಯಮೇಲೆ ಸುತ್ತಿಕೊಂಡು ಬರುವಾಗ ದೂರದಲ್ಲಿ ಪೂರ್ವದ ಕೋಟೇ ಬಾಗಿಲಿಗೆ ಎದುರಾಗಿರುವ ಬೆಳ್ಳಿಬೆಟ್ಟವನ್ನು ನೋಡಿದರು. ಅವರ ಮನಸ್ಸಿಗೆ ಏನು ತೋರಿತೋ ಏನೋ. ಎರಡು ಜವಣೆಯನ್ನು ತರಿಸಿ ಎರಡರ ತುದಿಗೂ ಹುಂಜಗಳನ್ನು ಕಟ್ಟಿ ಕೋಟೆ ಬಾಗಿಲಮೇಲೊಂದನ್ನು ನೆಡಿಸಿದರು. ಇನ್ನೊಂದನ್ನು ಬೆಳ್ಳಿಯ ಬೆಟ್ಟದ ಮೇಲೆ ನೆಡಿಸಿ ಕೋಟೆಯಮೇಲಿಂದ ಗುರಿ ಕಟ್ಟಿ ಗುಂಡು ಹೊಡೆಯಲು ಜವಣೆಯು ಹಾರಿಹೋಯಿತು. ಬೆಳ್ಳಿಯ ಬೆಟ್ಟದ ಮೇಲಿಂದ ಗುಂಡು ಹೊಡೆಯಲು ಕೋಟೆಯ ಮೇಲಿದ್ದ ಜವಣೆಯು ಹುಂಜನ ಸಹಿತ ಹಾರಿ ಹೋಯಿತು. ಆಗವರ ಬಾಯಿಂದ ಸದ್ಯಕ್ಕೆ ಕೋಟೆ ಕೆಲಸ ನಿಲ್ಲಿಸಿಬಿಡಿ ದೇವರ ಕೃಪೆಯಿಂದ ಫರಂಗಿಯವರ ಕಾಟ ತಪ್ಪಿದರೆ ಈ ಊರನ್ನು ಅಭಿವೃದ್ಧಿಪಡಿಸೋಣ ಎಂಬ ಮಾತು ಹೊರಟಿತು. ಅಲ್ಲಿಂದ ಶ್ರೀರಂಗಪಟ್ಟಣಕ್ಕೆ ಹೋದವರು ಇನ್ನೂ ಬರುತ್ತಿದ್ದಾರೆ ಎಂದು ಈ ಊರಿನ ಮುದಕರು ಹೇಳಿದರು. ಕೋಟೆಯು ಬಲು ಚೆನ್ನಾಗಿತ್ತು. ಕ್ರಿಸ್ತಶಕ ಸಾವಿರದ ಒಂಭೈನೂರ ಮೂವತ್ತೊಂದನೆ ಇಸವಿಯಲ್ಲಿ ಈ ಕೋಟೆಗೆ ಹತ್ತಿರವಾಗಿ ಮೂಡಕೆಡು ಎಂಬ ಜಾಗದಲ್ಲಿ ಒಂದು ಸೇತುವೆಯನ್ನು ಕಟ್ಟಿದರು. ಅದಕ್ಕೆ ಕೋಟೆಯ ಕಲ್ಲೆಲ್ಲವನ್ನೂ ಸಾಗಿಸಿಬಿಟ್ಟರು. ಈಗ ಬರೀ ಮಣ್ಣಿನ ಗೋಡೆ ನಿಂತಿದೆ. ಇದು ಪಾಂಡವರ ಕಾಲದ ಕೋಟೆಯನ್ನುತ್ತಿದ್ದರು.

ನಮ್ಮ ಹೊಲಕ್ಕೆ ಸಮೀಪವಾದ ಒಂದು ಹೊಲವನ್ನು ಪಾಂಡವರ ಹೊಲ, ಪಾಂಡವರ ಹೊಲ ಎಂದು ಕರೆಯುತ್ತಿದ್ದರು. ಅಲ್ಲಿ ಒಂದು ದೊಡ್ಡಬಂಡೆ ವಿನಾ ಇನ್ನೇನೂ ಇರಲಿಲ್ಲ. ನಾವು ಊರಿಗೆ ಹೋಗುವುದಕ್ಕೆ ಕೆಲವು ವರ್ಷಗಳ ಹಿಂದೆ ಅಲ್ಲಿ ಒಂದು ವಿಚಿತ್ರಸಂಗತಿಯು ಈ ರೀತಿ ನಡೆಯಿತು. ಒಂದು ದಿನ ಮಂತ್ರವಾದಿಯೊಬ್ಬನು ಒರೆದು ಕೈಗೆ ಅಂಜನ ಹಾಕಿಕೊಂಡು ಪಾಂಡವರ ಹೊಲದಲ್ಲಿರುವ ಬಂಡೆಯ ಹತ್ತಿರ ಹಣವಿದೆ ಎಂದು ಹೇಳಿ ಹೊರಟುಹೋದನು. ಶ್ಯಾನುಭೋಗರಿಗೂ ಬೇಚರಾಕುಗ್ರಾಮದ ಪಟೇಲನಿಗೂ ಅದನ್ನು ಪಡೆಯಬೇಕೆಂಬ ಚಪಲವುಂಟಾಯಿತು, ಸರಿ. ಆಳುಗಳನ್ನು ಕರೆದುಕೊಂಡು ಹೋಗಿ ಈ ಹೊಲ

ದಲ್ಲಿ ಕಸ್ತೀಮಾವಿನ ಗಿಡ ಹಾಕಬೇಕು, ಈ ಬಂಡೆಯ ಹತ್ತಿರ ಆಳವಾಗಿ ಅಗೆಯಿರಿ ಎಂದರು. ನಾಲ್ಕೈದು ದಿನ ತಡೆಬಡೆಯಿಲ್ಲದೆ ಅಗೆದರು. ಅಡಿಯಲ್ಲಿ ಒಂದು ಚಪ್ಪಡಿ ಕಲ್ಲು ಸಿಕ್ಕಿತು. ಅದನ್ನು ಕಷ್ಟಪಟ್ಟು ಮೇಲಕ್ಕೆ ಮೀಟಿದರು, ಕೆಳಗೆ ಮೆಟ್ಟಲು ಕಾಣಿಸಿತು. ಪಂಜು ಹತ್ತಿಸಿಕೊಂಡು ಒಳಗಿಳಿದು ಹೋದರು. ಒಂದೇ ಮೊಳ ಅಗಲಕ್ಕೆ ಗಾರೆ ಹಾಕಿದ ದಾರಿಯು ಹತ್ತುಮಾರು ಉದ್ದಕ್ಕೆ ಆಗ್ನೇಯ ದಿಕ್ಕಿಗೆ ಕರಕೊಂಡು ಹೋಯಿತು. ಅಲ್ಲಿ ಒಂದಾಳು ನುಸಿಯುವ ಬಾಗಲಿತ್ತು. ಅದಕ್ಕೆ ಚಪ್ಪಡಿ ಕಲ್ಲನ್ನು ಮರೆ ಮಾಡಿತ್ತು. ಅದನ್ನೂ ಹಾರೆಯಿಂದ ಮೀಟಿ ಒಳಗೆ ಹೋಗಿ ನೋಡಲು ಒಂದು ಅಂಕಣದ ಚಿಕ್ಕಮನೆಯಾಗಿತ್ತು. ಅದರಲ್ಲಿ ಒಂದು ಒಲೆಯೂ ಅದರ ಎದುರಿಗೆ ಏಳು ಮಡಕೆಗಳೂ ಇದ್ದುವು. ಮಡಕೆಗಳ ಮೇಲೆ ಏಳು ತಣಿಗೆಗಳು ಮುಚ್ಚಲ್ಪಟ್ಟಿದ್ದವು. ಒಲೆಯಲ್ಲಿ ಸ್ವಲ್ಪ ಬೂದಿಯಿತ್ತು. ಬಾಗಲಿಗೂ ಮೇಲುಚಾವಣಿಗೂ ಕಬ್ಬಿಣದ ಪಟ್ಟಿಗಳು ಬಡಿಯಲ್ಪಟ್ಟಿದ್ದವು. ತಣಿಗೆಯನ್ನು ತೆಗೆದು ನೋಡಲು ಗಡಿಗೆಗಳೊಳಗೆ ಬೂದಿ ಇದ್ದಲು ಹೊಟ್ಟುಗಳಿದ್ದವು. ಅವನ್ನು ತಂದು ಈಚೆಗೆ ಸುರದದ್ದಾಯಿತು, ಅಷ್ಟು ಹೊತ್ತಿಗೆ ಸರ್ಕಾರದವರು ಬಂದರು. ಹಣ ಕೀಳುವರೆಂಬ ಸುದ್ದಿ ಅವರಿಗೆ ಯಾರಿಂದಲೋ ಮುಟ್ಟಿದೆ, ಊರೆಂದರೆ ಹೊಲಗೇರಿ ಇದ್ದೇ ಇರುತ್ತದೆ ಎನ್ನುವ ಸಮಾಚಾರ ಬಂತು. ಒಂದು ತಣಿಗೆಯನ್ನು ಗಡಿಬಿಡಿಯಿಂದ ಬಂಡೆಯ ಮೇಲೆ ಉಜ್ಜಿದರು, ಅದು ಫಳಾರ್ ಎಂದು ಮಿಂಚಿತು, ಅದನ್ನು ಚಿಕ್ಕ ಶ್ಯಾನುಭೋಗರು ಮುಚ್ಚಿಕೊಂಡು ಮನೆಗೆ ತಂದರು. ಉಳಿದ ಗಡಿಗೆ, ಕಬ್ಬಿಣದ ತಣಿಗೆ, ಮರದ ಸಾಮಾನು ಎಲ್ಲವನ್ನೂ ಬೆಳಗಾಗುವುದರೊಳಗೆ ಹೊಳೆಗೆ ಹಾಕಿದರು. ಸರ್ಕಾರದವರು ಬಂದು ನೋಡುವ ಹೊತ್ತಿಗೆ ಹೊಲವನ್ನೆಲ್ಲಾ ಒಂದೇ ಸಮನಾಗಿ ಉತ್ತು ಕಾಳು ಚೆಲ್ಲಿದ್ದರು. ಆ ಗಡಿಗೆಗಳು ಕಪ್ಪಗೆ ಮದ್ಯವಿಳಿಸುವ ಗಡಿಗೆಗಳಂತೆ ಒಂದಾಳೆತ್ತರವಾಗಿದ್ದವು, ನೆಲಕ್ಕೆಲ್ಲಾ ವಜ್ರಗಾರೆಯು ಹಾಕಿತ್ತು, ಅಡಿಗೆ ಮನೆಯಲ್ಲಿ ಒಂದು ದೀಪದ ಗೂಡಿತ್ತು, ಚಿಕ್ಕ ಶ್ಯಾನುಭೋಗರು ತಣಿಗೆಯನ್ನು ಹೊಳೆ ಆಚೆ ಊರಲ್ಲಿರುವ ಅಕ್ಕಸಾಲೆಗೆ ಕೊಟ್ಟು ಇದು ಯಾತರದು ಎಂದು ಕೇಳಿದರು. ಅಯ್ಯೋ ಮಡೀಕಂಚಿನ ತಣಿಗೆ ಎಂದು ಉತ್ತರ ಬಂತು. ಶ್ಯಾನುಭೋಗರು ರಾತ್ರಿಯೇ ಮನೆಗೆ ಬಂದರು. ಆ ಅಕ್ಕಸಾಲೆಯು ಒಂದು ತಿಂಗಳ ಮೇಲೆ ನಾಲ್ಕೈದು ಸಾವಿರ ರೂಪಾಯಿನ ಕುಳವಾದನು. ಅದನ್ನು ಕೇಳಿ

ಊರವರು ಆ ಗಡಿಗೆ ತಣಿಗೆಗಳನ್ನು ಬಿಸಾಡಿದ ಜಾಗದಲ್ಲಿ ಹೊಳೆಯೊಳಗೆಲ್ಲಾ ಹುಡುಕಿದರು. ಆದರದು ಸಿಗಲಿಲ್ಲ ಎಂದು ಒಬ್ಬ ವೃದ್ಧನು ಐತಿಹ್ಯವನ್ನು ಹೇಳಿದನು. ಪಾಂಡವರ ಹೊಲದ ಹತ್ತಿರವೇ (ಕುರೋದ್ಹೊಲ ಎಂಬ ಹೊಲವಿದೆ, ಪ್ರಾಯಶಃ ಇದಕ್ಕೆ ಕೌರವರ ಹೊಲ ಎಂದು ಹೆಸರು ಇದ್ದಿರಬಹುದು. ನಮ್ಮೂರ ಹತ್ತಿರವಿರುವ ಅನೇಕ ಹಳ್ಳಿಗಳಲ್ಲಿ ಪಾಂಡವರ ಹೊಲ, ಪಾಂಡವರ ಗುಹೆ, ಪಾಂಡವರ ಬಂಡೆ ಎಂಬ ಅನೇಕ ಜಾಗಗಳನ್ನು ಹಳ್ಳಿಗರು ತೋರಿಸುತ್ತಿದ್ದರು.) ಇಂತಹ ದಂತಕಥೆಗಳು ಕಂತೆ ಕಂತೆಯಾಗಿದ್ದುವು.

ನಮ್ಮೂರಲ್ಲಿ ಹಿರಿಯರಾದ ಗೌಡಗಳು ತಮಾಷೆಯಾಗಿ ಮಾತಾಡುವಾಗ ಸ್ವಾಮಿ, ನಮ್ಮ ಜನಗಳೇ ಮೋಡಜನಗಳು. ಅದಕ್ಕೊಂದು ತಾರಕಣೆ ಕೊಡ್ತೀಏ ಕೇಳಿ. ನಮ್ಮವನೊಬ್ಬ ಒಬ್ಬದೊಡ್ಡಮನುಷ್ಯರ ಬಳಿಗೆ ಹೋದ, ಅವರು ಮಾತು ಮಾತಿನ ಮೇಲೆ ಏನಯ್ಯಾ ಗೌಡ ? ತಾಳೀಕಟ್ಟಿಕೊಳ್ಳುತ್ತಾರಂತಲ್ಲ ಅದ್ಹ್ಯಾಗೆ! ಅಂದರು. ಅದಕ್ಕವನು ಅಯ್ಯೋ ಅದೇನು ಗೊತ್ತಿಲ್ವಾ, ಈಗ ನೀವು ಸತ್ಹೋದ್ರಿ ಅಂತ ತಿಳ್ಕೊಳ್ಳಿ, ಆ ಮ್ಯಾಲೆ ಇಗೋ ನಾಸಿವ್ನಿ, ನಿಮ್ಮ ಹೆಂಡ್ರ್ಯೇರು ತಮ್ಮ ತಾಳೀ ತೆಗೆದು ನನ್ನಕೈಗೆ ಕೊಡ್ತಾರೆ ಅಂತ ತಿಳ್ಕೊಳ್ಳಿ, ನಾನು ಆ ತಾಳೀನ ನಿಮ್ಹೆಂಡ್ರ ಕತ್ತಿಕ್ಕಟ್ಟಿದ್ರೆ ಅದೇ ತಾಳೀ ಕಟ್ಕೋಳೋದು ಎಂದನಂತೆ, ಈರೀತಿ ನಮ್ಮ ಜನಗಳು ಮೋಡರು ಎನ್ನುತ್ತಿದ್ದರು, ಇದೇನೋ ನಿಜ. ಇದಕ್ಕೆಲ್ಲ ಅವಿದ್ಯೆಯೇ ಮೂಲಕಾರಣ. ವಸ್ತುತಃ ಹಾಗೆ ಸಾಮ್ಯವನ್ನು ಕೊಟ್ಟ ಗೌಡನ ಮನಸ್ಸಿನಲ್ಲಿ ಎಳ್ಳಷ್ಟೂ ದುರ್ಭಾವನೆಯಿಲ್ಲ, ಆದರೆ ಕೇಳಿದ ದೊಡ್ಡಮನುಷ್ಯರಿಗೆ ಹೀಗಂದನಲ್ಲ ಎಂದು ವ್ಯಥೆಯಾಗುತ್ತದೆ. ಗೌಡಪ್ರಜೆಗಳನ್ನು ಸಭ್ಯಪ್ರಜೆಗಳನ್ನಾಗಿ ಮಾಡಲು ಅವರ ಜನದ ವಿದ್ವಾಂಸರು ಸಮಸ್ತ ಭೋಗಗಳನ್ನು ತೊರೆದು ಹಳ್ಳಿಯ ಸೇವೆಯನ್ನು ತ್ರಿಕರಣ ಶುದ್ಧವಾಗಿ ಸ್ವೀಕರಿಸಬೇಕು. ಒಳ್ಳೆ ವಿದ್ಯೆಯು ಹೆಚ್ಚಿದಂತೆ ಗುಣವೂ ಹೆಚ್ಚುವುದು. ಗುಣಕ್ಕೆ ಗೌರವ ಕೊಡದ ದೇಶವು ದೇಶವೆ ? ಅಂಥಾ ಜನವು ಜನವೆ ?

ಪ್ಲೇಗು ಕಾಲದ ಊರುಗಳಿಂದ ಬಂದುಬಿಟ್ಟರೆ ಅಂತವರು ಊರಹೊರಗೆ ಮೂರು ದಿನಗಳಿದ್ದು ಆ ಮೇಲೆ ಹೊಳೆಯಲ್ಲಿ ಸ್ನಾನಮಾಡಿ ಊರೊಳಗೆ ಬರಬೇಕಾಗಿತ್ತು. ಮೇಲಿನ ಕಾಯಿಲೆಗಳನ್ನು ದೇವತಾಮೂಲಕವಾಗಿ ಬಂದ ಕೋಪಗಳೆನ್ನುತ್ತಿದ್ದರು. ಕಾಲರಾ ಬಂದರೆ ಕಟ್ಟೆ ಕನ್ನಂಬಾಡಮ್ಮನನ್ನು ತಂದು ಪೂಜಿ

ಸುತ್ತಿದ್ದರು. ಅಲ್ಲದೆ ಹೇಮಗಿರಿ ಬೆಟ್ಟಕ್ಕೆ ಹೋಗಿ ದೇವರನ್ನು ಮರೆಹೊಕ್ಕು ಹೂವನ್ನು ಕೇಳುತ್ತಿದ್ದರು (ದೇವರಿಗೆ ಧರಿಸಿದ ಹೂವಿನಲ್ಲಿ ಬಲಗಡೆ ಬಿದ್ದರೆ ಒಳ್ಳೆಯದು, ಎಡಗಡೆ ಬಿದ್ದರೆ ಕೆಟ್ಟದ್ದೆಂದು ನಂಬಿದ್ದರು) ಗ್ರಾಮದೇವತೆಯಾದ ದೊಡ್ಡಮ್ಮನಿಗೆ ಹರಕೆಹೂಡು ಒಪ್ಪಿಸುತ್ತಿದ್ದರು. ಪತ್ರಿಕೆಗಳಲ್ಲಿ "ಹಳ್ಳಿಯ ಜನರು ಬುದ್ಧಿಮಂಕರು, ಅನೇಕ ರೋಗಗಳನ್ನು ದೇವರ ಮೂಲಕ ಅಥವಾ ದೇವರೇ ಆ ರೀತಿಯಾಗಿ ಬಂದು ಜನಗಳನ್ನು ಹಿಂಸಿಸುತ್ತಾನೆಂದು ತಿಳಿಯುತ್ತಾರೆ. ದೊಡ್ಡದೊಡ್ಡ ಡಾಕ್ಟರು ಅದರ ಮೂಲಕಾರಣ ಕಂಡು ಹಿಡಿದಿರುವರು. ಇನಾಕ್ಯುಲೇಷನ್ (ಸೂಜಿಯ ಚುಚ್ಚುವಿಕೆಯಿಂದ ಔಷಧಿಯನ್ನು ದೇಹದೊಳಗೆ ವ್ಯಾಪಿಸುವುದು) ಮಾಡಿಸಿಕೊಂಡರೆ ಬದುಕುತ್ತಾರೆ ಸಾಯುವುದಿಲ್ಲ" ಎಂದು ಬರೆದಿರುವುದನ್ನು ಹೇಳಿದರೆ ಅಯ್ಯೋ ಬಿಡಿ ಸ್ವಾಮಿ, ಮೈಸೂರಲ್ಲಿ ಇನಾಕ್ಯುಲೇಷನ್ ಮಾಡಿಸಿಕೊಂಡು ಮನ್ಗೆಹೋಗಿ ಎಷ್ಟೋ ಜನ ಕಂತೆ ಬಿಸಾಕಿರುವರು. ಮುಖ್ಯ ನೋಡಿ ನಮ್ಮ ಮಹಾರಾಜರವರೂ ಊರಲ್ಲಿಲ್ಲ, ಅವ್ರು ಕೈಲಾಸ ಪರ್ವತದ ಯಾತ್ರೇಗ್ಹೋಗವ್ರೆ, ಆ ನಮ್ಮಪ್ಪ ಬಂದ್ಬಿಟ್ರೆ ಈ ಕಲ್ಪುಸ್ಪರ್ಶ ಆಟ್ಹೋಳಾದ ಈ ಕಾಲ್ರಾ, ಈ ಪ್ಲೇಗೂ ಒಂದೂ ಇರಾಕಿಲ್ಲ, ಅದಿರ್ಲಿ ಬುದ್ಧೀ. ಬುದ್ಧೀ! ನಮ್ಮ ಮಹಾರಾಜ್ರು ಅದೇನ್ಹಂಗೆ ನಮ್ಮೆಲ್ಲಾರ್ನೂ ಬಿಟ್ಟು ಕೈಲಾಸಪರ್ವತದ ಯಾತ್ರೇಗ್ಹೋಗವ್ರೆ ನೀವು ಅಕ್ಷರಾಕಂಡಿದ್ದೀರಲ್ಲ ನಮ್ಗೆ ಸರ್ಯಾದ ಸಮಾಚಾರ ಹೇಳ್ಬಿಡಿ ಎಂದು ಅಂಗಲಾಚಿ ಬೇಡುತ್ತಿದ್ದರು. (೧೯೩೧ ನೆ ಇಸವಿ ಜುಲೈನಲ್ಲಿ ಮಹಾರಾಜರು ಕೈಲಾಸಪರ್ವತದ ಯಾತ್ರೆಗೆ ಹೋಗಿದ್ದರು) ನಮ್ಮ ಹಳ್ಳಿಯವರ ನಂಬಿಕೆಯಂತೆ ಅವರು ಬಂದ ಮೇಲೆ ಬಲು ಹಸನಾದ ಮಳೆಯಾಯ್ತು. ಭುವಿಯೆಲ್ಲ ಹುಲುಸಾಯ್ತು, ಜನಕೆಲ್ಲ ಅತಿಯಾದ ಸಂತಸದ ನಡೆಯಾಯ್ತು, ಹಳ್ಳಿಗರಲ್ಲಿ ಕಲಿತುಕೊಳ್ಳುವ ವಿಚಾರವೇನೆಂದರೆ—ಒಬ್ಬರಿಗೊಬ್ಬರು ಹೊಡದಾಡಿದರೂ ಮಾರನೇ ದಿನ ಮಾವ ಉಣ್ಣಾಕ್ಬರೋಕಿಲ್ವಾ, ಏನೋ ರಾಹುಕಾಲ, ಹೊಡೆದಾಡಿದ್ರೊ, ಕೈಗೆ ನೀರಿಸಿಕೋ ಎಂದು ಮಾತಾಡಿಸಿ ಆಗಲೇ ಊಟಕ್ಕೆ ಏಳುತ್ತಿದ್ದರು. ಎಷ್ಟೇ ದ್ವೇಷವಿದ್ದರೂ ಊಟದ ಮಧ್ಯದಲ್ಲಿ ಕೈಸೀಡಿಸಿ ಹಾಲು ಹುಯ್ದು ಬೆಲ್ಲ ಹಾಕಿದರೆ ಅಲ್ಲಿಗೆ ಎಲ್ಲವೂ ಮರೆತುಹೋದಂತೆ ಸರಿ; ಆ ಮೇಲೂ ದ್ವೇಷ ಮಾಡಿದರೆ ಕಡೆಗೆ ಸಮಾಜದವರು ಅವನಿಗೆ ಪಾಪಿಷ್ಟನೆಂದು ಹೆಸರಿಟ್ಟು ಕಡೆಗಣ್ಣಿನಿಂದ ನೋಡುತ್ತಿದ್ದರು. ದೀರ್ಘದ್ವೇಷವು ನಮ್ಮ ಹಳ್ಳಿಯವರಿಗೆ ಸ್ವಲ್ಪವೂ ಬೇಕಾಗಿ

ರಲಿಲ್ಲ. ಹಬ್ಬ ಹುಣ್ಣಿಮೆಗಳಲ್ಲಿ ಅಗಸನು ಶುದ್ಧವಾದ ಮಡಿಬಟ್ಟೆಯನ್ನು ತಂದು ಕೊಡುತ್ತಿದ್ದನು. ಒಕ್ಕಲಮಕ್ಕಳು ಹೊಳೆಯಲ್ಲಿ ಮಿಂದು ಪುರಸನ ಕೈಯಿಂದ ವಿಭೂತಿ ಹಚ್ಚಿಸಿಕೊಂಡು ಮಡಿವಸ್ತ್ರವನ್ನು ಧರಿಸಿ ದೇವರ ದರ್ಶನಮಾಡಿ, ಊಟ ಉಪಚಾರ ಮಾಡುತ್ತಿದ್ದರು. ರಾತ್ರಿ ಯಾವುದಾದರೂ ದೇವರವಿಷಯವಾದ ಯಕ್ಷಗಾನದ ಆಟ, ಪುರಾಣ, ಹರಿಕಥೆ ಇವುಗಳ ಮೂಲಕ ಕಾಲ ಕಳೆಯುತ್ತಿದ್ದರು. ನಂಟರಿಷ್ಟರಿಗೆ ಉಪಚಾರ ಮಾಡುತ್ತ ಸರಳಜೀವಿಗಳಾಗಿದ್ದರು. ದೊಡ್ಡವರ ಅಥವಾ ಇನ್ಯಾರಾದರೂ ಸರಿ, ಅವರ ದೋಷಗಳನ್ನು ಟೀಕಿಸಬೇಕಾದರೆ ರಂಗಕುಣಿಯುವಾಗ ಮಧ್ಯದಲ್ಲಿ ನಕಲೀವೇಷ ಹಾಕಿಕೊಂಡು ಬಂದು ಆ ವಿಷಯವನ್ನು ಎಲ್ಲಾ ಜನರೆದುರಿಗೆ ಟೀಕಿಸಿ ಬುದ್ಧಿ ಕಲಿಸುತ್ತಿದ್ದರು. ಹಳ್ಳಿಗಳಲ್ಲಿ ಕಕ್ಷಿಗಳು (ಪಾರ್ಟಿ) ಇಲ್ಲದೇ ಇರುವುದೇ ಅಪರೂಪ, ಆದರೆ ನಮ್ಮ ಹಳ್ಳಿಯಲ್ಲಿ ಹಿಂದೆ ಪಾರ್ಟಿಯಾಗಿ ಅದರ ಕಷ್ಟನಿಷ್ಠೂರಗಳನ್ನು ಅನುಭವಿಸಿ ಇತ್ತೀಚೆಗೆ ಒಂದೇ ಗುಂಪಾಗಿದ್ದರು.

## ಯಕ್ಷಗಾನದ ಆಟ

ನಮ್ಮೂರಿಗೆ ಹೆಣ್ಣುವೇಷದವರು (ದೊಂಬೀದಾಸರು) ಪುತ್ಥಲೀಗೊಂಬೆ ಆಟದವರು ಚಕ್ಕಳಗೊಂಬೇ ಆಟದವರು ಮುಂತಾದವರು ಬರುತ್ತಿದ್ದರು. ಇವರೆಲ್ಲಾ ವ್ಯವಸಾಯಗಾರರಾಗಿದ್ದು ವರ್ಷಕ್ಕೆ ಮೂರು ನಾಲ್ಕು ತಿಂಗಳು ಊರುಗಳ ಮೇಲೆ ಹೋಗಿ ಆಟವಾಡಿ ದುಡ್ಡು ಸಂಪಾದಿಸುತ್ತಿದ್ದರು. ಹೆಣ್ಣುವೇಷದವರ ಕಂಠಸ್ವರವು ಕೋಗಿಲೆಯ ಕಂಠದಂತೆ ಬಲು ಇಂಪು, ಇವರು ನಮ್ಮೂರಿಗೆ ಬಂದು ಆಟವಾಡಿದ ಮೇಲೆ ಇಲ್ಲಿಯ ಆಟದ ಹುಡುಗರು ಅವರಂತೆ ತಾವೂ ರಾಗ ವೇಷಗಳನ್ನು ಬದಲಾಯಿಸಿಕೊಂಡು ಆಡುತ್ತಿದ್ದರು. ಹಳೇ ಕಾಲದಿಂದ ಹಳ್ಳಿಗಳಲ್ಲಿ ಆಟ ಕಲಿಸುವ ಯಜಮಾನನಿಗೆ ಭಾಗವತನೆಂದು ಹೆಸರು. ಹಾಡುಗಾರಿಕೆಗೆ ಯಕ್ಷಗಾನವೆಂದು ಹೆಸರು. ಹಳ್ಳಿಯ ಹುಡುಗರು ಆಟವನ್ನು ಕಲಿಸಿದ ಭಾಗವತನಿಗೆ ಭತ್ತ ರಾಗಿ ಮುಂತಾದ ದಿನಸಿಗಳನ್ನು ಗುರುದಕ್ಷಿಣೆಗಾಗಿ ಕೊಡುತ್ತಿದ್ದರು. ಬರುತ್ತ ಬರುತ್ತ ಯಕ್ಷಗಾನದ ಆಟವೂ ಅಲ್ಲ, ಮೈಸೂರಲ್ಲಿ ಆಡುವ ನಾಟಕವೂ ಅಲ್ಲ, ಹೀಗಾಗಿ ಪಂಚೆ ಉಟ್ಟುಕೊಂಡು ಇಂಗ್ಲೀಷ್ ಟೋಪಿ ಹಾಕಿ

ಕೊಂಡ ಮನುಷ್ಯನಂತಹ ಆಟಗಳಿಗೆ ಆರಂಭವಾಗಿತ್ತು. ಭಾಗವತರ ಆಟದಲ್ಲಿ ಹಿಮ್ಮೇಳದ ಪದ್ಧತಿಯಿತ್ತು. ಅದು ಬಹುದೂರದಲ್ಲಿರುವ ಸಭಿಕರ ಕಿವಿಗೂ ಪದ್ಯಗಳು ಬೀಳಲೆಂದೂ ನಟನಿಗೆ ಮುಂದಿನ ಪದ್ಯವು ಜ್ಞಾಪಕಕ್ಕೆ ಬರುವ ಅವಕಾಶ ಕೊಡಲೆಂದೂ ಇರಬಹುದು. ಹಳ್ಳಿಗರಿಗೆ ತಟ್ಟನೆ ಮಾತು ಬರುವದಿಲ್ಲವೆಂದು ಭಾಗವತರು ಸ್ವಲ್ಪ ರಾಗರಾಗವಾಗಿ ಮಾತು ಹೇಳಿಕೊಡುತ್ತಿದ್ದರು. ಆದರೆ ವೇಷಹಾಕಿಕೊಂಡು ಕುಣಿಯುವರು ರಂಗಸ್ಥಳದಲ್ಲಿಯೂ ಆದೇವಿಧವಾಗಿ ಹುಡಿಮಾತಿಗೂ ರಾಗವನ್ನು ಸೇರಿಸುತ್ತಿದ್ದರು. ಅದೇನೋ ಅದು ಮನಸ್ಸಿಗೆ ಅಷ್ಟು ಹಿತವಾಗಿರಲಿಲ್ಲ. ಎಲ್ಲವೂ ಪ್ರತ್ಯಕ್ಷವಾಗಿಯೇ ಸಭಿಕರಿಗೆ ತೋರಬೇಕೆನ್ನುವ ಆಶೆಯು ಬಲವಾಗಿತ್ತು. ರಾಕ್ಷಸನವೇಷವು ಬರುವಾಗ ಎರಡುಕೈಗಳಲ್ಲಿ ಪಂಜುಗಳನ್ನು ಧರಿಸುವ ರೂಢಿಯೂ ಆಂಜನೇಯುವೇಷವು ಬರುವಾಗ ಮನೆಗಳ ಮೇಲೆ ನೆಗೆದುಕೊಂಡು ಬರುವ ವಾಡಿಕೆಯೂ ಹಿಂದೆ ಇದ್ದವು. ಈಚೆಗೆ ಆಂಜನೇಯನಿಗೆ ದೊಡ್ಡಮರವನ್ನು ನೆಟ್ಟು ಅದರಮೇಲೆ ಆಟವಾಡೆಂದು ಹೇಳಿದ್ದರು. ಕತೆಯು ಸೂರ್ಯನು ಉದಯಿಸುವವರೆಗೂ ಕೆಲವುಸಲ ಇನ್ನೂ ಹೊತ್ತಾಗಿಯೂ ಆಗುತ್ತಿತ್ತು. ಪ್ರತಿಯೊಂದು ವೇಷವು ರಂಗಸ್ಥಳಕ್ಕೆ ಮೊದಲುಕಾಲಿಡುವಾಗ ಭಾಗವತನಿಗೆ ನಮಸ್ಕರಿಸಿ ತೆರೆಯುಹಿಂದೆ ಸ್ವಲ್ಪಹೊತ್ತುಕುಣಿದು ಆಮೇಲೆ ರಂಗದಲ್ಲಿ ಕಾಣಿಸಿಕೊಳ್ಳುವರೂಢಿಯೂ, ಹೀಗೆ ಹೊಸದಾಗಿ ಬಂಧ ವೇಷ (ಪಾರ್ಟು) ವನ್ನು ಭಾಗವತನು ತಾವುಧಾರು-ತಮ್ಮ ನಾಮಾಂಕಿತವೇನು ? ಎಂದು ಕೇಳಿದರೆ ಅಯ್ಯಾ ದಕ್ಷಬ್ರಹ್ಮನೆಂದು ತಿಳಿಯುವ ನಾಗೈಯ್ಯ ಎನ್ನುವುದೂ ತಾವು ಬಂದ ಕಾರ್ಯವೇನು ? ಎಂದುಕೇಳಿದರೆ ಮಹಾರಾಣಿಯುವರನ್ನು ಕರೆಸುವ ನಾಗೈಯ್ಯಾ ಎನ್ನುವುದೂ ಈ ರೀತಿಯಾಗಿ ಸಭೆಯುವರಿಗೆ ಪರಿಚಯುಮಾಡಿಸಿಕೊಡುವ ರೂಢಿಯೂ ಇದ್ದಿತು. ನಕಲಿಗಳು ಚನ್ನಾಗಿದ್ದವು. ಕಿರೀಟ ಭುಜಕೀರ್ತಿ ಮುಂತಾದ ನಗಗಳನ್ನು ಪಾರವಾಳದ ಬೆಂಡು ಗಾಜಿನ ಚೂರುಗಳಿಂದ ಮಾಡಿಟ್ಟುಕೊಂಡು ಧರಿಸುವರು. ನಮ್ಮೂರಿನ ಆಟದಲ್ಲಿ ಸರಿಯಾಗಿ ವೇಷವನ್ನು ಧರ್ರುವುದು ಒಂದು ಭಾಗ, ತಾಳಮದ್ದಲೆ ಜಿಗಣಕ್ಕೆಸರಿಯಾಗಿ ಕುಣಿತಹಾಕಿ (ನಾಟ್ಯ) ಗತ್ತು ಬಿಡದೆ ನಲಿಯುವುದು ಒಂದುಭಾಗ, ಸಂಗೀತ, ಮಾತುಗಳು ಒಂದುಭಾಗವಾಗಿದ್ದವು. ಆಟವೆಲ್ಲಾ ಮುಗಿದಮೇಲೆ ಆರತಿತಟ್ಟೆಯನ್ನು ಕೈಯಲ್ಲಿಹಿಡಿದು ಸಭೆಯಲ್ಲಿಬಂದರೆ ಸಾಧಾರಣವಾಗಿ ಸಭಿಕರು ಮೂರುಕಾಸು ಆರುಕಾಸುಗಳನ್ನು ಹಾಕುತ್ತಿದ್ದರು.

ಕಡೆಗೆ ಉಳಿದ ನಟರೆಲ್ಲರೂ ದೇವಸ್ಥಾನಗಳ ಮುಂದೆ ದೇವರನಾಮವನ್ನು ಹಾಡಿ ಸ್ವಲ್ಪ ಕುಣಿದು ಮಂಗಳಾರತಿ ಮಾಡಿಸಿ ಭಾಗವತನ ಮನೆಯಲ್ಲಿ ಗೆಜ್ಜೆಬಿಚ್ಚಿ ಬಣ್ಣವನ್ನು ತೊಳೆದುಕೊಳ್ಳುತ್ತಿದ್ದರು. ಆಟವೆಂದರೆ ಸುತ್ತಿನ ಹಳ್ಳಿಪಳ್ಳಿಗಳಿಂದ ಜನರು ಬರುತ್ತಿದ್ದರು. ಹಬ್ಬಹರಿದಿನಗಳಲ್ಲಿಯೂ ಯಾರಾದರೂ ಇಚ್ಛೆಪಟ್ಟು ಆಟದ ಖರ್ಚು ಕೊಟ್ಟಾಗಲೂ ಆಟಗಳನ್ನಾಡುವ ವಾಡಿಕೆ. ಹೊಸದಾಗಿ ಭಾಗ ವತರನ್ನು ಕರೆಸಿ ಅವರಲ್ಲಿರುವ ವಿದ್ಯೆಯನ್ನು ಇನ್ನೂ ಹೆಚ್ಚಾಗಿ ಸಂಗ್ರಹ ಮಾಡ ಬೇಕೆಂಬ ಲವಲವಿಕೆ ಕಮ್ಮಿಯಾಗಿಯೇ ಇತ್ತು. ಶಿವಕಥೆಯು ನಮ್ಮೂರವರಿಗೆ ಒಪ್ಪಿದ ಆಟ. ಅದೆಲ್ಲಾ ಹೆಣ್ಣುವೇಷದವರ (ದೊಂಬೀದಾಸರ) ಮೂಲಕ ಪ್ರಚಾ ರವಾಗಿತ್ತು. ಇಲ್ಲಿದ್ದ ಹಳೇ ಸಂಪ್ರದಾಯದ ಭಾಗವತನು ಅಯ್ಯೋ ಇದೆಲ್ಲಾ ನರಕವಿ ಮಾಡಿದ್ದು. ನಮ್ಮಹತ್ತಿರ ಇರುವ ಆಟಗಳು ವರಕವಿ ಮಾಡಿದ್ದು ಎಂದು ಒಟಗುಟ್ಟುತ್ತಿದ್ದನು. ಸಾಮಾನ್ಯವಾಗಿ ಪೂರ್ವದ ಕವಿಗಳು ನಮ್ಮದೇಶದ ರಾಜರ ವೈಭವಗಳನ್ನು ವರ್ಣಿಸಿರುವರಷ್ಟೆ. ಅವುಗಳಲ್ಲಿ ರಾಜರು ಧರಿಸುವ ಕಿರೀಟ, ಭುಜ ಕೀರ್ತಿ, ಎದೆಹಾರ, ಬಾಹುಮುರಿ, ತೋಳುಬಳೆ, ಕರ್ಣಪತ್ರ, ಕರ್ಣಕುಂಡಲ, **ಮುಂಜೂರಿ** ಮುಂತಾದವುಗಳನ್ನೂ ವರ್ಣಿಸಿರುವರು. ಕಾದಂಬರಿ ಕಥೆಯಲ್ಲಿ ತಾರಾಪೀಡರಾಜನಿಗೆ ಇತರ ರಾಜರುಗಳು ನಮಸ್ಕರಿಸುವಾಗ ಅವರ ಕಿರೀಟದ ಬುಡದಲ್ಲಿ ಕಟ್ಟಿದ್ದ ನಾನಾವಿಧವಾದ ವಜ್ರದ ತೋರಣಗಳಿಂದ ಆತನ ಕಾಲು ಪ್ರಕಾಶಮಾನವಾಯಿತೆಂದು ವರ್ಣಿಸಿರುವರು. ನಾವದನ್ನು ಓದುವಾಗ ಶಬ್ದದ ಅರ್ಥವಾಯಿತು. ಆದರೆ ಅರ್ಥದ ವಿಷಯವು ತಿಳಿದಿರಲಿಲ್ಲ. ಹುಟ್ಟಿದ ಹಳ್ಳಿಯು ಮುಂಜೂರಿಯೇ ಅದೆಂದು ಈಗ ಭಾಸವಾಯಿತು. ಇದರಂತೆ ಅನೇಕ ಮಹಾ ಕವಿಗಳು ವರ್ಣಿಸಿರುವ ಎಷ್ಟೊ ವಸ್ತುಗಳ ನಿಜವಾದ ಜ್ಞಾನವು ಹಳ್ಳಿಯ ವಾಸ ದಲ್ಲಾಗಿದೆ. ಶುಭ್ರವಾದ ಪಾಂಚಜನ್ಯವನ್ನು ಹಿಡಿದಿರುವ ಕೃಷ್ಣನನ್ನು ನೋಡಿ ದರೆ ಯಮುನಾನದಿಯ ದಡದಲ್ಲಿ ಒಂದೇ ಒಂದು ಹಂಸವು ಸಂಚರಿಸುವಾಗ ಆ ನೋಟವನ್ನು ನೋಡಿದಂತೆ ಆಗಿತ್ತೆಂದು ವರ್ಣಿಸಿರುವರು. ಆದರ ನಿಜವಾದ ಅಭಿಪ್ರಾಯವು ಹೇಮಗಿರಿಯ ಹತ್ತಿರ ಹರಿಯುವ ಹೇಮಾವತಿಯ ದಡದಲ್ಲಿ ಒಂದಾನೊಂದು ಬಿಳಿಯ ಕೊಕ್ಕರೆಯು ನೀರು ಕುಡಿಯುವ ಸನ್ನಿವೇಶವನ್ನು ನೋಡಿದಾಗ ಓಹೋ ಹೀಗೇ ಇರಬಹುದು. ಆದರ ಅಭಿಪ್ರಾಯವೆಂದು ತೋರಿತ್ತು. ಹೀಗೆ ಎಷ್ಟೋ ವಿಷಯಗಳಲ್ಲಿ ಗುರುವಿನಂತೆ ಶಿಕ್ಷಕನಾಗಿದ್ದಿತು ಹುಟ್ಟಿದಹಳ್ಳಿಯು.

# ರಾಗಿ ಬೀಸುವಾಗ ಹೇಳುವ ಹಾಡುಗಳು

(ಮಾಳಮ್ಮ ಗೌಡತಿಯಿಂದ)

ಒಡೆಯಾ ಬರುವಾಗಾ ಅಡವೀಪಟ್ಟಣವಾಯ್ತು ಅಡವೀಯೆಲ್ಲಾ ತೆಂಗೂ ಹುಲಸಾದೋ | ನನ್ನೊಡೆಯಾ ದಂಡೆತ್ತೀಬರುವಾಗಾ ಅಡವೀಯಲ್ಲಾ ತೆಂಗೂ ಹುಲಸಾದೋ | ದಂಡಲ್ಲಾ ಕಾಣೇ ಅವರ್ಮನಸ್ಸಾಮಿಾಗೊಡ್ಡೀಗ್ಗವ್ರ ಪರ್ಸೇಸಾ ಲಿಟ್ಟೊ ಬರುತಾದೇ | ಮನಸ್ಸಾಮಿಬತಾಳ್ತರೆಂದ್ಹಾದೀಬೀದಿಯಾಗುಡ್ಸೀ ದಾರೀಗೇ ದುಂಡೂಮಲ್ಲೀಗೇಹರ್ವೀದೋ | ಎಂದೂ ಬಾರದಸ್ವಾಮಿಾ ಇಂದೇಸೂದಯ ವಾದ್ರಿ ಬಂದೇಕಾಣ್ಮಾಗ್ಯೇ ಬಡಸ್ತಾನಾನೋಡೀ | ಬಂದೇಕಾಣ್ಮಾಗ್ಯೆ ಬಡಸ್ತಾನಾ ನೋಡ್ಯಾರ್ದೇ ಬಂದೇವೂ ನಿಮ್ಮಾ ಅರಮಾನೇಗೇ | ಬಂದಾಗುರ್ರೀಗೇಗಿಂಡೀ ಲಗ್ಗಣಿಕೊಟ್ಟು ಚಿನ್ನಾದಾಪಾತ್ತ್ಯಾರೇ ಬೆಳಗೀರ್ರಿಸ್ರೀ | ಚಿನ್ನಾದೆಪಾತ್ತ್ಯಾರೆ ಚನ್ನಾಗೀಬೆಳಗಿರ್ಸಿ ಬಿನ್ನಹಕೆ ನಮುಸ್ಗೀದಯುವಾಗೀ | ಕಿವಿಯುಲ್ಲಿ ಕಾಮಾಕ್ಷಿ ಕೊರ್ಳಲ್ಲಿ ರುದ್ರಾಕ್ಷಿ ಸವ್ಲೂಗರೀಕಂತೆ ಹೆಗ್ಗಾಲ್ಲೀ | ಸವ್ಲೂಗರೀಕಂತೆ ಹೆಗ್ಗಲ್ಲಿ ಮಾಡ್ಕೊಂಡು ಬಿನ್ನಹಕ್ಕೆ ನಮ್ಮಸ್ಗೀ ಬರ್ರ್ಯೊೀವ್ರೆ | ಹಟ್ಟೀಲೀನೀಂತ್ಕೊಂಡು ಬಟ್ಮತ್ತಾಕೇರೋಳೆ ನಿಮ್ಹಟ್ಟೀಲ್ಬೀಡೀಕೇಬಿಡಲೇನೇ | ಬೀಡೂಕೇಬೀಡೋಕೇ ಅತ್ತಿಲ್ಲ ಮಾವಿಲ್ಲ ಚಿಕ್ಕೋೀರು ಮೈದರಸು ಮೊದಲೀಲಾ (ಮನ್ಲೀಲಾ) | ಚಿಕ್ಕೋೀರ್ಮೈದರ್ಸೂಮನ್ಲಿಲ್ಮುತ್ತಿನಸೆಟ್ಟಿ ನಮ್ಹಟ್ಟೀಲೀ ಬೀಡೀಕೇ ಬಿಡಬೇಡಾ | ಅತ್ತೆಇಲ್ದಿದ್ರೇನು ಮಾವಾ ಇಲ್ದಿದ್ರೇನು ಚಿಕ್ಕೋೀರು ಮೈದರ್ಸುಮುತ್ತೀನಂತೋರು | ಮುತ್ತೂ ತೆಗ್ಯಾಕೇ ಅತ್ಯಾಕೇ ಮಾವ್ಯಾಕೇ ನೀ ಒಪ್ಪೀದಾ ಸರವಾ ತೆಗಿಬಾರೇ |

(ಒಬ್ಬ ರಾಜನು ತಾನು ಅಪೇಕ್ಷಿಸಿದ ನಾಯಕಿಯ ಮನೆಗೆ ಮುತ್ತಿನ ಸೆಟ್ಟಿ ವೇಷದಿಂದ ಹೋಗಿ ನಿಮ್ಮಮನೆಯಲ್ಲಿ ಈದಿನ ಇಳಕೊಳ್ಳುವೆನು ಜಾಗ ಕೊಡಿ ಎಂದನು. ನಾಯಕಿಯು ಇವನ್ಯಾರೊ ಬೇರೆಯುವನೆಂದು ತಿಳಿದು ತನ್ನ ಪ್ರಾಣ ಸರ್ವಸ್ವವಾದ ರಾಜನಿಗೆ ಈ ಸಂದರ್ಭದಲ್ಲಿ ಬರುವಂತೆ ಓಲೆ ಬರೆಯುವಳು)

ಹದ್ದೀನಕೊರ್ಳೀಗೆ ಮುದ್ದೀನೋಲೆಯಾ ಬರೆದು ರಾಯ್ರಿದ್ದಾಬಳಿಗೇ ಕಳಿಗ್ಯಾಳೋ | ಕಾಗೇಯ ಕೊರ್ಳಿಗೇಬೇಗಾ ಓಲೆಯುಬರೆದೂ ರಾಯ್ರಿದ್ದಾಬಳಿಗೇ ಕಳಿಗ್ಯಾಳೋ |

(ಇದನ್ನು ನೋಡಿದ ಸೆಟ್ಟಿಯು ಹೊರಬೀದಿಗೆ ಬಂದು ವೇಷ ಬದಲಾಯಿಸಿ ತನ್ನ ನಿಜರೂಪದಿಂದ ಕಾಣಿಸಿಕೊಂಡನು ಆಗ)

ಬಂದಾರಾಯರ್ಗೇ ಬದರೀಜವ್ವಾ ನ್ಹಾಸೀ ಗಾಜೀನಾಕಂಬಾ ಬರ್‍ಗೀ ಅತ್ತಾಳೂ|ಅತ್ತೇ ಅಂದಾಳೇನೆ ಮಾವಾ ಬೈದಾನೇನೆ ಚಿಕ್ಕೋರ್‍ಮೈದರ್‍ನ್ಸುಡೀ ದಾನೇನೇ | ಅತ್ತೇಬೈಯ್ಯಾಲಿಲ್ಲ ಮಾವಾ ಕೊಲ್ಲಾಲಿಲ್ಲ ಚಿಕ್ಕೋವೈರ್ದರ್‍ನ್ಸು ನುಡಿಲೀಲ್ಲಾ | ಚಿಕ್ಕೋವೈರ್ದರ್‍ನ್ಸುನುಡಿಲಿಲ್ಯಾವಾಸೀವ್ಯೋ ಮುತ್ತೀನಾಸೆಟ್ಟೀ ನುಡಿದಾನೂ | ಮಡಾದಿಗ್ಹೋಡೇದಾನೂ ಮನಾದಲೀವಾರಿಗ್ಯಾನೂ ವಳಾಗ್ಹೋ ಗೀಮುಸೂಕಾ ತೆಗೇದನೂ ತೇಗೇದನೂ | ಒಳಾಗ್ಹೋಗೀಮುಸೂಕಾ ತೇಗೇದು ಏನಂದಾನೇ ನಾನ್ಹೆಚ್ಚೊ ನೀನ್ಹೆಚ್ಚೊ ತವ್ರೈಚ್ಚೊ ತಾವಾರ್ಹೆಚ್ಚೋ | ತಾಯಿದ್ದ ರ್‍ಯಾವ್ರೈಚ್ಚೊ ತಾಂದಿದ್ದರ್‍ಬ್ಬಾಳ್ಗೆಚ್ಚೊ ಸರ್‍ವಾರೀಗ್ಹೆಚ್ಚೊ ಸತೀಪತೀ ಸಾತೀಪತೀ |

(ಈ ರೀತಿಯಾಗಿ ಒಳಗೆ ಮಾತಾಡುತ್ತಿದ್ದರು ಗಂಡಹೆಂಡಂದಿರು. ಆ ಸಮಯಕ್ಕೆ ಸರಿಯಾಗಿ ರಾಜಕುಮಾರನು ಅಲ್ಲಿಗೆ ಬಂದು ತಾನೇನೋ ಸಾಲಾ ಕೊಟ್ಟಂತೆಯೂ ಅದನ್ನು ತಿರಿಗಿ ಈಗಲೇ ಕೇಳುವನಂತೆಯೂ ನಟಿಸಿ)

ಸತಿಪುರುಷಾ ಸಾತೀಪುರುಷಾರ ರಾಮಲ್ಲೀರಾರಾಮಲ್ಲೀ ಉಣಾಬಲ್ಲೇ ದಾನಾಕೊಡೂಬಲ್ಲೇ ಕೋಡೂಬಲ್ಲೇ | ನಾಕೂರಮೇಲೇನವ್ಲಬಣ್ಣಾದಾಮೇ ಲೇ ನಾಲ್ವರಿಗೇ ಧಾನೀಯಾ ಕೊಡೂತಿದ್ದೇ ಕೊಡೂತಿದ್ದೇ | ನಾಲ್ವರಿಗೇಧನೀ ಯಾಕೊಡೂತಿದ್ದೇ ಏಲೇಬಾಲೇ ನನಸರಿಯಾ ಧನೀಯಾ ಕೊಡೂಬಾರೇ ಕೊಡೂ ಬಾರೇ | ಧನೀಯ್ಹಾಗೇ ಕೋಡಾಲಪ್ಪಾ ಕದಾವ್ಹ್ಯಾಗೇ ತೇಗೀಯಾಲೀ ಮಗ್ಗಾ ಲಲ್ಲಾವ್ನೇಮನೇಗಾರಾ ಮಾನೇಗಾರಾ | ಮಗ್ಗಾಲಲ್ಲಾವ್ನೇಮನೇಗಾರ ಮಾವ ನಮಾಗಾ ಮಗ್ಗಾಗೀಬಾರೋ ತುರೂಬಿಗೇ ತೂರೂಬೀಗೇ |

(ರಾಜಕುಮಾರನು ಬಂದಿರುವನೆಂದು ತಿಳಿದು (ತುರುಬು) ರಾತ್ರೀಗೆ (ಮಗ್ಗಾಗಿ) ವೇಷ ಮರೆಸಿಕೊಂಡು ಬಾ, ಈಗ ನನ್ನ ಗಂಡ ಮನೆಯಲ್ಲಿರುವನು ಎಂದಳು, ಬಂದಿದ್ದವನು ಹೊರಟುಹೋದನು. (ಕೆಲವುಕಾಲ ಕಳೆದ ಮೇಲೆ)

ಗಂಗೇಗ್ಹಿಂದಾಗೀ ಊರಿಗ್ಮುಂದಾಗೀ ಸೂಯ್ಯೆಂದು ಸೀರೇ ಒಗೀಯೋನೇ ಒಗೀಯೋನೇ | ಸೂಯ್ಯೆಂದೂ ಸೀರೇ ಒಗಿಯೋನೇ ಮಡೀವಾಳೀ ಊರಲ್ಲೇನ್ಸೈ ಯ್ಯಾ ಹೊಸಾಸುದ್ದೀ ಹೊಸಾಸುದ್ದೀ | ಸುದ್ದೀನಾಕೇಳೀ ಸುಖದುಃಖಾಕೇಳೀ

ಪಟ್ಟ್ಯಾಣ್ದಾಲೋಬ್ಬಾ ಧೊರೆಮಾಗಾ ಧೋರೇಮಾಗಾ | ಪಟ್ಟ್ಯಾಣ್ದಾಲ್ಲೋಬ್ಬಾ ಧೊರಮಾಗಾಸಾತ್ಸುದ್ದೀ ನೀರಾಹೊಳೆಯಲ್ಲೀ ತಿಳೂಹಿದರ್ ತೀಳೂಹಿದರೂ ||

( ಈ ಕರ್ಣಕಠೋರವಾದ ಸಮಾಚಾರವನ್ನು ಕೇಳಿ )

ಹೊತ್ತಿದ್ದಾ ಕೋಡಾವಾ ಧೂಪ್ಪಾನೆತ್ತಾಕೀಬಿಟ್ಟೂ ಅವಳಿಚ್ಚೀಬಂದ್ದಾಂಗೇ ಅಳೂತಾಳೇ ಆಳೂತಾಳೆ | ಚಿನ್ನಾದಾ ಕೊಡವೇನೇ ರನ್ನಾದಾ ಕೊಡಾವೇನೇ ಮಣ್ಣಾರ್ಬೀಗ್ಯಾಕೇ ಕಡೂದುಃಖಾ ಕಡೂದುಃಖಾ | ಅತ್ತೀಕಾಣಾದ್ದಾಂಗೇ ಮಾವೈಕೇಳಾದ್ದಾಂಗೇ ಉತ್ತರಾಜೀ ಎಂಬೋಪುರೂಸರೂ ಪುರೂಸಾರೂ | ಉತ್ತರಾಜೀ ಎಂಬೋಪುರೂಸಾರಯ್ಯಾರ್ದಾಂಗೇ ನಾನ್ಹತ್ತೆಂಟುವರ್ಷಾಬಳಾಸಿದೇ ಬಾಳಾಸೀದೇ | ಹತ್ತೆಂಟೂ ವರ್ಷಾ ಬಳಾಸಿದೇ ಆಕೊಡವಾ ನೀರಾಹೊಳೆಯಲ್ಲೀ ಕಳೂಹಿದೆನೆ ಕಾಳೂಹಿದೆನೇ ||

(ತನ್ನ ಪ್ರೀತಿಪಾತ್ರನಾದ ರಾಜಕುಮಾರನು ಸತ್ತಸಮಾಚಾರವನ್ನು ಕೇಳಿ ತಲೆಯಮೇಲಿದ್ದ ಕೊಡವನ್ನು ಎತ್ತಿಹಾಕಿ ಗಟ್ಟಿಯಾಗಿ ಅತ್ತಳು. ಜೊತೆಯಲ್ಲಿದ್ದವರು ವ್ಯಂಗ್ಯವಾಗಿ ಕೇಳಲು ತಾನೂ ಅರ್ಥಾಂತರನ್ಯಾಸದಿಂದ ಗಡಿಗೆಗೂ ರಾಜನಿಗೂ ಸಾಮಾನ್ಯವಾಗಿ ಅಭಿಪ್ರಾಯವಿಟ್ಟುಕೊಂಡು ಆ ನೆವದಿಂದ ದುಃಖವನ್ನು ಹೊರಸೂಸುವಳು. (ನಮ್ಮ ಹಳ್ಳಿಯವರಿಗೆ ರಸಿಕತನವು ಇಲ್ಲವೆನ್ನುವಿರಾ ! )

## ಚೆಲುವರಾಯಸ್ವಾಮಿ

ಕಲ್ಯಾಣಿತಾಯಿಯಾಕರದಾರೆ ಏಎನ್ನೇ ಚಿನ್ನಾದಕೂವ್ವೀಲೀಚೆಲುವಯ್ಯ | ಚಿನ್ನಾದಾಕುವ್ವಾಲೀ ಚೆಲುವಯ್ಯಕರೆದಾರೆ ಕಲ್ಯಾಣಿತಾಯಿಯಾದನಿತೋರೆ | ಕಲ್ಲಾಣಿಸುತ್ತಾ ಮಲ್ಲಿಗೆ ಜಾಜೀಹೂವೂ ಅಂಬಾಡೀ ಮಾವು ಕಿರನೆಲ್ಲೀ | ಅಂಬಾಡೀ ಮಾವೂ ಕಿರನೆಲ್ಲಿ ತಾಳಡಿಯ ಅಳಗಾರಚಲ್ವರಯ್ಗೀ ಕೂಯ್ದಾರೆ | ಬೆಟ್ಟಾದನರಸಿಂಹ್ನಾಬೆನ್ನಿಂದೆ ಬರುವೋಳೇ ಹಸ್ಸುನೀಲಾದಾ ಬಳೆಯೋಳೆ | ಹಸ್ಸುನೀಲಾದಾ ಬಳೆಯೋಳೆ ವರನಂದೀ ಹೆಸ್ರೇಳೆ ನಿನ್ನಾ ಪುರುಸಾರ | ಹೆಸ್ರೂಹೇಳಾಲಾ ಹೆಚ್ಚೀನ ಮೇಲ್ಕೋಟೆ ಹಸ್ರುದುರ್ಗಾದಾ ಮೇಲೂಕೋಟೆ | ಹಸ್ರೂದುರ್ಗಾದಾಮೇಲಿರ್‍ವೋದಶವಂತ್ರು ದಶವಂತ್ರಮುಕ್ಳು ಚಲುವಯ್ಯಾ | ಅಚ್ಚಾತುರ್ಕ್ಯಾರ್ಹೆಣ್ಣೊ ನಿಚ್ಚ

ತಿಂಗಳು ಬೆಳಕೆ ಏನುಮೆಚ್ಚೀದೇ ವರನಂದಿ | ಏನುಮೆಚ್ಚೀದೇ ವರನಂದಿ ಮೇಲು
ಕೋಟಿ ತೆಪ್ಪಾದಮೇಲಾಡೋ ಚಲುವಾನಾ | ಚಲುವಯ್ಯಚಂಡಾಡಿ ಮರಳಿಬೀ
ದಿಗೆ ಬಂದ ಚಲ್ಲೀದೊರ್ಯಾರೆ ಆರತಿನೀರಾ | ಚಲ್ಲೀದೊರ್ಯಾರೆ ರತಿನೀರಾಚಲ್ವಯ್ನ
ಮಜ್ಜನ್ದಕೊಳಕೇ ಹರದಾವ್ರೂ | ಚಲುವಯ್ನ ಹೆಂಡಾತೀ ಚಂದ್ಕಾಣೆ ವರನಂದಿ
ಶ್ರೂ ಚೂರ್ಣಾದ್ಬಟ್ಟೊಹರಿನಾಮಾ | ಶ್ರೀ ಚೂರ್ಣಾದ್ಬಟ್ಟೊ ಹರಿನಾಮ
ತಕ್ಕೊಂಡು ಹರಿಸೇವೆಗಕ್ಕೀ ತೊಳಿಸ್ಯಾಳೊ | ಮೂಗೂತಿಮುರಿದಾರೆ ಯಾಕಳುವೆ
ವರನಂದಿ ಲೋಕನಾಳೋನೂ ನಿನಗಂಡ | ಲೋಕಾನಾಳೋನೂ ನನಗಂಡನಾ
ದಾರೆ ಬೇಕಾದ ಮುತ್ತಾತಕಳ್ವ್ಯರೆ | ವೈರಾಮುಡೀಚಲುವ ಒಳಗೇನಮಾಡೀ
ಯೊ ರಾಜಮುಡೀಯಾ ಬೆಳಕಲ್ಲಿ | ರಾಜಮುಡೀಯಾ ಬೆಳಕಲ್ಲಿ ಚಲುವಯ್ಯ ವಾ
ಲೇಗೆ ವಜ್ಜೂರ ಬಿಗಿಸ್ಯಾನೆ | ಚಲುವೈಯ್ಯನ್ನಿಗಾ ಎಲೊ ಅಂದಗಾರಾನೆ ನಿನಗೆ
ಈಬುದ್ಧೀತರವೇನೋ | ನಿನಗೆ ಈಬುದ್ಧೀತರವೇನೊ ಚಲುವಯ್ಯ ಗಿರೀಗೆಬಂದ್ಹೆಂ
ಣ್ಣಾತಡೆಯೋದು | ಗಿರೀಗೆಬಂದ್ಹೆಣ್ಣಾ ನಾನ್ಯಾಕೆ ತಡೆಯಾಲಿ ಕಲ್ಯಾಣೀಗ್ಹೋಗೀ
ಬರುತಿದ್ದೆ | ಕಲ್ಯಾಣೀಗ್ಹೋಗೀಬರುತಿದೆ ಆವರಮ್ಮ ಕೈಹಿಡಿದು ಧಾರೇ ಎರದಾ
ಳೋ | ಎಲ್ಲಾರಗಿಡದಲ್ಲಿ ಹುಲ್ಲೇಯುಹೊಡೆಯೋನೆ ಕಲ್ಹಟ್ಟೀಗಾರಾ ಚಲುವಯ್ಯ |
ಕಲ್ಹಟ್ಟಿಗಾರಾ ಚಲುವಯ್ಯ ಮೇಲೊಗ್ಗೀಟಿ ಕಲ್ಯಾಣೀಲ್ಹೊಡ್ದಾಮೊಸಳೇಯು |
ಸೋಬಾನೆಹಾಡೀರೆ ಸುರಗೀನ್ಮುತ್ತೈದೇರ ರಾಗಪಾಡೀರೆ ರಮಣೀರ | ರಾಗಪಾ
ಡೀರೇ ರಮಣೀರ ನಮ್ಮಾನೆ ಓಡೋ ಅರಗೀಣೀ ಮದುವೇಗೆ | ಓಡೋ ಅರಗಿ
ಣಿಯಾ ತೂಗೂತೊಟ್ಟಲಿಗ್ಹಾಕಿ ಬೇಗೇಳಿ ಸಮ್ಮಾಗವಸಾರಾ | ಬೇಗೇಳಿಸಮ್ಮಾ
ಗವಸಾರ್ನಂಜಾನ್ಗೂಡಾ ತೇರೀಸಮುಂದೇ ನಿಲಬೇಕು | ತೇರೀನಾಮುಂದೇ ಯಾ
ರ್ಯಾರು ನಿಲಬೇಕು ಕಕ್ಕೆರಾಮಣ್ಣಾ ದೇವಗೀರೀ | ಕಕ್ಕೆರಾಮಣ್ಣಾ ದೇವ್ಗೀರ್ನಂಜ
ಲ್ಗೂಡ ತೇರೀನೊತ್ತೀಗೇ ನಿಲಬೇಕು ||

(ಕೆಂಪಮ್ಮನು ಸಿಂಗಣ್ಣಗೌಡನ ಮಗಳು ಶಂಕರೇಗೌಡನು ಕೆಂಪಮ್ಮನ ಗಂಡ. ಒಂದಾನೊಂದು ಸಲ ಶಂಕರೇಗೌಡನು ಗಟ್ಟದ ಕೆಳಗೆ ಯುದ್ಧಕ್ಕೆ ಹೋಗಿ ಅಲ್ಲೇ ಮಡಿದುಹೋದನು. ಬೆಳಗಾಗಲು ಈ ಸಮಾಚಾರವು ಕೆಂಪಮ್ಮನಿಗೂ ಸಿಂಗಣ್ಣನಿಗೂ ತಿಳಿಯಿತು. ಕೆಂಪಮ್ಮನು ದುಃಖಾತಿರೇಕದಿಂದ ಬಾಗಿಲು ಹಾಕಿಕೊಂಡು ಒಳಗೆ ಹೋಗಿ ಮಂಚದ ಮೇಲೆ ಮಲಗಿಕೊಂಡುಬಿಟ್ಟಳು. ತಂದೆಯು ಬಂದು ಎಷ್ಟೋ ವಿಧವಾಗಿ ಸಮಾಧಾನ ಹೇಳಿದರೂ ಕೇಳಲಿಲ್ಲ. ಕೊನೆಗೆ ಗಂಡನು

ಸತ್ತ ಜಾಗಕ್ಕೆ ಹೋಗಿ ಅಗ್ನಿಕುಂಡವನ್ನು ತೆಗಿಸಿ ತಾನೂ ತನ್ನ ಗಂಡನ ಶವದೊಂದಿಗೆ ಆ ಕೊಂಡದಲ್ಲಿ ಹಾರಿಕೊಂಡಳು. ಆಗಣ ಸಮಯದಲ್ಲಿ ತಂದೆಯ ಮನೆಗೆ ಶಾಪವನ್ನು ಕೊಟ್ಟಳು. ಅದರಂತೆ ಈಗಲೂ ನಡೆದು ಬಂದಿದೆ. ತಂದೆಯ ಮನೆಗೆ ಶಾಪ ಕೊಡಲು ನಿಜವಾದ ಕಾರಣವು ಕೆಂಪಮ್ಮನಿಗೆ ಮಾತ್ರ ತಿಳಿದಿರಬಹುದು. ಆ ಕಾರಣವು ರೂಢಿಯ ಕಥೆಯಲ್ಲಾಗಲಿ, ಪದ್ಯಪ್ರಬಂಧದಲ್ಲಾಗಲಿ ತೋರಿಬರುವುದಿಲ್ಲ)

ಕೋಳಿಕೂಗೀತು ಮೂಡಕೆಂಪೇರೀತು ಏಳೆಕೆಂಪಮ್ಮ ಬೆಳಗಾಯ್ತೊ | ಏಳು ಕೆಂಪಮ್ಮ ಬೆಳಗಾಯ್ತುನಿನ್ನಟ್ಟಿ ಕೀಲಾದ ಎಮ್ಮೇ ಕರುವುಂಡೊ | ಕೀಲಾದ ಎಮ್ಮೇಗೇ ಕಾಲಲ್ಲಿ ಸರಪಾಣೀ ದಾವಣಿಮೆಟ್ಟಲಾ ಹಾಲಾ ಕರೆಯೋಳೆ | ಹಿಂಡೆಮ್ಮೆ ಕರೆಯೋಳೆ ಖಂಡೂಗದಾಸೇಯ ಕೆಂಪಮ್ಮ ಏಳೇ ಬೆಳಗಾಯ್ತು | ಅತ್ಯಮ್ಮತ್ಯಮ್ಮಾ ಕೆಟ್ಟಸ್ವಪ್ನವಕಂಡೆ ಕಟ್ಟಾಳ್ಗಳ್ರಾಯಾ ನಿನಮಾಗಾ | ಕಟ್ಟಾಳ್ಗಳ್ರಾಯಾ ನಿನಮಾಗ ಅತ್ಯಮ್ಮ ಬಟ್ಟಾಡುತಿದ್ದಾ ರಣದಲ್ಲೀ | ಮಡಿದೂಹೋಗ್ಯವ್ನೇ ರಣದಲ್ಲಿ ಮಾಗೀಯಾಕನಸೂ ನಮಗಲ್ಲಾ ಕಾಣೆ ನಮಗಲ್ಲಾ ಕಾಣೇ ಸೊಸೆಮುದ್ದೇ | ನಮಗಲ್ಲಾ ಕಾಣೇ ಸೊಸೆಮುದ್ದೆ ಮನದಲ್ಲಿ ಮತ್ತೇನಕಂಡೇ ಸರಿಹೇಳೇ | ಹುತ್ತದ ಮೇಗಣಕಾಗೆ ನೆತ್ತಾ ಕಾರೋದಕಂಡೆ ಕೆತ್ತೂಳಿಕಂಡೇ ಗುರುತೀಗೆ | ಕೆತ್ತೂಳೀ ಕಂಡೇಗುರ್ತೀಗೆ ಅತ್ಯಮ್ಮ ಚಿಕ್ಕೂಳಿರಾಗೀಲಿ ಇರ್ತ್ವೇಳುತ್ತಿದ್ದೋ | ಉಕ್ಕೀನುಳೀ ಬಂದೊ ನೆತ್ತಲಪಾವಡೆಬಂದೊ ಕೆತ್ತೂಳೀಬಂದೋ ಗುರುತೀಗೆ | ಕೆತ್ತೂಳೀಬಂದೋಗುರ್ತೀಗೆ ಅತ್ಯಮ್ಮ ಕೆಟ್ಟೇನೆಂತಾಲೊಟ್ಗನುರ್ಕ್ಯಾಳೋ ||

(ಅಷ್ಟರೊಳಗೆ ಒಬ್ಬಾಳು ಬಂದು)

ದಾವಾಣೀಮೆಟ್ಟಾಲಾ ಹಾಲ್ಕಯ್ರೋ ನೀರಾಜೇ ನಿನ್ನ ಗಂಡಾನತಲೆಯಾ ಕಡಿದವ್ರೇ | ಖಂಡೂಗಾದಾಸೇಯ ಕೆಂಪಮ್ಮ ನಿನಗಂಡ ಸತ್ತಸುದ್ದೀಯಾ ಅರಿಯೇನೇ | ಈ ಬಾಣ್ತಿಕೆಂಪಮ್ಮ ಬಟ್ಟಲ್ಲುಣ್ತಾಳೆಂದು ಗಟ್ಟದ್ಕೆಳ್ಗಣಾ ಹರಿವಾಣಾ| ಗಟ್ಟಾದ್ಕೆಳ್ಗಣಾ ಹರಿವಾಣ ತರಾಕ್ಹೋಗಿ ಶೆಟ್ಟಿಶಂಕರಾನೂ ಮಡಿದಾನೂ|

(ಎಂದು ಹೇಳಿಬಿಟ್ಟನು.—ಆಗ ಕೆಂಪಮ್ಮನು ಗಟ್ಟಿಯಾಗಿ ಅಳುತ್ತಾ)

ವಾರಾರಗಿತ್ತೀರಾ ಹೋರಾಟ ಬೋರಾಟ ಎಲ್ಲಾ ಇಲ್ಲೀಗೆ ಸರಿಯಾಯ್ತೊ | ಅಕ್ಕಿಮಾಡಿದಕಲ್ಲ ಹಟ್ಟೀಲಿ ಚಲ್ಲೋಳೆ ವಾರ್ಗಿತ್ತಿಕೇಳೇ ನನಮಾತಾ | ವಾರ್ಗಿತ್ತೀಕೇಳೇ ನನಮಾತ ಇಂದೀಗೆ ಹೋರಾಟವೆಲ್ಲಾ ಮುಗಿಯಿತೂ |

ಹಸಿಯಾಬೆತ್ತದಕೋಲು ಮಸಿಯಾದೊ ಅಯ್ಯಯ್ಯೊ ನನ್ನಹಸೆಯೊಳಾಡೂವಾ ಗರುಡಾನ | ಹಸೆಯೋಳಾಡೂವಾ ಚಲುವಯ್ನ ನಾಟಕಸಾಲೆ ಬಣ್ಣಾದಕಾಲು ಗಳಕಂಡೇನೇ ? | ಅಷ್ಟಕ್ಕಿತಕ್ಕೊಂಡು ನಿಮ್ಮಪ್ಪಬಂದವ್ನೆ ಅಕ್ಕೀಗಿಂತಾಮೇಲು ಅವಲಕ್ಕೀ | ಅಕ್ಕೀಗಿಂತಾಮೇಲು ಅವಲಕ್ಕಿ ತಕ್ಕೊಂಡು ನಿಮ್ಮಪ್ಪಾ ಬಂದವ್ನೇ ಮುಕತೋರೇ | ಅಪ್ಪಾಬಂದರ್ಬರ್ಲಿ ಅಕ್ಕೀತಂದಾರ್ತ್ರರ್ಲಿ ನನ್ನಕ್ರುಳ್ಳಿಬದ್ಕೂ ಅಡ್ವ್ಯಾಲೀ | ನನ್ನಕ್ರುಳ್ಳೀಬದ್ಕೂ ಅಡ್ವ್ಯಲ್ಲಿಟ್ಟಾಡ್ವಾಗ ನಮ್ಮಪ್ಪಾನ ಒಡ್ವೇ ನನಗ್ಯಾಕೇ | ಮಾಳೀಗೆಮಾಳೀಗೆ ಐದಂಕ್ಣದ್ಮಾಳೀಗೆ ಮಾಳೀಗೆಮೇಲೇ ಮಲ್ಗಿರ್ವೋ | ಮಾಳೀಗೆಮೇಲೇ ಮಲಗಿರ್ವೋನೀರಾಜಿ ನಿಮ್ಮಪ್ಪಬಂದವ್ನೆ ಮುಖ ತೋರೆ | ಹಾಲೂತಕ್ಕೊಂಡೂ ತಾಯಮ್ಮಬಂದವ್ಳೆ ಹಾಲೀಗಿಂತಾಮೇಲು ಎದೆ ಹಾಲೂ | ಹಾಲೂತಂದರೆತರ್ಲಿ ತಾಯಿಬಂದರೆಬರ್ಲಿ ಹಾಲ್ನಂತಾಬದ್ಕೂಅಡ್ವೀಲೀ | ಹಾಲ್ನಂತಾಬದ್ಕೂ ಅಡ್ವೀಲಿಟ್ಟಾಡೋಗ ಸಂತಾಯಿಾಯು ಘಸಣೇ ನನಗ್ಯಾಕೇ| ಅಣ್ಣಬಂದರೆ ಬರಲಿ ತಮ್ಮಬಂದರೆ ಬರಲಿ ಅವರೆಲ್ರು ಘಸಣೇ ನನಗ್ಯಾಕೇ ||

(ಹೀಗೆಂದು ಹೇಳಿ ತನ್ನ ಸಂಗಡ ಕೆಲವು ಜನ ಆಳುಗಳನ್ನು ಕರೆದುಕೊಂಡು ಗಂಡನು ಸತ್ತುಬಿದ್ದಿರುವ ಜಾಗಕ್ಕೆ ಹೋದಳು ಅಲ್ಲಿ)

ಕೊಂಡಾತೆಗ್ಯೋರೂ ಚಂದಾಗೀತೆಗಿರಪ್ಪ ಬಳ್ಳೂರಿಂದಾಚೇ ಕಿರುನೆಲ್ಲೀ | ಬಳ್ಳೂರಿಂದಾಚೇ ಕಿರುನೆಲ್ಲೀಕೆಳಗೆ ಚಂದಾಗಿ ಕೊಂಡಾ ತೆಗಿರ್ರೈಯ್ಯ| ಈ ಆಲಾದಾ ಮರದ್ಮೇಲೆ ಹತ್ತೀಕಡಿಯೋನೇ ಮತ್ತೊಂದೂ ಕೊಂಬೇಮಿಗಿಲಾಗೀ | ಮತ್ತೊಂದುಕೊಂಬೇ ಮಿಗಿಲಾಗಿ ಕಡ್ದೋನ್ಗೆ ನಾಗಂಡೂಸಂತನವಾ ಕೊಡುವೇನೂ |

| | | |
|---|---|---|
| ಈ ಅತ್ತೀಮರದ್ಮೇಲ್ಹತ್ತಿಕಡಿಯೋನೆ | } | ಮತ್ತೊಂದೂಕೊಂಬೇ ಮಿಗಿಲಾಗೀ |
| ಈ ಮಾವಿನ್ಮರದ್ಮೇಲ್ಹತ್ತಿಕಡಿಯೋನೆ | | |

ಮತ್ತೊಂದುಕೊಂಬೇ ಮಿಗಿಲಾಗಿಕಡ್ದೋನ್ಗೆ ನಾ ಹೊನ್ನೂಸಂತನವಾ ಕೊಡುವೇನೂ | ಕೊಂಡಾವತೆಗೆಯೋರು ಚಂದಾಗಿತೆಗಿರಪ್ಪ ಗುಂಡೀಗೇಸೋಡೀ ಗುರಿ ಕಟ್ಟೀ | ಹಳ್ಳೀಗೌಡಸಮಗಳ ಕೊಂಡಾವತೆಗೆದವ್ಗೆ ನಾ ಹೆಣ್ಣೂಸಂತನವಾ ಕೊಡ್ತೀನಿ ||

(ಈ ರೀತಿಯಾಗಿ ಹೇಳಿ ಆಳುಗಳ ಕೈಯಿಂದ ಅನೇಕ ಕೊಂಬೆಗಳನ್ನು ಕಡಿಸಿ, ದೊಡ್ಡ ಅಗ್ನಿಕುಂಡ ಹಾಕಿ ಅದರಲ್ಲಿ ಬೀಳಲು ಸಿದ್ಧವಾದಾಗ ಈ ಶಾಪೋಕ್ತಿಗಳನ್ನು ಹೇಳಿದಳು)

ಅವ್ಳ್ಳುಟ್ಟಿಹಾಳಾಗ್ಲಿ ಅವನ್ಕೊಟ್ಟಿಬರ್ದಾಗ್ಲಿ ಅವ್ನ ಹೆಣ್ಮಕ್ಕಳ್ಳೋಲೇ ಕಳ್ಯಾಲೀ | ಅವ್ನ ಹೆಣ್ಮಕ್ಕಳ್ಳೋಲೇ ಕಳೆಯಾಲ್ನಿಂಗಣ್ಗಾಡ್ನ ಪಡ್ಸಾಲ್ಗೆ ಮುಳ್ಳ್ಯಾ ಎಳೆಯಾಲೀ | ಬೀದೀ ಹಾಳಾಗಲಿ (ಅವ್ನ) ಹಾದಿ ಹಾಳಾಗಲಿ (ಅವ್ನ) ಹೆಣ್ಮಕ್ಕಳ್ಳೋಲೇ ಕಳೆಯಾಲೀ | (ಅವ್ನಾ) ಹೆಣ್ಮಕ್ಕಳ್ಳೋಲೆ ಕಳೆಯಾಲ್ನಿಂಗಣ್ಗಾಡ್ನ ಬಾಗಿಲ್ಗೆ ಮುಳ್ಳ್ಯಾ ಎಳೆಯಾಲಿ ||

(ಹೀಗೆ ಶಾಪ ಕೊಟ್ಟು ಆ ಧಗಧಗನೆ ಉರಿಯುವ ಅಗ್ನಿಕುಂಡದಲ್ಲಿ ಬಿದ್ದಳು)

ಮೇಲೆ ಗೆಜ್ಜೀಕಟ್ಟಿ ಆಲ್ಟ್ಟಣೇನ್ಹಂಗೆ ಆದೂ ಗೆಜ್ಜೀಕಟ್ಟಿಆಲೀಕೊಂಡು | ಆಲೀಕೊಂಡ್ಕೆಂಪಮ್ಮ ಕೊಂಡಾವ ಹೊಗುವಾಗ ಗುಡಿಸುತ್ತಾ ಅವ್ರು ಕುಣಿದಾರೋ |

[ ಉತ್ತರೆಗೂ ಅವಳ ಅತ್ತೆಗೂ ಸರಿಬೀಳಲಿಲ್ಲ. ಆದ್ದರಿಂದ ಅತ್ತೆಯು ಮಗನನ್ನು ತನ್ನ ಕಡೆಗೆ ಒಲಿಸಿಕೊಂಡು ಸೊಸೆಯನ್ನು ಮನೆ ಬಿಟ್ಟು ಹೊರಡಿಸಿದಳು. ಉತ್ತರೆಯು ಗಂಡನ ಮನೆಯನ್ನು ಬಲುಕಷ್ಟದಿಂದ ತೊರೆದು ಬಿಟ್ಟು ಎಳೆಯವಾದ ನಾಲ್ಕಾರು ಮಕ್ಕಳನ್ನು ಕಟ್ಟಿಕೊಂಡು ತಂದೆಯ ಮನೆಗೆ ಹೊರಟಳು. ಬರುವ ದಾರಿಯಲ್ಲಿ ಅನೇಕರು ಅವಳನ್ನು ಹಿಡಿದು ತಮ್ಮವಳನ್ನಾಗಿ ಮಾಡಿಕೊಳ್ಳಬೇಕೆಂದು ಆಶೆಗಳನ್ನು ತೋರಿಸಿದರು. ಉತ್ತರೆಯು ಅವುಗಳೆಲ್ಲಕ್ಕೂ ಬೆರಗಾಗದೆ ತನ್ನ ನಿಜವೊಂದನ್ನೇ ನಂಬಿಕೊಂಡು ತಂದೆಯ ಮನೆಗೆ ಬಂದಳು. ತಂದೆ ತಾಯಿ, ಅಣ್ಣ ತಮ್ಮ, ಅಕ್ಕ ತಂಗಿ, ಅಜ್ಜಿ ಅಜ್ಜ ಒಬ್ಬರೂ ಅವಳಿಗೆ ಇರಲು ಆಶ್ರಯ ಕೊಡಲಿಲ್ಲ. ಕೊನೆಗೆ ಅಜ್ಜಿಯು ಅತಿ ದುಃಖದಿಂದ ಹೇಳಿದ ಮಾತನ್ನೇ ಗತಿಯೆಂದು ನಂಬಿ ಹೋಗಿ ಹಂಪೆಯ ಹೊಳೆಯಲ್ಲಿ ಬಿದ್ದು ಮಕ್ಕಳು ಸಹಿತ ಪ್ರಾಣತ್ಯಾಗ ಮಾಡಿದಳು. ಈಗ ಅವರ ರೂಪುಗಳು ನಾಲ್ಕು ಭಾಗವಾಗಿ ಹೊಳೆಯಲ್ಲಿ ಮೂಡಿವೆಯಂತೆ ]

ಹರ್ಗೀಬಂದ್ಮಾಗ್ನೀಗೆ ಹಾಲೂ ಅನ್ನವನಿಕ್ಕಿ ಉತ್ತರದೇವೆಂಬೋ ಸೊಸೆಬ್ಯಾಡಾ | ಉತ್ತರದೇವೆಂಬೋ ಸೊಸೆಬ್ಯಾಡಕಂದಯ್ಯಬಿಟ್ಟೊಬಿಡವ್ಳ್ಳಾ ತವ್ರೀಗೆ | ಉತ್ತೂಬಂದ್ಮಾಗ್ನೀಗೆ ತುಪ್ಪಾಬಾನವಾನಿಕ್ಕಿ ಉತ್ತರದೇವೆಂಬೋ ಸೊಸೆಬ್ಯಾಡಾ| ಉತ್ತರ..........................................................................ಗೇ ||

ಬಿಟ್ಟೊಬಿಡಾಕೇ ಹಸ್ಸೀನೆಕರ್ವೀನೆ ಹತ್ವಾರ್ದಾಮುಟ್ಟೀತೆರಮುಟ್ನೀ | ಹತ್ವರ್ದಾಮುಟ್ನೀತೆರಮುಟ್ನಬಂದೋಳ ಬಿಟ್ಟೂಬಿಡೋದೂ ತರಷೇನೇ | ಹತ್ತುವರ್ಷಾಕ್ಕೊಂದು

ಹಂಚೀಯುನೂತೇನು ಬಿಟ್ಟೊಬಿಃವ್ಯಾತವ್ರೀಗೆ | (ಅವಳು ಇವರ ಹಿಂಸೆಯನ್ನು ತಡೆಯಲಾರದೆ ಹೊರಡಲನುವಾದಾಗ ಅತ್ತೆಯು ಹೇಳುವಳು)

ಅಟ್ಟದ್ಮೇಲಿರುವ್ರೋಃಚಟ್ಟೀಃಕುಂಬಳ್ದಣ್ಣಾ ಅಟ್ಟುಂಡುಹೋಗೇಸೊಸೆ ಬಾಲೇ | ಹಿತ್ತಾಲಲ್ಲಿವ್ರೋಃ ದಾರೇಹೀರೇಕಾಯ ನಾರೆಡ್ದೂ ಅಡ್ಗೇವಾಡ್ಹೆಣ್ಣೇ| ನಾರೆಡ್ದೂ ಅಡ್ಗೇವಾಡೀ ನಿನ್ಗಂಡನ್ಗೆವೊದ್ಲಿಕ್ಕೀ ನೀನೂ ಉಣ್ಹೆಣ್ಣೇ | ಅಟ್ಟದ್ಮೇ ಲಿವ್ರೋಃ ಪಟ್ಟೇಸೀರೆಯ ತೆಗೆದು ಒಂದುಟ್ಟು ಒಂದಾವುುಸಗೀಃಡೇ | ಒಂದುಟ್ಟು ಒಂದಾವುುಸಗಿಟ್ಟು ಎಲೆಹೆಣ್ಣೆ ನಿಮ್ಮಪ್ಪಾನವುನೆಗೇ ನಡೆಹೆಣ್ಣೇ | ಕಂದಾನೆತ್ತೀ ಕೊಂಡು ಒಂದಾಕೈಲ್ಹಿಡ್ಕೊಂಡು ಸುವ್ವಾರಿಮುಗನಾ ನಡೆಸೂತಾ | ಸುವ್ವಾರಿಮು ಗನಾ ನಡೆಸುತ್ತ ಉತ್ತರದೇವೀ ಹೋದಾಳು ತಿಪ್ಪೂರಬಯಲಲ್ಲೀ | ತಿಪ್ಪೂರಗೌಡ ಕಂಡೂ ಶರಗಹಿಡಿದೂ ತಿಪ್ಪೂರಗರತೀ ಇರುಬಾರೇ | ತಿಪ್ಪೂರಬಯುಲುನಂತಿಪ್ಪೇ ಯುಬೆಲೆಯಿಲ್ಲ ತಿಪ್ಪೂರಗೌಡಾ ಬಿಡು ನನ್ನ ಸೆರಗಾ |

ಕಂದಾ............................................................................ನಡೆಸೂತಾ ||

ಸುವ್ವಾರೀಮುಗನಾ ನಡ್ಸೂತೂತ್ತರದೇವೀ ಹೋದಾಳು ಬಾಗೂರಬಯಲಲ್ಲೀ | ಬಾಗೂರಬೈಲುನನ್ಬಾಗಲ್ಗೆ ಸರಿಯಿಲ್ಲ ಬಾಗೂರಗೌಡಾ ಬಿಡುನೆನ್ನ ಸೆರಗಾ| ಬಾಗೂ ರಗೌಡಾ ಬಿಡು ನನ್ನ ಸೆರಗೆಂದೂ ಹೋದಾಳವ್ರಪ್ಪಾನಾ ಅರಮಾನೀಗೇ | ಅಪ್ಪ ಕದತೆಗಿಯೋಃ ಅಪ್ಪಾಜೀ ಕದತೆಗಿಯೊ ನನ್ನಪ್ಪಾ ನನಗೇ ಕದತೆಗಿಯೋ | ಕದವಾ ತೆಗಿಯೋಕೇ ತೆರಣಿ (ವಿ) ಲ್ಲುತ್ತರದೇವೀ ಹೋಗೆ ನಿಂದೊಡ್ಡಪ್ಪಾನರಮಾನೇಗೇ | ಕಂದಾನೆತ್ತೀಃಕೊಂಡು ಒಂದಾಕೈಲ್ಹೀಡ್ಕೊಂಡು ಸುವ್ವಾರಿಮುಗನಾ ನಡೆಸೂತ್ತಾ| ಸುವ್ವಾರಿಮುಗನಾ ನಡೆಸುತ್ತೋತ್ತರದೇವೀ ಹೋದಾಳು ದೊಡ್ಡಪ್ನ ಅರಮಾನೇಗೇ|

ಹೋಗೆ ನಿಂಚಿಕ್ಕಪ್ನ ಅರವಾನೇಗೇ |

ಚಿಕ್ಕಪ್ಪಕದತೆಗಿಯೋ ಚಿಕ್ಕವ್ವಕದತೆಗಿಯೋ ನನ್ನಪ್ಪ ನನಗೇ ಕದತೇಗೀರೋ |

................................................ ಹೋಗೆ ನಿಮ್ಮಣ್ಣಾನಾ ಅರಮಾನೇಗೇ |

................................................ ಹೋಗೆ ನಿಂತಮ್ಮಾನಾ ಅರಮಾನೇಗೇ |

................................................ ಹೋಗೆ ನಿಮ್ಮಕ್ಕಾನಾ ಅರಮನೇಗೇ |

................................................ ಹೋಗೆ ನಿಂತಂಗೀಯಾ ಅರಮಾನೇಗೇ |

ಹೋಗೆ ಅಜ್ಜಮ್ಮಾನಾ ಅರಮಾನೇಗೇ |

(ಅಜ್ಜಿಗೂ ಚಿಕ್ಕಂದಿನಲ್ಲಿ ಇದೇ ವಿಧವಾಗಿ ತೊಂದರೆಯು ಸಂಭವಿಸಿ ಯಾರೂ ಆಶ್ರಯ ಕೊಡದೆ ಊರ್‍ಹೊರಗೆ ಒಂದು ಮನೆಯನ್ನು ಕಟ್ಟಿಕೊಂಡು ಪ್ರಾಣ ಬಿಡ ಲಾರದೆ ವಾಸಿಸುತ್ತಿದ್ದಳು. ತನ್ನ ಅವಸ್ಥೆಯಿಂದ ಬಂದು ಆಶ್ರಯ ಕೇಳಿದ ಮೊಮ್ಮ ಗಳನ್ನು ಕಂಡು ಹೊಟ್ಟೆಯ ದುಃಖವನ್ನು ತಡೆಯಲಾರದೆ)

ನನ್ನಹರೇದಲ್ಲಿ ನಿನ್ನಾಪ್ರಾಯಾದಲ್ಲಿ ನನ್ನಾಸುಖಾ ನಿಂಗೇ ಇರಸಿತ್ತಾ |
ನನ್ನಸುಖಾ ನಿಂಗೆ ಇರಸಿತ್ತಕಂದಮ್ಮ ಹೋಗಮ್ಮಹಂಪೇ ಹೊಳೆಗಾಗೀ ||

(ನಿರಾಶೆಯಿಂದ ಉತ್ತರೆಯು ಹಂಪೆಯ ಹೊಳೆಯಲ್ಲೀ ಆಶ್ರಯಪಡೆದಳು)

## ತವರಿನ ವಾಂಛಲ್ಯ (ಪ್ರೀತಿ)

ಬಂದ್ರೂ ತಮ್ಮನಮನೆಗೆ ಅಂದುಸಂತಸವಾಗಿ ನಿಂದೀರಕ್ಕೈಯ್ಯಾನಡು ವೇಲಿ | ನಿಂದೀರಕ್ಕೈಯ್ಯಾ ನಡುವೇ ಕೋಣೇಲಿರುವೊ ದುಂಡೀಯಕೇಳೀ ಬರು ತೀನಿ | ಅತ್ತೀಯಮಗಳೂ ಮುತ್ತಿನಮಾಣಿಕವೇ ಅತ್ತಲನಾಡಿಂದಾ ಹಿರಿಯಕ್ಕ ಬಂದವಳೆ ಅತ್ತಲನಾಡಿಂದಾ ನಡಕೊಂಡು ಬಂದವಳೆ ಅಕ್ಕರದಿಂದಾ ಕರೆಹೋಗೇ| ಅಕ್ಕರದಿಂದಾ ಕರ್‍ಯೊಕ್ತಂಗ್ಯಲ್ಲವೊ ತಂಗ್ಯಲ್ಲ ಅಕ್ಕಲ್ಲ ಕುಟ್ಟಿದಕ್ಕೀಯೂ ಮನೆ ಲಿಲ್ಲ | ಕುಟ್ಟೀದಕ್ಕಿಲ್ಲಾ ಕುಸುಬಲಬತ್ತಿಲ್ಲವೊ ಪುರುಸರ್ತಂದ್ನೌದೇ ಒಲೆಗಿಲ್ಲಾ | ಪುರುಸರ್ತಂತ್ನೌದೇ ಒಲೆಗಿಲ್ಲಬೇಗೊಽೀಗಿ ಇಂದೊಽೀಗಿ ನಾಳೇಬರಹೇಳಿ |

(ಈ ಮಾತನ್ನೆಲ್ಲಾ ಈಚೆ ಅಂಗಳದಲ್ಲಿ ನಿಂತು ಕೇಳಿತ್ತಿದ್ದ ಹೆಣ್ಣುಮಗಳು)

ಊಟಕ್ಬರಲಿಲ್ಲಾ ಕೋಟೇನೋಡಕೆ ಬಂದೆ ಕಟ್ಟೀದಾಬುತ್ತೀ ಕೈಲಾದೇ | ಬುತ್ತಿ ಯೂ ಕೈಲಾದೆ ಕೈತುಂಬಾವಿಳ್ಯವಾದೆ ನಿಟ್ಟೂರಸಂತೇ ನೆರಳಲ್ಲೀ|ನಿಟ್ಟೂರತೋಪಾ ನೆರಳಲ್ಲಿಹೋಯಿತ್ತಾನಿ ಹೆಚ್ಚೊಕ್ಕಲಾಗೀ ಬದುಕಪ್ಪತಮ್ಮೈಯ್ಯ | ಕನ್ನೊಣ್ಣಿನಬು ದ್ಧೀತಿಳಿದಾವೊತಮ್ಮೈಯ್ಯ ನನ್ನಾಣೇನೀನೂ ಹೊಡಿಬೇಡ | ನನ್ನಾಣೆ ನೀನೂ ಬಯಬೇಡ | ಇದೇನೇ ಅಕ್ಕೈಯ್ಯಹೊಸಮಾತಾ ಆಡ್ತಿದ್ದಿ ಹುಸುನಾಗೆ ನೀನೂ ನಗುತಿದ್ದಿ |

(ಅಣ್ಣನು ಸಮಾಧಾನ ಹೇಳುತ್ತಿದ್ದಹಾಗೆಯೇ ಊರಿಗೆ ಹೊರಟುಹೋ ದಳು. ಬೆಳಗ್ಗೆ ಹೋಗಿ ಸಂಜೆಗೆ ಬಂದ ಹೆಣ್ಣುಮಗಳನ್ನು ಗಂಡನ ಮನೆಯವರು ಇದೇನು ಇಷ್ಟುಬೇಗ ಬಂದುಬಿಟ್ಟೆ ಎಂದರು. ಆದಕ್ಕೆ ಉತ್ತರ)

ಹೋಗ್ತಾಗ್ನುಽಲ್ಲೇಕಂಡೆ ಬರುವಾಗ ಬಸವನ್ಕಂಡೆ ತವ್ರೂರದಾರೀನಡುವೇಲಿ |
ತವರೂರ್‍ಹಾದೀಲೀ ಏಳ್ರಾತ್ತಪ್ಸರ್ಪನಕಂಡು ಹಿಂತಿರುಗಿಬಂದೇ ಅತ್ಯಮ್ಮನವರೇ ||

ಭಾವನಿಗ್ಬೇರೇಸಿಡಿಕುದುರೆತಂದಿವ್ನಿ ಬ್ಯಾಗನೇಳಕ್ಕಾಮದುವೇಗೇ | ಬಂದೇ ಅತ್ಯ್ಗ ವ್ಮಾ ಬಂದೇನುನಾದಾನಿ ಬಂದೀ ತೋಳೋಳೇ ನೀನೇನೇಸೂಸೆಮಗಳು | ತವ್ರೀ ರೋಹೊತ್ಗೇ ಬಂದೇನುನಾದನಿ ಪಟ್ಕಟ್ರಿಪಾಂಡವ್ರಮಕ್ಕಳಿಗೇ ( ಸೋಬಾನೇ )

## ಹೆಣ್ಣುಮಕ್ಕಳ ಗೋಳು

ಪಾಪೀಹೊಟ್ಟೀಲುಟ್ಟಿ ಪರದೇಶಿನಾನಾದೆ ಪಂಚಪಾತಕನಾ ಕೈಯಲ್ಲಿ ಹಿಡಿದೇ | ಪಂಚಪಾತಕನಾ ಕೈಯಲ್ಲಿ ಹಿಡಿದೂ ಈ ರಾಕಾಸಿಮನೆಗೇ ಸೊಸೆಯಾದೆ| ರಾಕಾಸೀಮನೆಗೇ ಸೊಸೆಯಾಗಿಗ್ಯೆಯ್ಯುಲೂ ಭಂಗದಕೂಳಲ್ಲೋ ಶಿವರಾಯಾ | ಹೆಣ್ಣೀನಾಕಿಚ್ಚತ್ತಿ ಬನ್ನೀಯಾಮರಬೆಂದು ಕನ್ನೇರಾಯಾರಾ ಕದಬೆಂದೊ|ಕನ್ನೇ | ರಾಯಾರಾ ಕದಬೆಂದು ಹೊಗೆಹೊಂಟೊ ಅಲ್ಲೀಸನ್ಯಾಸೀಮಠಬೆಂದೋ | ಅಲ್ಲಿ ಸನ್ಯಾಸೀಮಠಬೆಂದು ಹಾರವರ ಪಂಚಾಂಗಬೆಂದೂ ಹೊಗೆಯಾದೋ | ತಾಯಿಲ್ದ ತವರೀಗೇ ಹೋಗೋರೂ ಹೆಡ್ಡಾರೂ ನೀರಿಲ್ದಾ ಕೆರೆಗೇ ಕರುಹೋಗೀ | ನೀರಿಲ್ದಾ ಕೆರೆಗೇ ಕರುಹೋಗಿ ಶಿವರಾಯಾ ಶೋಕಾಮಾಡೋದಾಶಿವನೀಗೇ | ಬೆಟ್ಟಕ್ಕೆಬೇಗೇಯಾ ಇಟ್ಟವರು ಯಾರವ್ಮಾ ಹಕ್ಕೀಬೆಂದೂ ಹಕ್ಕೀಮರಿಬೆಂದೂ | ಹಕ್ಕೀಬೆಂದೂ ಹಕ್ಕಿಗೀಜಗನ ಮರಿಹಕ್ಕಿರಕ್ಕೇಬೆಂದೂ ಬಾಯಾಬಿಡುತಾದೇ ||

## ತವರುಮ್ಯೇಲಿನ ಮುಯ್ಯಿ

ಹಟ್ಟೀಕಲ್ಲೊತ್ತೀ ಬೆಟ್ಟೆಲ್ಲಾ ನೋಯ್ತಾವೆ ಬೆಟ್ಟೀಗೊಳ್ಳೆಣ್ಣೀ ಬಿಸಿನೀರೂ| ಬೆಟ್ಟೀಗೊಳ್ಳೆಣ್ಣೀ ಬಸಿನೀರತೋಗೊಂಡು ನಂರಾಯಾ ಬೀಗಾರಾ ಬರಹೇಳೀ ||

(ಹೆಂಡತೀ ಮಾತಿನಂತೆ ಗಂಡನು ಬೀಗರನ್ನು ಕರೆಸಿದನು. ಭಾವ್ಮೈದುನನ ಹೆಂಡತಿ ಗರ್ಭಿಣಿಯಾಗಿದ್ದಳು. ಅವರಿಗೆ ಊಟ ಉಪಚಾರ ಮಾಡಿಸಿ ಊರಿಗೆ ಸಾಗಕಳುಹಿಸುವಾಗ ದಾರಿಯಲ್ಲಿ ಯಜಮಾನನ ಹೆಂಡತಿಗೂ ಅವಳ ತಮ್ಮನಿಗೂ ನಡೆದ ಮಾತು)

ಹಾದನೂರಾಮೇಲೆ ಯಾಕೆಬಂದೊತಮ್ಮೈಯ್ಯ ನೀಬಾಡಿ ನಿನ್ನಾಮುಕಬಾಡೀ | ನೀಬಾಡಿ ನಿನ್ನಾಮುಕಬಾಡಿತಮ್ಮೈಯ್ಯ ಚಿಗರೇಲೇಬಾಡೀ ತರಗಾದೋ | ತಮ್ಮೈಯ್ನಿನೆಹೆಂಡಾತಿ ಬಿಮ್ಮನ್ಸೆಯಾಗವಳೆ ಹೆಣ್ಣುಹೆತ್ತಾರೇ ನಮಗೊಂದೂ | ಹೆಣ್ಣುಹೆತ್ತಾರೇ ನಮಗೊಂದೂ ಊರಮುಂದೆ (ಇರುವ) ಹೊಸ್ನರಳಿಮರವೇ ಹೊಣೆಯಾಗೋ | ಸೊಸಿಗೋಣೀಮರವೇ ನಾವ್ಹೆಣ್ಣೀಗೇಬರ್‍ತೀವಿ

ಹೊಣೆಯಾಗೂ ನೀನೂನೆರಳಾಗೂ | (ಹತ್ತು ಹನ್ನೆರಡು ವರ್ಷಗಳು ಕಳೆದು ಹೋದಮೇಲೆ ಒಂದು ದಿನ)

ತಮ್ಮಾ ನಾಮನೆಗೆ ಹೆಣ್ಣೀಗೆಹೋದಾಳು ಸುಣ್ಣಾದಗೋಡೇ ಬರಗೀದ್ದಾ | ಸುಣ್ಣಾದಾಗೋಡೇ ಬರಗಿರುವ ತಮ್ಮೈಯ್ಯ ಹೆಣ್ಣು ಕೊಡುಬಾರೋ ಮಗ ನೀಗೇ | ಹೆಣ್ಣಾಕೇಳೋಳೂ ನೆನ್ನೇನೂಮಾಡುತ್ತಿದ್ದೆ ಅಕ್ಕೈಯ್ಯ ಈಗಾ ಒಂ ದೀದ್ದೀ | ನೆನ್ನೇಲು ಪಟ್ಟಣದ ದೊರೆಗೋಳುಬಂದಿದ್ರು ಬಣ್ಣಾಸ (ಸೀರೆಯು) ಉಡಿಸೀ ಬಳೆತೊಡೀಸಿದರೂ | (ಉತ್ತರದಿಂದ ತಮ್ಮನ ಮನಸ್ಸು ರಾಜರ ಸಂಬಂ ಧದಲ್ಲಿ ಆಶೆಯಿಟ್ಟಿದೆ ಎಂದರಿತ ಅಕ್ಕನು ಸ್ವಲ್ಪ ಸಿಟ್ಟಿನಿಂದ)
ಹೆಣ್ಣುಕೊಡದಿದ್ದರೇ ಸಿಕ್ಕಿಲ್ಲ ತಮ್ಮೈಯ್ಯ ನಿನ್ನೂರಮೇಲೇ ಬರುತೀನೋ |

(ಈಗ ನಾನು ಮನೆಗೆ ಹಿಂತುರಿಗಿ ಹೋಗದೆ ಇನ್ನೊಂದು ಕಡೆ ಇಲ್ಲಿಗಿಂ ತಲೂ ಬೇಕು ಬೇಕಾದ್ದು ಖರ್ಚುಮಾಡಿ ನನ್ನ ಮಗನಿಗೆ ಮದುವೆ ಮಾಡಿ ಹೆಣ್ಣು ಗಂಡನ್ನು ನಿನ್ನೂರಮೇಲೇ ಕರೆದುಕೊಂಡು ಹೋಗುತ್ತೇನೆ. ಆಗ ನೀನೇ ಪಶ್ಚಾ ತ್ತಾಪಪಡುವೆ, ನಂಟೂ ಗಂಟೂ ಎರಡನ್ನೂ ಕಳೆದುಕೊಳ್ಳುವೆ ಅನ್ನುವ ಸೂಚನೆ ಯುಳ್ಳ ಮುಂದಿನ ಮಾತು ಹೇಳಿದಳು)

ಹೆಣ್ಣಾಕೊಡದಿದ್ರೇ ಸಿಕ್ಕಿಲ್ಲ ತಮ್ಮೈಯ್ಯ ನಿನ್ನೂರಮೇಲೇ ಬರುತೀ ನೋ | ಬಣ್ಣಾವ ಉಡಿಸೀ ಬರುವಾಗ ತಮ್ಮೈಯ್ಯ ಬಾಯಾಬಿಡುತೀಯೋ ತಮ್ಮೈಯ್ಯ ನೀನು |

## ಸಂಸಾರಭಾರವು ಮೇಲೆ ಬಿದ್ದನಂತರ

ಅಕ್ಕಾನಾಮನೆಗೇ ತಮ್ಮೈಯ್ಯಬಂದವನೆ ಬ್ಯಾಗಾನೇಳಮ್ಮಾ ಮದು ವೇಗೇ | ಹಳ್ಳಕಾಯಿಮುರದಿಲ್ಲ ಚಿಟ್ಟನ್ಯಾಗ್ರಿಬೆರಸಿಲ್ಲ ನಾನ್ಯಾಗೆ ಬರಲಪ್ಪ ಮದುವೇಗೇ | ಹಳ್ಳಕಾಯುಮುರುದೇನು ನಲ್ಲೀತೊಗರಿಕುಯಿಸೇನು ತಡ್ಡೀತಳ್ಳ ಬಡಿಸೇನು ಬೇಗನೇಳಕ್ಕಾ ನೀ ಬೇಗನೇಳಕ್ಕಾ | ಬಾಲನಕಿವಿಗೇ ಕಡಕಿಲ್ಲಮುರಿ ಯಿಲ್ಲ ನಾನ್ಯಾಗೆ ಬರಲಪ್ಪ ಮದುವೇಗೇ | ಬಾಲನಕಿವಿಗೇ ಕಡಕುಂಟು ಮುರಿ ಯುಂಟು ಏಳಕ್ಕಬೇಗನೆ ಮದುವೇಗೇ | ಆಲದಮರದಂಡಿ ಹೋರಿವೈಯ್ಯೊಭಾ ವೈಯ್ಯ ಹೋಗಿಬತ್ತೀನ್ನನ್ನಾತವರೀಗೇ | ಮಾವಿನಮರದಂಡಿ ಹೋರಿವೈಯ್ಯೊ ವೈದರಸೆ ಹೋಗಿಬತ್ತೀನ್ನನ್ನಾತವರೀಗೇ | ತವರೊಳ್ಳೇದೆಂದೂ ತವರಲ್ಲಿ ಇರ ಬ್ಯಾಡಾ ತವರೀಗೇತವರೂ ಪ್ರತಿತವರೂ | ತವರೀಗೇತವರೂ ನಾವೀವಿತಾಯಮ್ಮ

ಸೀನೈದೂ ದಿನದಲ್ಲೀ ಹಿಂತಿರುಗಿಬಾರವ್ಮಾ | ಪಟ್ಟೀಮಂಚದಮೇಲೆ ಮಲಗಿರು ವ್ವೋವಮಾವೈಯ್ಯ ಹೋ.......................................................ಗೇ | ತವರೀಗೇತವರೂ ಪ್ರತಿತವರುನಾವೀವಿ ನಾಲ್ಕೂದೀನದಲ್ಲೀ ಬಾರವ್ಮಮಗಳೇ | ಮಾಳಿಗೆಮೇಲಿರುವ್ವೋ ಅತ್ಯವ್ಮನವರೆ ಹೋ..................................ಗೇ | ತ.........................................ವಿ ಮೂರೂದಿನದಲ್ಲೀ ಬಾರವ್ಮಾ ಮಗಳೇ | ಹೋಯ್ತಾನಿಹೊಸಲೇ ಬತ್ತೀನಿಬಾಗ್ಲೇ ಹೊಯ್ತಾನಿ ನನ್ನಾತವರೀಗೇ | ತವ ರಿಗೇ.........................ವಿ ಎರಡೇ ದಿನದಲ್ಲೀ ಬಾರೋಸಂತಾಯಿ | ಚೌಕಾದ ಕೋಣೇಯ ಮೂಲೇಲಿರ್‍ವೊ ಲಕ್ಷ್ಮೀದೇವೀನಾ ಹೋಗೀಬರುತೀನೀ| ಹೋಗೀ ಬಾರಕ್ಕಾ ಹೋಗೀಬಾರೇತಂಗೀ ಒಂದೂದಿನದಲ್ಲೀ ಬಾರವ್ಮಾಮಗಳೇ | ಕೆಳಗೇ ಕೆಂಬಟ್ಟೀ ಮೇಲೆ ಚಿತ್ತೇಬಿಸಿಲು ಕಾಲುನಡೆಗೇಲೀ ಬರಲಾರೇ |

(ತನ್ನ ಗಂಡನು ಈ ಬಿಸಲಲ್ಲಿ ಬರಲಾರ ಅವನು ಬಂದರೆ ತಾನೂ ಬರು ತ್ತೀನಿ ಎಂತಲೋ ಏನೋ ಅಭಿಪ್ರಾಯ)

ಕಾಲೂನಡಗೇಲೀಬರಲಾರೆತವ್ಮೈಯ್ಯ ಬ್ಯಾಗಾನೇತರಿಸೋ ಅಂದಲವಾ | ಅಕ್ಕ ನಿಗೇ ಅಂದಾಲಾ ಮಕ್ಕಳಿಗೆ ಪಲ್ಲಕ್ಕಿಭಾವನಿಗ್ಬೇರೇ ಸಿಡಿಕುದುರೇ | ಕಾಣಾಲ್ಬಂ ದೇವ್ವೋ ನಿವ್ಮಾಕರುಣಾಳ್ಳಿ ಪ್ರಾಣಾವನ್ನೂಕಾಯೂವಂತ ಜಾಣಹನೂಮಂತಾ ಸ್ವಾಮಿಾ ||ಕಾ|| ಹನುಮಪ್ಪೆಂಬೋನುನೇಮ ಮೂಗಿನ್ಮೇಗಲನಾವ ಅಕ್ಷಸ್ಕೊಂ ದ್ಯಲ್ಲೋ ಭೀಮ || ಕಾ || ಹನುಮಪ್ಪೆಂಬೋನು ಶಿಟ್ಟು ನೀರಿಗ್ಬಿದ್ದರೂ ಪೆಟ್ಟು ರಾಮರ್‍ಪಾಣಾದಿಪೆಟ್ಟು ಸೀತಾಜಾನಕೀತಂದ | ಹನುಮಪ್ಪೆಂಬೋನು ಉದ್ದ ಏಳೂ ಎಂದರೆ ಎದ್ದ ಏಳೂಲೋಕಾವಗೆದ್ದ ಸೀತಾಜಾನಕೀತಂದ || ಕಾ || ಹನುಮಪ್ಪೆಂ ಬೋನು ಪ್ರಳಯ ಹಾಕಲ್ಕಾಲೀಗೇಬಳೆಯ ತಂದಸ್ವಾಮಿ ನೋಡಲ್ಬಂದೇವ್ವೋ ಸ್ವಾಮಿ ಕಾಣಲ್ಬಂದೇವ್ವೋ | ಹನುಮಪ್ಪೆಂಬೋನು ಬಂಟ...................ತವ್ಮ ತಾಯಿಕೂತಿದ್ಬಳಿಗೆ ದಾಟ್ಯಾಸ್ತಂಪೇಯಹೊಳೆಯಾ ||

## ಚಾಮುಂಡೀದೇವೀರಿ ನಂಜುಂಡ ದೇವರನ್ನು ಕುರಿತದ್ದು

ಚಾಮುಂಡ್ಯೆಂಬೋಳೂ ಸೀಮೇಗೇ ದೊಡ್ಡವಳು ಮಾಯಾದಾಬೂದೀಸೆರ ಗಲ್ಲಿ | ಮಾಯಾದಾಬೂದೀ ಸೆರಗಲ್ಲಿಕಟ್ಗೊಂಡು ನ್ಯಾಯಕ್ಕೊಂದಾಗೀ ಹೊರ ಟಾಳೂ | ಪಟ್ಟಣಕ್ಕೊಂಚಾಗೀ ಹುಟ್ಟೀತು ವ್ಮೈಸೂರು ಬೆಟ್ಟಾದಾಚಾಮುಂಡೀ ದಯದಿಂದ | ಪಟ್ಟಣದ ಚಾಮುಂಡೀದಯದಿಂದ ದೊರೆಗೋಳು ಪಟ್ಣಾವಾಳ್ಯಾ

ರೂ ಅನುಗಾಲಾ | ಬೆಟ್ಟದಮೇಲವ್ವೇ ಬಿಟುಮಂಡೇಚಾಮುಂಡಿ ತೊಟ್ಟವ್ವೇ ಹುಲಿಯಾಚರುಮಾವಾ | ತೊಟ್ಟವ್ವೇ ಹುಲಿಯಾಚರುಮಾವಾ ಚಾಮುಂಡೀಮೆಟ್ಟೇನಿಂದವ್ವೇರಣದಲ್ಲಿ | ಎತ್ತೂತರಹೋಗೀ ಹತ್ತೂರಾಜ್ಯವತಿರುಗಿ ಹೊತ್ತೂತಪ್ಪೀತೂ ಎಲೆಬಾಲೆ | ಹೊತ್ತಾತಪ್ಪೀತೂ ಎಲೆಬಾಲೆಚಾಮುಂಡಿ ತಾವೂಕೊಡೀರೋತಳಗೇವೂ | ಹೋರೀತರಾಕ್ಹೋಗೀ ಆರೂರಾಜ್ಯವಾತಿರುಗಿ ವ್ಯಾಳ್ಯಾತಪ್ಪೀತೂ ಎಲೆಬಾಲೇ | ವ್ಯಾಳ್ಯಾತಪ್ಪಿತೂ ಎಲೆಬಾಲೇಚಾಮುಂಡಿ ತಾವೂಕೊಟ್ಟಾರೇತಳಿಗೇವೂ | ತಾವೂಕೊಡಾಕೇ ನೀವ್ಯಾರುನಾವ್ಯಾರೂ ಇರುವಾಪಟ್ಟಣದಾ ಹೆಸರ್ಹೇಳೀ | ಇರುವಾಪಟ್ಟಣದಾ ಹೆಸರ್ಹೇಳಿ ಜಂಗಮರೆ ಚಾಮುಂಡೀಕದವಾ ತೆಗೆವಾಳೂ | ನಂಜನ್ಗೂಡೋರೂ ತೆಂಗಿನ್ತೋಪ್ನೋರು ಗೊಂಬೇತೇರಲ್ಲೀ ಮೆರೆಯೋರೂ | ಗೊಂಬೇತೇರಲ್ಲೀ ಮೆರೆಯೋ ನಂಜಲಗೂಡ ನಂಜುಂಡೂಕಾಣೇ ಕದತೇಗೀಯೇ|ಇದೇಸುನನ್ಸ್ವಾಮಿ ಇದೇನೂನನ್ಗುರುವೆ ನಿಮ್ಮಾಯಾ ನಮ್ಗೇ ತಿಳಿಯಾದೋ | ನಿಮ್ಮಾಯಾನಮ್ಗೇ ತಿಳಿಯಾದು ನಂಜುಂಡುಮಂಕೀನಾಬೂದೀ ನಿಂಕೈಲೀ|ಮಂಕೀನಾಬೂದೀ ನಿಂಕೈಲೀ ಇರುವಾಗ ಚಾಮುಂಡೀ ಕದವಾ ತೆಗಿಬಲ್ಲೆ| ಮಂಕೀನಾಬೂದಿಲ್ಲ ಮಾಯಾವೂನಮಗಿಲ್ಲ ತೆಗೆಯೆ ವಜ್ಜರದಾ ಅಗಣೀಯಾ | ಅಗಣೀತೆಗ್ಯಾಕೇ ತೆಗಿಬಹ್ದುನನ್ಸ್ವಾಮಿ ಹೊದ್ದಾದೇವಾಂಗಾ ಅಳಿದೀಡೀ | ಹೊದ್ದಾದೇವಾಂಗಾ(ಬಟ್ಟೆ)ಅಳಿದಿಟ್ರೆನಂಜುಂಡು ಈವಾಗ್ಲೇ ಕದವಾ ತೆಗೆದೇನೂ | ಶಿವದಾರ್ಕಡ್ಕೀಕೊಳ್ಳೆ ಬೆಳ್ಳೀಉಡ್ದಾರ್ಕೊಳ್ಳೆ ಈವಾಗ್ಲೇಕದವಾತೆಗೆಹೆಣ್ಣೇ| ಇದೇನೂ ನನ್ಸ್ವಾಮಿ ಇದೇನೂ ನನ್ಗುರುವೇ ಇದೇನೂ ಜಂಗಮರೆ ನಿಮ್ಮಾಯೇ | ಚಾಮುಂಡ್ಯಂಬೋಳೂ ಸೀಮೇಗೇದೊಡ್ಡವಳು ನಿನ್ಮಾಯೇನನಗೇ ತಿಳಿಯಾದೂ| ಮಂಕೂಬೂದೀಯೂ ನಿನ್ಕೈಲೇ ಇರುವೂದೂ ಮಾಯ್ಯಾಕತಿ ಕದವಾ ತೆಗೆಹೆಣ್ಣೇ| ಚಿನ್ನದ್ಕಿರೀಟ್ಕೊಳ್ಳೆ ಪಾದಾದ್ಗೆಜ್ಜೇಕೊಳ್ಳೆ ಎರಾಕೇ ಕುದ್ರೇಕಳ್ವೇನು | ಎರಾಕೇ ಕುದ್ರೇ ಕಳ್ವೇನೂ ಎಲೆಬಾಲೆ ಮಾಯ್ಯಾಕತೀಹುಡುಗೀ ಕದತೆಗೆಯೇ|ಕದವಾನೇ ತೆಗೆದಾಳೂ ಕರವಾನೇ ಮುಗಿದಾಳೂ ಬನ್ನೀರೀ ಸ್ವಾಮಿ ಅರಮಾನೇಗೇ | ಬನ್ನೀರಿ ಸ್ವಾಮಿ ಅರಮಾನೇ ಮಂಚದ್ಮೇಲೆ ಸ್ವಾಮಿನಂಜುಂಡೂ ವರಗೀದಾರೂ | ಸ್ವಾಮಿನಂಜುಂಡೂಗೂ ಬಾಲೇ ಚಾಮುಂಡೀಗೂ ಸಣ್ಣಾಮಂಚಾದಲ್ಲೀ ಪಗಡೇಯೂ | ಸಣ್ಣಾಮಂಚಾದಲ್ಲೀ ಪಗಡೇಯ ಆಡ್ವಾಗ ಸ್ವಾಮಿ ನಂಜುಂಡೂ ಸೋತೂ ಕೂತಾನೂ | ಸ್ವಾಮಿ ನಂಜುಂಡೂ ಸೋತಾರೂ ಅನ್ನುತ್ತಾ ಶಿವದಾ

ಕ್ಕರ್ಡಿಗೀಕೇ ಅಳಿದಾಳೂ | ಶಿವದಾರ್ಕರ್ಡಿಗೀಕೆ ಅಳಕೊಂಡು ಚಾಮುಂಡಿ ಸಾಲೂ ಮಂಚ್ದಲ್ಲಿ ಮಲಗೀದಾರೂ|ಸಾಲೂಮಂಚ್ದಲ್ಲೀ ಮಲಗೀರೀ ಅಂತಾವ ಹಾಗಂದ ನುಡಿಯಾ ನುಡಿದಾಳೂ | ಇದೇನು ನನ್ಸ್ವಾಮಿಾ ಇದೇನೂ ನನ್ಗುರುವೆ ನಿಮ್ಮಾ ಯೇ ನಮಗೇ ತಿಳಿಯಾದೂ | ನಿಮ್ಮಾಯೆ ನಮಗೇ ತಿಳಿಯಾದೂ ಜಂಗಮರೇ ಬೆಚ್ಚಹುದೇನಮ್ಮಾ ಅರ್ಮಾನೇಯಲ್ಲೀ | ಬೆಚ್ಚಹುದೇನಮ್ಮಾ ಬೆಟ್ಟಾದ ಅರಮಾನೇ ಮಂಚದಮೇಲ್ಲೀವೂ ಏನಾನುಕಂಡೀರೀ | ಸಪ್ಪಟ್ಸರ್ಪ್ಪೊತ್ನಲ್ಲೀ ನಿದ್ರೇಭೋಗೀ ನಲ್ಲಿ ದೇವೀರೀಸ್ವಪ್ನಾಕೇಬಂದೀದ್ಲೂ | ದೇವೀರೀಸ್ವಪ್ನಾಕೇ ಬಂದಿದ್ಲೂ ಚಾಮುಂ ಡಿ ಬೆಚ್ಚೀದೇ ನಿಮ್ಮಾ ಅರಮನ್ನೀ | ಬೆಚ್ಚಿದ್ದೇ ನಿಮ್ಮಾ ಅರಮನ್ನಿ ಚಾಮುಂಡಿ ತೆಗಿ ಯೆ ವಜ್ಜುರದಾ ಅಗಣೀಯಾ | ವಜ್ಜುರದ ಅಗಣೀ ದುಬುದೂಬು ಅನ್ನಾಗ ಕದ್ದೂ ಹೋಗೋರ್ಗೀ ಬಲುಬಾಯಿ | ಕದ್ದೂಹೋಗೋರ್ಗೀ ಬಲುಬಾಯಿನಂಜುಂಡು ಇದ್ದೂಹೋಗಿ ನಿಮ್ಸಾಗಳಿಗೇಲಿ | ಇದ್ದೂಹೋಗೋದೂ ತರವೇನೇ ಚಾಮುಂಡಿ ಚಿನ್ನದಕಿರೀಟಾ ಕಳುವೇನೂ | ಚಿನ್ನದಕಿರೀಟಾ ಕಳುಹೂವೆ ಚಾಮುಂಡೀ ನೀನ್ಹಿ ಡಿದಾ ಶಿರಗಾನೂ ಬಿಡುಹೆಣ್ಣೆ | ಶಿರಗಾಬಿಡೂವಾಕೆ ಸುಮ್ಮಾನೇ ಬಿಡುವಾಳೇ ಹೊದ್ದಾದೇವಾಂಗಾ ಅಳಿದೀಡಿ | ದೇವಾಂಗಾಕೊಳ್ಳೀ ಶಿವ್ದಾರ್ಕರ್ಡಿಗೀಕೇಕೊಳ್ಳಿ ಹಿಡಿದಿರುವಶರಗಾ ಬಿಡುಹೆಣ್ಣೆ | ಹಿಡಿದಾಶಿರಗಾನೂ ಬಿಟ್ಟಾರೇ ಚಾಮುಂಡಿ ಹೊರಟೇನು ನನ್ನಾ ಅರಮಾನೇಗೇ|ಮಾಯ್ಕಾರ ಸಂಜುಂಡು ನಿನ್ನಾಯೆ ನಾಣರಿ ಯೆ ಕಳ್ಳಾನಂಜುಂಡೂ ಕದ್ದೋಗೂ | ನೀಚಾನಂಜುಂಡೂ ಕದ್ದೋಗೂ | ಚಿನ್ನಾ ದ್ದೊಲ್ರಾವೂ ಬೆಳ್ಳಿಯಾ ಕೊಳಗಾವೂ ಏರಾಕೆ ಕುದುರೇ ಕಳುವೇನು | ತೊಡ್ವಾ ಕೆ ನಿಲ್ವಂಗಿ ಕಳುವೇನುಚಾಮುಂಡಿ ಪಾದಾಕೆ ಗೆಜ್ಜೇಕಳುವೇನೂ|ಚಿನ್ನದ್ಕಿರೀಟಾ ಕಳುವೇನು ಚಾಮುಂಡೀ ಇಂದಿಲ್ಲನಾಳೇ ಬರುವೇನೂ | ಇದೇನು ನನ್ಸ್ವಾಮಿಾ ಇದೇನೂ ನನ್ಗುರುವೆ ಕಳ್ಳಾನಂಜುಂಡೂ ಕಡೆದ್ದೋಗೂ |

(ಇತ್ತಲಾಗಿ ನಂಜನಗೂಡಿನಲ್ಲಿ ದೇವೀರಿಯ ಅರಮನೆಯಲ್ಲಿ)

ಬಾಲಕ್ಸಪ್ವಣ್ಣಾ ಬಂಗಾರ್ದಈರಣ್ಣಾ ನಿನ್ಸ್ವಾಮಿ ಎಲ್ಲೀಗೇ ಕಳುಹೀದೇ | ಮಲ್ಲೀ ಗೇ ವನಕ್ಹೋಗೀ ಮಲ್ಲ್ಗೂವ ಕೂಯ್ಕೊಂಡು ಮೆಲ್ಲಾಗೇನಂಜುಂಡೂ ಬರುತಾ ರೇ | ಮೆಲ್ಲಾಗೇನಂಜುಂಡೂ ಬರುತಾರೆ ದೇವೀರೀ ಚಿಂತೀಸಬೇಡಾ ಮನದಲ್ಲೀ| ಮಳೆಗಾಲ್ಮಲ್ಲೀಗೇ ಬೇಸೀಗೇಸಂಪೀಗೆ ಬೆಳೆಯಾದೆ ಬೆಳೆಯೋ ಬಿಳಿದುಂಬೇ | ಬೆಳೆ ಯಾದೆ ಬೆಳೆಯೋ (ಹೆಚ್ಚಾಗಿ) ಬಿಳುದುಂಭೆ ಪುಷ್ಪಾವೂ ಬಿದ್ದಾವೇನಮ್ಮಾ ಅರ

ಮನ್ಲೀ | ಬಾಕಲ್ಬಸ್ವಣ್ಣಾ ಬಂಗಾರ್ದ ಈರಣ್ಣ ಸ್ವಾಮಿಾನ ಎಲ್ಲೀಗೇ ಕಳುಹೀದಿರೀ | ಸಂಪೀಗ್ವನಾಕ್ಹೋಗಿ ಸಂಪ್ಗೀಯ ಕೂಯ್ಕೊಂಡು ತಂಪ್ನಲ್ಲಿ ನಂಜುಂಡೂ ಬರುತಾರೇ | ತಂಪ್ನಲ್ಲಿ ನಂಜುಂಡೂ ಬರುತಾರೇ ದೇವೀರೀ ಚಿಂತೀಸಾಬೇಡಾ ಮನದಲ್ಲೀ | ಚಾಮುಂಡೀಮನೆಗೇ ನಂಜುಂಡ್ಹೋದ್ಸುದ್ದೀಯ ದೇವೀರೀಗ್ಯಾರೂ ತಿಳಿಸ್ಹೋರೂ | ದೇವೀರೀಗ್ಯಾರೂ ತಿಳಿಸ್ಹೋರ್ಮೆಲ್ಲಸ್ಮೊಲೆ ಕೊಂಡ್ಯಾರ (ಕೋಲ್ಕಾರ) ಚನ್ನಾಬಸವೈಯ್ಯ | ಕೊಂಡ್ಯಾರ ಚನ್ನಾಬಸವೈಯ್ಯ ತಾನ್ಹೋಗಿ ದೇವೀರೀಮನ್ಲೀ ಮೆರಸ್ಯಾನೂ |

(ಇಷ್ಟುಹೊತ್ತಿಗೆ ಸ್ವಾಮಿಯು ಬಂದು ಬಾಗಿಲು ತಟ್ಟಲು)

ಇದೇನು ನನ್ಸ್ವಾಮಿಾ ಇದೇನು ನನ್ನೊಡೆಯ ನಿಮ್ಮಾಯೆ ನಮಗೇ ತಿಳಿಯಾದೋ| ಕಂದಣ್ಣಾನಾಣೇ ದೇವೀರೀ ಹೋಗಿದ್ದೆ ಹಾಲೂಭೋಜನದಾಪರವೀಗೆ|ಹಂದೀಯ ತಿನ್ನೋದೊಂಜಾತಿಮನೆಗ್ಹೋಗಿ ಕಂದಣ್ಣಾನಾಣೇ ಇಡಬಹುದೇ | ಹಂದೀಸಾಕವ್ನೇ ದೊಂಬರಿಗೆ ಕೊಟ್ಟವಳೆ ಕಂದಣ್ಣಾನಾಣೇ ಇಡಬಹೂದೇ | ಕೋಳೀಯತಿನ್ನೋ ಕೊರ್ಮಾತೀಮನೆಗ್ಹೋಗೀ ಕಂದಣ್ಣಾನಾಣೇ ಇಡಬಾಹೂದೇ | ಕಂದಣ್ಣಾನಾಣೇದೇವೀರಿ ಹೋಗಿದ್ದೆ ತುಪ್ಪಾಭೋಜನದಾಪರವೀಗೇ | ತುಪ್ಪಾಭೋಜನದಾಪರವೀಗೇಹೋಗೀ ನಿಮಸಾಗಳಿಗೇಲೀ ಬಂದಿಪ್ನೀ | ಕೋಳೀಸಾಕವ್ನೇ ಕೊರ್ಮರಿಗೆಕೊಟ್ಟವ್ನೇ ಕಡೆಯಾಮನೆಯಲ್ಲೀವರಗೀರಿ | ಕಡೆಯಾಮನೆಯಲ್ಲೀ ವರ್ಗೀರಿ ಎನ್ನುತ್ತಾ ಹಾಗಾದನುಡಿಯಾ ನುಡಿದಾಳೂ | ಹಾಗೆಂದಾನುಡಿಯಾ ನುಡಿದೂ ದೇವೀರಿಯು ಬಸವಣ್ಣಬಳಿಗೇ ಹೊರಟಾಳೂ | ಬಾಲೇದೇವೀರಿಗೂ ಗಿರಿಜೇಪಾರ್ವತಿ ತಾಯ್ಗೂ ಚಾಮುಂಡೀಮನೆಗೇ ಹೋದದ್ದಾ | ಚಾಮುಂಡೀಮನೆಗೇಹೋದದ್ದನಂಜುಂಡು ದೇವೀರೀಗ್ಯಾರೂ ಹೇಳ್ದೋರೂ | ದೇವೀರೀಗ್ಯಾರೂ ತಿಳಿಸ್ಹೋರ್ಮೆಲ್ಲಸ್ಮೊಲೆ ಕೊಂಡ್ಯಾರಾ (ಕೋಲ್ಕಾರ) ಚನ್ನಾಬಸವೈಯ್ಯಾ | ಮೂಡಲಸೀಮಿಂದಾ ನೂರ್ಜನ್ಸಂಗವುರ್ಕಸಿ ಉಕ್ಕಡಮೂಗ್ದಾರಾಹಾಕ್ಸೀನೂ | ಉಕ್ಕಡಮೂಗ್ದಾರ್ಕೊಟ್ಟು ದಸೀಹಗ್ಗವಕೊಟ್ಟು ಕಳ್ಯಾಬಸವಾನಾ ಅರಸ್ಯಾರೂ | ಕದ್ದೂಕಡಲೇತಿಂದು ಇಬ್ಬಾಣಾಹುಲ್ತಿಂದು ಕದ್ದೂಹೋಗ್ಯವ್ನೇ ಬಸವೈಯಾ | ಕದ್ದೂಹೋಗ್ಯವ್ನೇಬಸವೈಯ್ಮೆಲ್ಲಸ್ಮೊಲೇ ಎದ್ದಾಬೋರೇಲೀಮಲಗ್ಯಾವ್ನೇ | ಬಸವಸ್ಕರ್ಸೀರೋ ಬಾಕ್ಲಲ್ಲಿನಿಲ್ಸೀರೋ ಕದ್ದೂಹೋಗ್ಯವ್ನೇಬಸವೈಯ್ಯಾ | ಕದ್ದೂಹೋಗಿರುವಾ ಬಸವೈಯ್ಗೆ ನಂಜುಂಡು ಉಕ್ಕಡಮೂಗ್ದಾರಾ ಹಾಕ್ಸ್ಯನೂ |

ಕೊಂಡ್ಕಾರಚನ್ನಾಬಸ್ವಾನಾಡಿದಮಾತ್ಗೆ ಉತ್ಸಾಹೊಲವಾನೇ ತುಳಸೀರೋ |
......................................... ಮುಂದಲಮೂರ್ಧಲ್ಲಾಮುರಸೀರೋ|
......................................... ಒಣರಾಗಿಕಡ್ಡೀ ಕಡಿಸೀರಿ |
......................................... ಕಡೆಯಾಬಾಕ್ಲಲ್ಲೀ ಕಟ್ಟೀರಿ |
......................................... ಮಡ್ಕೀಮಸೀನೀರ ಕುಡಿಸೀರಿ |

(ಈರೀತಿ ಸಂಜುಂಡುವು ಕೊಟ್ಟ ಶಿಕ್ಷೆಯನ್ನು ಕೇಳಿ ಗಿರಿಜೆಯು ಮನಮರುಗಿ ಹೇಳುವಳು)

ಬಸವಾನ್ನುಟ್ಟಾಲೀ ಹೊಸಕೋಟೆಕಟ್ಟಾಲಿ ರಸಬಾಳೆ ಕಬ್ಬೂ ಬೆಳೆಯಾಲಿ | ರಸಬಾಳೇಕಬ್ಬೂಬೆಳೆಯಾಲ್ಲನ್ಸಸ್ವಣ್ಣಾನ ಬಸವಣ್ಣ ಹಿಂಡೂ ಹಿಳುಗಾಲಿ (ಹೆಚ್ಚಲಿ) ಬಸವಣ್ಣ ಹಿಂಡೂ ಹಿಳುಗಾಲಿ ಎನುತಾವ ಹಾಗೆಂದ ಹರಕೇ ಹರಸ್ಯಾಳು ||

## ಚಲುವರಾಯಸ್ವಾಮಿಯನ್ನು ಕುರಿತು

ಉದ್ದಿನ್ನಾಕಿಯ್ದಂಗೇ ತಿದ್ದಿದ್ದೀಲೀನಾಮ ವಿಪ್ರರ್ಬೀದಿಂದಾ ಬರುವೋನೇ | ವಿಪ್ರರ್ಬೀದಿಂದಾ ಬರುವೋ ಚಲುವೈಯ್ಯಾನಾ ಕುಲವಾ ಕೇಳೋಳೂ ವರಸಂದೀ | ಕುಲವಾನೂ ಏನ್ಕೇಳಿ ಕುಲದಲ್ವೈರುಕರ್ಮಗ್ಳೆ ಕುಲದಲ್ವೈವೃಷ್ಣವರಾ ಮಗಕಾಣೇ | ಬಾಳೇಕಾಯ್ದಂಗೇ ತೋಳಲ್ನೀಲೀನಾಮ ಬಾಲೇರ್ಬೀದಿಂದಾ ಬರುವಾನೇ | ಬಾಲೇರ್ಬೀದಿಂದಾ ಬರುವಾ ಚಲುವೈಯ್ಯಾನಾ ಕಂಡೂ ಹೊಡಿಯೋರೂ ಗಡಿಯಿಲ್ಲ ? | ಕಂಡೂಹೊಡ್ಯೋಕೇ ಜೋಳ್ಳೊನ್ನಾಕದ್ನೀನೆ ಕಂಡೂ ಹೊಡ್ಯೋನಾ ಹೆಸರ್ಹೇಳೆ | ಹೆಸರೇನ್ಹೇಳಾಲೀ ದಶವಂತರಾಯಾನಾ ಹಸುರೂಪಟ್ಟಣವಾಸೂರೇಯಾ | ಹಸರೂಪಟ್ಟಣವಾ ಹಗಲೂಸೂರೇಮಾಡಿ ದಿಳ್ಳ್ಯೋರಹೆಣ್ಣಾ ಸೆರೆತಂದಾ | ದಿಳ್ಳ್ಯೋರಹೆಣ್ಣಾಸೆರೆತಂದ ಚಲುವೈಯ್ಯ ದಶವಂತ (ರಥ) ರಾಯಾ ಅವನ್ಹೆಸಾರೂ| ಎಳನೀರ್ಕಜ್ಜಾಣಾ ಎಡೆಯಲ್ಲಿತಂಬೂರಿ ತೆಲುಗಾರಾ ಬೀದಿಂದಾ ಬರುವೋನೇ|ತೆಲುಗರ್ಬೀದಿಂದಾ ಬರುವಾ ಚನ್ನಿಗ್ರಾಯ್ನ ಕುಲವಾ ಕೇಳೋಳೂ ವರಸಂದೀ|ಎತ್ತೂಕಾಯೋನ್ಕುಟ್ಟಿ ಮೆಚ್ಚೋದಾಳ್ವರನಂದಿ ವೈಷ್ಣವರಹುಡ್ಗಾ ಚಲುವೈಯ್ಯಾ | ವೊಪ್ಪಮರಾಹುಡುಗಾ ಚಲುವೈಯ್ನ ಮೆಚ್ಚೀ ವರಸಂದಿಹೋದಾಳೂ ಅರಗಾಳೀಗೇ | ಎಮ್ಮೆಕಾಯೋನ ಮೆಚ್ಚೋದಾಕ್ವರನಂದಿ.........................................|
ಆಡೂಕಾಯೋನಾ ಕೂಡ್ಳೋದಾಳ್ವರಸಂದೀ....................................... |

ರಂಬೆವರನಂದೀ ಗಂಧರ್ವ್ಮಕ್ಕೆ ಉಳ್ಕೊಕು ಎಷ್ಟೊಂದು ರಾಯಾಮಡದೀರು|ಎಷ್ಟೊಂ ದುರಾಯಾ ಮಡದೀರು ಅನುತಾವ ಕಡಗಣ್ಣಲ್ಕಣ್ಣೀರ ಕೆಡ್ವ್ಯಾಳೂ | ನಾಚೀರಿ ತೊಳಸೀರಿ ಯದುಗೀರೀ ಗಜಲಕ್ಷ್ಮಿ ಸೀಸೇರೀ ನನಗೇ ಐದೂಮಂದಿ | ಸೀಸೇರೀ ನನಗೇ ಐವಾರು ಎಲೆಹೆಣ್ಣೆ ಎಷ್ಟೊ ತ್ಸರನಂದೀ ಕಡುದುಃಖ | ಅವರೆಲ್ಲಾ ಕಂಡಾರೆ ಅರೆಗಣ್ಣು ವರನಂದಿ ನಿನ್ನಾ ಕಂಡಾರೇ ನಿಜಗಣ್ಣು | ಕಡುದುಃಖನವಾಗಿಲ್ಲ ಕಣ್ಣೀ ರುನವುಗಿಲ್ಲ ಎಂದೀನಾ ಮನಸೂ ನಿಮಗಿಲ್ಲಾ | ಎಂದೀನಾ ಮನಸೂ ನಿಮಗಿಲ್ಲ ಚಲುವೈಯ್ಯ ಹಾಗಂತನಟ್ಗೇನರಾಕ್ಕ್ಯಳೂ | ಕೆಟ್ಟೇನೆಂದಾಳೂ ದುಃಖಾವ ಮಾ ಡ್ಯಾಳೂ ಛಟ್ಟಂತಾಸೊಟ್ಕೇ ಸೊರ್ಕ್ಯಾಳೂ | ವೈಕುಂಠಾಗಿರಿಗೇ ಬರಹೋಗುನ ನ್ಗುರುವು ರಾಮಾಂಜಾಚಾರ್ರ್ಯೂ ಬರುವಾರೂ | ರಾಮಾಂಜಾಚಾರ್ರ್ಯೂ ನಮ್ಗು ರ್ವಿಸ್ಕುಟ್ಲೀಳಿ ನಾಮಾ ತುಂಬೇವ್ರೂ ನಮ್ಗುರೀಗೆಲ್ಲಾ ||

## ಭೈರವ

ಒಡೆಯಾ ಭೈರುವನಾ ದುಡವಾ ನೋಡಾಸ್ಬನ್ನಿ ಧೃಡವಂತರಮನ್ಗೇ ಹಸ್ಬ್ಯಂ ದಾ ದೃಢವಂತರ್ಮನ್ಗೇ ಹಸ್ಬ್ಯಂದ ಭೈರವನಾ ಎಡೆಯಾಮೇಲಾ ಉಲೂ ಕರೆದಾವ್ರೂ| ಪಾಶಾಕಾಶಿವ್ನೀ ಪಾತ್ರೇಲೀತುಂಬಿವ್ನಿ ಮಾತನಾಡೋಜೋಗೀ ಉಣಬನ್ನೀ | ಮಾತಾನಾಡೋಜೋಗೀ ಉಣಬನ್ನಿ ನಮ್ಮನೆಯ ಹಸುಮಕ್ಕಾಳೆಲ್ಲಾ ಹಸಿದಾವೇ| ತುಪ್ಪಾಕಾಯ್ಸಿವ್ನೀ ಬಟ್ಟಾಲ್ಬೆಳ್ಗಿವ್ನೀ ಮತ್ತೇ ನಮಗುರುವೇ ಊಟಕ್ಕೇಬನ್ನೀ | ಹಿಡಿಹಿಡಿಹಗ್ಗವ ಬಿಡಿಬಿಡಿಹೊರ್ಜೆಯ ಬಿದಿರಾಚೇಣೂರಾ ನಿನ್ನಮನೆದೊರ್ಮಗಾ | ಬಿದಿರಾಚೇಣೂರಾ ನಿನ್ಮಾಗಾಬಂದಲ್ದೆ ಭೈರವನ ತೇರೂ ಹರಿಯಾದೂ | ನಾಕೂ ಮೂಲೀಗೇ ನಾಕೂ ಬೆಳ್ಳಿಯಗಂಟೆ ನಾಕೂಬೇಕೆಂಬೋಸರಪಾಣೀ | ನಾಕೂಬೇ ಕೆಂಬೋ ಸರ್ಪಾಣಿಭೈರುವನ್ತೇರು ಲೋಕಾತಲ್ಲಣಿಸೇ ಹರಿದಾವ್ರೂ | ಯಾಕೀರ್ರೀ ಸ್ವಾಮಿಾ ಕ್ವಾಪಾವ್ರೂ ನನಮೇಲೆ ಲೋಕಾನಾಳೋನೂ ಭೈರೂವಾ | ಲೋಕಾ ನಾಳೂವಾ ಭೈರುವನಕಂಡಾರೇ ಹೆಣ್ಣೂಮಕ್ಕಾಳೆಲ್ಲಾ ಹೆದರೂವಾರೂ | ನಾನೇ ನಾಡೀದೇ ನಾನಿನ್ನಪಾಡೀದೆ ನಾನಿನ್ನನೋಡೀ ಸಲಗೀದೇ | ನಾನಿನ್ನನೋಡೀಸಲ ಗೀದೇಭೈರೂವ ಸ್ವಾಮಿಾದೊಡ್ಡವನೆಂದೂ ಮಾರೀಬಿದ್ದೆ| ಎಲ್ಲಾರಾತೇರೂ ಮೆಲ್ಲಾ ನೇ ಹರಿಯಾಲೀ ಒಲ್ಲಾವಳಿಕಾರಾ ಭೈರೂವಾ | ಬಲ್ಲಾವಳಿಕಾರ ಭೈರೂವಾನಿಮ ತೇರು ಬೆಲ್ಲಾದಂಗಡಿಯಲ್ಲೀ ಹರಿಯಾಲೀ | ಬಂಟನಕಳ್ಳೀವ್ರೂ ಮಂಟೇಲಿಹರಿದಾವ್ರೂ ಬಂಟಾಭೈರುವನಾ ಬೆಡಗೀನಾ | ಬಂಟಾಭೈರುವನಾ ಬೆಡಗಿಸ್ಗೊಂಬೇತೇರು

ಮಂಟಿಲ್ವಾಲ್ಯೆಸೀ ಹರಿದಾವ್ರೂ | ಕೆರೆಯುಕೋೞಡೀಲ್ಲಿಕೆಂದೂಳು ಏನಮ್ಮ ಮಡಿವಾ ಳಾರ್ಥೆಣ್ಣೀಮಡಿ ಎತ್ತಿ | ಮಡಿವಾಳಾರ್ಥೆಣ್ಣೀ ಮಡಿಎತ್ತೀಭೈರುವನ ಹಿಡಿಗುದುರೆ ನೀರೀಗೋೞಡೀಬಂದೋ | ಮಡಿವಳಾಗಿರೂವಾನು ಮಡಿವಾಳನೊಂದೇನು | ಮಡಿ ವಾಳನಲ್ಲಾ ಮಂದೇವ್ರೂ | ಮಡಿವಾಳಾನಲ್ಲಾಮಂದೇವ್ರುಭೈರೂವಾ ಮಡಿಮಾ ಡೂತಾನೇ ಜಡೆಗೋೞಳಾ | ಜಡೆಯಾಜಂಗುಮರೂ ಜಡೆಯಲ್ಲಿ ಒದರಾರು ಕೆಡ ಗಾಸಮುದ್ರಾ ಎಡಗುತ್ತೀ | ಕೆಡದಾಸಮುದ್ರಾ ಎಡ್ಗುತ್ತಿಏರೀಮೇಲೆ ಹೂಕೊಂ ಡು ಜಡೆಯಾ ಒದರ್ಯಾನೋ ||

## ಹೇಮಗಿರಿ ರಂಗ

ರಂಗಾರಂಗಾಂಕಿತಯಾವರಂಗ ಕರಚಲುವ ಹೇಮ್ಗಿರೀರಂಗಾ ಕರಚಲೂವಾ, ಹೇಮಗಿರೀರಂಗಾ ಕರಚಲ್ವಾರಾದೋರೆಂದು ಸುತ್ತಾಲಾಪರ್ಸೇ ಮೆರದಾವ್ರೋ | ಆರೂಗಳಿಗ್ಯಾಯ್ಯು ಏರಯ್ಯುತೇರಾನೂ ಹಾರಾಡೂತಾವೇ ಹಣ್ಜಾವಾನಾ | ಹಾರಾಡೂತಾವೇ ಹಣ್ಜವನರಂಗೈಯ್ಯ ಏರೈಯ್ಯುತೇರಾ ಹರಿಸೋಕೇ | ಹತ್ತೂ ಗಳಿಗ್ಯಾಯ್ಯೂ ಹತ್ತಪ್ಪತೇರಾನೂ ಇಟ್ಟಾಡೂತಾವೇ ಹಣ್ಜವನಾ | ಏರೀರೀ ನೋಡೀ ಏರೀಭಾವವನೋಡೀ ಏರೀಮೇಲ್ಬರುವ್ರೋರಂಗೈಯ್ಯ | ಏರೀಮೇಲ್ಬರು ವರಂಗೈಯ್ಯ ಚಂದಾಕೆ ನೀರೂಬೇಡಾವ್ರೋ ಸೊಸಿಜವನಾ | ಕಟ್ಟೀಕಟ್ಟೀ ನೋಡೆ ಕಟ್ಟೀಭಾವವನೋಡೆ ಕಟ್ಟೀಮೇಲ್ಬರುವ್ರೋ ರಂಗೈಯ್ಯಾ | ಕಟ್ಟಿಮೇಲ್ಬರ್ವ್ರೋರಂ ಗೈಯ್ಯ ಚಂದಾಕೇ ಹೊಟ್ಟೀತಾವಾದೋ ಪದುಮಾವ್ರೂ | ಹೂವಿನಂತೆ ಮಳೆಹೂ ಯ್ಯು ತುಪ್ಪದಂತೆಹೊಳೆತುಂಬಿ ತುಪ್ಪಾಕಸ್ತೂರೀತೆರೆಹೂಯ್ಯೂ | ತುಪ್ಪಾಕಸ್ತೂ ರೀ ತೆರೆಹೂಯ್ದ್ರೋರಂಗೈಯ್ಯ ಹೊತಿನಂತೇ ತಾನ್ಕೇಬಿಜಮಾಡೀ | ಸಂದೇಮಳೆ ಹೂಯ್ಯೂ ರಂಗೈಯ್ಯ ಹೊಳೆತುಂಬಿ ಗಂಧಾಕಸ್ತೂರೀತೆರೆಹೂಯ್ಯು | ಗಂಧಾಕ ಸ್ತೂರೀ ತೆರೆಹೊಯ್ದ್ರೋರಂಗೈಯ್ಯ ಸಂದೆತಾನಾಕೇದಯಮಾಡೀ | ಏರೀಹತ್ಯಾ ರೂ ಯಾರಾನಾ ನೋಡ್ಯಾರು ದೂರಾದಾಪರ್ಸೇ ಬರಲಿಲ್ಲಾ | ದೂರಾದಪರ್ಸೇ ಬರಲಿಲ್ಲಹಾಗೆಂದು ಹೋರಾಡುತಾರೇ ಗಿರಿಮೇಲೇ | ಬೆಟ್ಟಾಹತ್ಯಾರೂ ದಿಷ್ಟೀ ಸಿನೋೞಡ್ಯಾರು ಸುತ್ತಾಲಾಪರ್ಸೇಬರಲಿಲ್ಲಾ | ಹತ್ತಾಲಾಪರ್ಸೇ ಬರಲಿಲ್ಲಹಾ ಗೆಂದು ಇಟ್ಟಾಡುತಾರೇ ಗಿರಿಬಳಾಗೇ ||



## ಹೊನ್ನಾಲದಮ್ಮ (ನಾಟನಹಳ್ಳಿ)

ಸಂತೇಲೀಕಂಡೇನು ಕೆಂಪೀನೀಕಂದಾನಾ ಸಂಪೀಗೇ ಹೂವಾಮುಡಿಯೋಳಾ | ಸಂಪೀಗೇಹೂವಾ ಮುಡಿಯೋ ಕಂದಮ್ಮಾನಾ ಸಂತಿಟ್ಟೊ ನಾಸೂಕಳುವೇನೂ | ಹರಗೀದ್ಹೊಲಾದಲ್ಲಿ ಮರುಗಾವಾಕುಯ್ಯೋಳೆ ಹರಳಿಕ್ಕಿದ್ವಾಲೇ ಕಿವಿಯೋಳೇ | ಹರಳಿಕ್ಕಿದ್ವಾಲೇ ಕಿವಿಯೋಳೆಕಂದಮ್ಮ ಮರುಗಾಕೂದಾಳೇ ಶಿವನೀಗೇ | ಉತ್ತಾಹೊಲಾದಲ್ಲಿ ಪತ್ತಾರೆಕುಯ್ಯೋಳೆ ಮುತ್ತಿಕ್ಕಿದ್ವಾಲೇಕಿವಿಯೋಳೇ | ಮುತ್ತಿಕ್ಕಿದ್ವಾಲೇ ಕಿವಿಯೋಳೇ ಕಂದಮ್ಮ ಪತ್ರೇಕೂಯ್ದ್ಯವ್ವಾ ಶಿವನೀಗೇ | ಹೊಳೆಯಿಂದಾಚ್ಯೋಳೆ ಹೊಂಗೇತೋಪ್ನೋಳೇ ಆಲಾಜಾಲಾದಾಮರದಾಡೀಯಾ | ಆಲಾಜಾಲಾದಾಮರದಡಿಯ ಹೊನ್ನಾಲೂ ವಾಲಾಡೀಮಗ್ಗಾಮುಡಿದಾಳೂ | ಒಪ್ಪತ್ತೀನೂಟಾ ಚುಚ್ಚೀದಬಾಯ್ಬೀಗ ಉಕ್ಕೊಹೊಳೆಯಲ್ಲಿ ಬರಲಾರೆ (ಭಕ್ತಳಪ್ರಾರ್ಥನೆ) | ಉಕ್ಕೋಹೊಳೆಯಲ್ಲೀ ಬರಲಾರೆ ಹೊನ್ನಾಲು ಒಪ್ಪಿಸಿಕೋತಾಯೀ ಹರಕೇಯಾ; ಒಪ್ಪಿಸಿಕೊಳ್ಳೋದಕ್ಕೆ ಚಿಕ್ಕವ್ನಮಗಳೇನೇ ಸುತ್ತೀಬಾ ಕಂದಾ ಪವಳೀಯಾ | ಸುತ್ತಿಬಾಕಂದಾ ಪವಳೀ ಬಾಗಿಲಮುಂದೆ ಬಾಳೇ ಚಿಪ್ಪೂಸಹಿವಾಗಿ ಗುಡಿಗ್ಹೋಗೂ ! ಕಾಕಂಬಿ (ಬಣ್ಣದ) ಸೀರೇಕಣಕಾಲೀಗರು ಸಾಣಾ ಕೆಣಕಿದರೆ ಅವಳೂ ಕಿಡಗಣ್ಣೀ | ಕೆಣಕಿದರೆ ಅವಳೂಕಿಡಗಣ್ಣಿ ಹೊನ್ನಾಲೂ ಮಲೆತಾರೆ ಮನೆಯಾಮುರಿದಾಳೂ | ಬಂಡೀಕಾಣೇ ಬಂಡಿಕೊಂಡೀ ಕಾಣೇ ಕಬ್ಣ ಬಂಡೀಯಾಮೇಲೆ ಬರುವಾಳೇ | ಬಾಡೀಯಾಮೇಲೇ ಬರುವಾಹೊನ್ನಾಲ್ದಮ್ನ ಬಂಡೀಹೊಳೆದಾವೂ ಬಿಸಲೀಗೇ | ಗಾಲೀಕಾಣೇ ಗಾಲೀಕೀಲೂಕಾಣೇ ಕಬ್ಣ(ದ) ಗಾಲೀಯಾಮೇಲೇ ಬರುವೋಳೇ | ಗಾಲೀಮೇಲ್ಬರ್ರ್ತೊತಾಯಿ ಹೊನ್ನಾಲ್ದಮ್ಮ ವಾಲೇಹೊಳೆದಾವೂ ಬಿಸಲೀಗೇ ||

## ತಿರುಪತಿತಿಮ್ಮಪ್ಪ

ಹಸಗಾರಾ ತಿಮ್ಮಯ್ಯ ಯಾತ್ರಲ್ಲಿ ಉಂಡಾರೂ ಕಾಡಲ್ಲೀಬೆಳೆಯೋಬವನಾಸೀ | ಕಾಡಲ್ಲಿಬೆಳೆಯೋ ಬವನಾಸೀಸ್ಯೆವಾಗಿ ಭವನಾಸೀಲಾಲ್ದಾಧರಿಸ್ಯಾನೂ | ವೆಂಗಟ್ರಮ್ಣಾನೇ ಎಳೆಯಾಗೋ ಏಂದಾನೇ ಸೂಳೇರೀಗೊಲಿಯೋಸುಗುಣಾನೇ | ಸೂಳೇರೀಗೊಲಿಯೋ ಸುಗುಣಾತಿಮ್ಮ್ಯಯ್ಯಾನೇ ಸೋಲೀಸೂಬ್ಯಾಡಾ ಗೆಲಿಸ್ಯೆಯ್ಯಾ | ಯಾಕೀರಿಸ್ವಾಮಿ ಕೋಪಾವು ನನಮೇಲೆ ಬೇಕಾದೊರ್ಗೆಲ್ಲಾ ಹಿಡಿಹೊನ್ನು | ಬೇಕಾದೊರೆಲ್ಲಾ ಹಿಡಿಹೊನ್ನಾಕೊಟ್ಟಾರೆ ನಾ ಧೂಪೂಗಾಣೀಕೇ

ಮಗಳವಮ್ಮಾ | ತಿಮ್ಮೈಯ್ಯಾನ್ಗೊಂಡೂತೀ ತೆಲಗೂತೀ ಲಕ್ಕಮ್ಮ ಎಮ್ಮೇಯುಮೊ ಸರಾ ಕಡೆವೂತಾ | ಎಮ್ಮೆಯು ಮೊಸರಾ ಕಡೆವೂತೇನೆಂದಾಳೂ ತಿಮ್ಮೈಯ್ಯ ಸಿವುದಂಡೂ ಸಾಲಾಗಲೀ | ತಿರುಪತಿಗೇ ಹೋಗೋರು ತಿರುಗ್ಯಾಕೇ ನೊಡೋ (ಡ್ಯಾ) ರು ಸಣ್ಣಾನಾಮಾದಾ ಶರಣಾರೀಗೇ | ಸಣ್ಣಾನಾಮಾದಾ ಶರಣರಿಗ್ಹೋ ಗೋರೂ ಶರಣೆಂದರ್ಯಾಕೇ ಹರಸಾರೋ ||

ಬಾಳೇಹಣ್ಣೀನ್ಹಂಗೇಬಾಗೀತು ಮೇಲ್ಗೋಟೆ ಬಾಲೇವರನಂದೀಬರುವಾಗಾ | ಬಾಲೇವರನಂದೀಬರುವಾಗ ಚಲುವೈಯ್ಯ ಬಾಳೇಸುಳಿಹಂಗೇ ಹೊಳೆದಾನೂ | ನಿಂಬೇಹಣ್ಣಿನ್ಹಂಗೆತುಂಬೀತು ಮೇಲ್ಗೋಟೆ ರಂಬೆವರನಂದೀ ಬರುವಾಗ | ರಂಬೇವರನಂದೀಬರುವಾಗ ಚಲುವೈಯ್ಯ ಇಂಬೀಹಣ್ಣಿನ್ಹಂಗೇ ಹೊಳೆದಾನೂ | ಬಿಳಿಯಾಕುದ್ರೇಮೇಲೇ ಬೆಳಗಿನ್ಹಾವ್ಟಲ್ಬಂದ ರಂಭೇಕಲ್ಯಾಣ್ಕೇಇದಿರಾಗೀ | ರಂಭೇಕಲ್ಯಾಣ್ಕೇಇದಿರಾಗೀಚಂದಾ ಕುದುರೇನೇರೀ ಸಂದೇದನೀನಲ್ಬಂದ | ಸ್ವಾಮಿಾಚಲುವೈಯ್ಯೂ ಬಾಲೇವರನಂದೂ ಹಾಲಾಗೊಳದಲ್ಲೀ ಕೈಧಾರೇ | ಹಾಲಾಗೊಳದಲ್ಲಿ ಕೈಧಾರೆ ಆದಾದೆಂದು ಸುತ್ತೇಳು ಪರ್ಸೇಮೆರೆದಾವ್ರೋ |

## ರಾಗಿಯೆಲ್ಲಾ ಬೀಸಿ ಮುಗಿದಮೇಲೆ ಹೇಳುವ ಹಾಡು

ರಾಗೀಯೂ ಮುಗಿದಾವೂ ರಾಜಾಣಾಹೆಚ್ಚಾವೂ ನಾನ್ಹಿಡಿದ ಕೆಲಸಾ ವದಗ್ಯಾವೂ | ನಾನ್ಹಿಡಿದಕೆಲಸಾ ವದಗ್ಯಾವ್ರಾಗೀಕಲ್ಲೇ ನಾಕೂಗೀಬಿಡುತೀನೀ ಬಲದೋಳಾ | ನಾಸೀಸೋ(ಲಿ)ಸೀದೆ ನಾಸಿನ್ನನಿದ್ರೇಕೆಡಸೀದೇ | ನಾಸಿನ್ನನಿದ್ರೇ ಕೆಡಸೀದ್ರಾಗೀಕಲ್ಲೆ ನಾತೂಗೀಬಿಡುತೀನಿ ಬಲದೊಳಾ |

ರಾಗೀ..........................................................ವದಗ್ಯಾವೂ || ಪ ||

ಕಲ್ಲೂಬಿಡ್ತೀನೆಂದು ಶಿಟ್ಯಾಕೆ ಸರಸತಿಯೆ ಕುಕ್ಕೇಲೀರಾಗೀ ಬೆಳೆಯಾಲೀ | ಕುಕ್ಕೇಲೀರಾಗೀ ಬೆಳಿಯಾಲೀ ತಕ್ಕೊಂಡು ಮತ್ತೆ ರಾತ್ರೀಗೆ ಬರುತೀನಿ | ಕಲ್ಲೂಬಿಡ್ತೀನೆಂದು ಎಲ್ಲಾರೂ ಕೇಳೀರಿ ಕಲ್ಲೂಕಾವೇರೀ ಕಪನೀಯಾ | ಕಲ್ಲೂಕಾವೇರೀಕಪಿನೀನಂಜೈಯ್ಯಾನಾ ಕಲ್ಬಿಟ್ಟೂಕೈಯ್ಯಾ ಮುಗಿದೇನೂ ||

## ಬೆಟ್ಟದಪುರದ ಮಲ್ಲೈಯ್ಯಸ್ವಾಮಿ

ಗಿರಿಜೇ ಕೇಳಾಕೆ ಗಿರಿಯಿಂದ್ಮಲ್ಲೈಯ್ಯಬಂದ ಗಿರಿಯುದ್ದಹೊನ್ನಾ ಅಳಕೊಂಡು | ಗಿರಿಯುದ್ದಾ ಹೊನ್ನಾ ಅಳಕೊಂಡು ಸುರಕೊಂಡು ಗಿರಿಜೇ ಕೇಳಾಕೇ ಶಿವಬಂದ | ಗಿರಿಜೇಕೇಳಾಕೆಬಂದಾ ಬೆಟ್ಟದಪುರದ ಗಿರಿರಾಯ್ನೆಗಿರಿಜೇಕೊಡಿರಮ್ಮಾ | ಕಾಡೂ

ಗಣ್ಣೋಳೇ ಕೂಡೀದ್ದುಬ್ಬೀನೋಳೇ ಕೋಡೀಲೀ ನೀರಾವೊಗಿಯೋಳೇ | ಕೋಡೀಲೀ ನೀರಾವೊಗಿಯೋ ಗಿರಿಜೇಕಂಡು ಮಲ್ಲೈಯ್ಯ ಜಪವಾ ಮರೆತಾರೂ | ಮಲ್ಲೈಯ್ಯ ಜಪವಾ ಮರೆತೂ ಏನೆಂದಾರೂ ಬಾರ್ಹೆಣ್ಣೆ ನನ್ನಾ ಶಿವಜಾಡೇಗೇ | ಶಿವಜಡ್ಗೇಬರ್ಬೋದು ಸರ್ಯೇನು ಶರಣಾರೇ ಬಂದ್ಬೋಗೀ ನಮ್ಮಾ ಅರವಾ ನೀಗೇ | ಬಂದ್ಬೋಗಿನಮ್ಮಾ ಅರ್ಮನ್ಗೆ ಶರಣಾರೇ ನಮ್ಮಾಯಿಯಾ ತಂದೇಯಾ ಕೇಳೂ ವೇನೂ | ಹಟ್ಟೀಲಿ ಗಿರಿಜಮ್ಮ ಕುಟ್ಟೋತೇನೆಂದಾಳು ಅಪ್ಪಾಜಿನಮ್ಮಾ ಕೊಡಬೇಕು | ಅಪ್ಪಾಜಿನಮ್ಮ ಕೊಡ್ಬೇಕ್ಬೆಟ್ಟಾದ್ದುಬರದ ನೂರೊಂದು ಜಡೆಯಾ ಶರಣಾರೀಗೇ | ಹಾದೀಲ್ಗಿರಿಜಮ್ಮಾ ಹಾಡೂತೇನೆಂದಾಳೂ ತಾಯಮ್ಮಾ ಎನ್ನಾ ಕೊಡಬೇಕು | ತಾಯಮ್ಮ ಎನ್ನಾ ಕೊಡಬೇಕ್ಬೆಟ್ಟಾತ್ತುಬರದ ಎಪ್ಪತ್ತುಜಡೆಯಾ ಶರಣಾರೀಗೇ | ಸಾಲೂ ಸೀರೇಯಾ ಅರಮನ್ನಿ ಹೇರ್ಕ್ಕೊಂಡು ಹೋಗ್ಬನ್ನಿ ಅವ್ರಾ ಅರ್ಮಾನೇಗೇ | (ಮಲ್ಲೈಯ್ಯನಮಾತು) | ಹೋಗ್ಬನ್ನಿ ಅವ್ರಾ ಅರ್ಮನ್ಗೆ ಗಿರಿಜೇಯ ಕೊಟ್ಟಾರೊ ಕೊಡರೋ ಕೇಳ್ಬನ್ನಿ | ಶಾಲೂಸಕ್ಲಾತೀ ಆನೇಮೇಲ್ಹೇರ್ಕ್ಕೊಂಡು ಹೋಗ್ಬನ್ನಿ ಅವ್ರಾ ಅರಮಾನೇಗೆ | ಹೋ..................................ನ್ನಿ | ಕಸೂರ್ಬೆಟ್ಟಾದ್ಲಲ್ಲೀ ಋಷಿಗೋಳು ಮೊಹೂರ್ತಾಗಿ ಹಸ್ತೂತರಗೇಲೇ ಮೆಲುವಾರೂ | ಹಸ್ತೂತರಗೇಲೇ ಮೆಲುವಾರು ಬಂದಲ್ದೆ ಮುದ್ದೀನಗಿರಿಜೇ ಕೊಡರಂತೆ | ಇದ್ದಾಮಠದಲ್ಲೀ ಸಿದ್ಧಮೂರ್ಹೂರ್ತಾಗಿ ಬಿದ್ದಾ ತರಗೇಲೇ ಮೆಲುವಾರೂ | ಬಿದ್ದಾ ತರಗೇಲೇ ಮೆಲುವಾರ್ಬಂದಲ್ದೇ ಮುದ್ದೀನಗಿರಿಜೇ ಕೊಡರಂತೆ | ಹಾದೀಲೂಬ್ಬೋರು ಬೀದೀಲ್ಹಿರ್ಬೋರು ತ್ಯಾಗಾದಿಂದ್ಹಿಡಿದೂ ತಿರಿಯೋರೂ | ತ್ಯಾಗಾದಿಂದ್ಹಿಡಿದೂ ತಿರಗೂವಾ ಶರಣಾರಾ ಏನೂಮೆಚ್ಚೀದೇ ಸಿರಿಗಿರಿಜೆ | ಹಾದ್ಯವ್ರ ಹಾಸೀಗೇ ಬೀದ್ಯವ್ರ ಸುಪ್ಪತ್ಗೆ ತ್ಯಾಗಾದೇಲ್ಯವ್ರಾ ಹರಿವಾಣ | ತ್ಯಾಗಾದೇಲ್ಯವ್ರಾಹರಿವಾಣ ಅಣ್ಣೈಯ್ಯ ಕೊಡ್ಬೇಕ್ಬೆಟ್ಟಾದ್ದುಬ್ಬರ್ದಾ ಮಲ್ಲೈಯ್ಯಾಗೇ | ಹಟ್ಟೀಲೊರ್ಬೋರೂ ಕೊಟ್ಗೇಲ್ಮಲ್ಗೋರೂ ಅವ್ರೆತ್ಯಾದಿಂದ್ಹಿಡಿದೂ ತಿರಗೋರೂ| ಅವ್ರೆತ್ಯಾದಿಂದ್ಹಿಡಿದೂ ತಿರಗೂವಾಶರಣಾರಾ ಏನೂಮೆಚ್ಚೀದೇ ಸಿರಿಗಿರಿಜೇ | ತ್ಯಾಗಾದೇಲ್ಯವ್ರಾಹರಿವಾಣ ಅಪ್ಪಾಜಿ ಕೊಡ್ಬೇಕು ಬೆಟ್ಟಾದಾ ಶರಣಾರೀಗೇ | ಪಟ್ಟೇಉಡ್ಗಿರಿಜೇ ಪುಟ್ಮುತ್ತ ಕಟ್ಗಿರಿಜೇ ಪುಟ್ಟಾಮಾಳೀಗೇಲಿರು ಗಿರಿಜೇ | ಪುಟ್ಟಾಮಾಳ್ಗೇಲೀ ಇರ್ಗಿರಿಜೆ ನಿನ್ನಾನು ಮೂಡಾಲಾಶೆಟ್ಗೋಳ್ಗೆ ಕೊಡುತೀನಿ| ಪಟ್ಟೆಉಡಒಲ್ಲೆ ಪುಟ್ಮುತ್ತಕಟ್ವಲ್ಲೆ ಪುಟ್ಟಾಮಾಳ್ಗೇಲೀ ಇರಬಲ್ಲೇ | ಪುಟ್ಟಾಮಾಳ್ಗೇಲೀ

ಇರಬಲ್ಲೆ ಅಪ್ಪಾಜಿ ನೂರೊಂದು ಜಡೆಯಾ ಶರಣಾರೂ | ನೂರೊಂದು ಜಡೆಯಾ
ಶರಣಾವುಲ್ಲೈಯ್ಯಾಗೆ ಕೊಡಬೇಕಪ್ಪಾಜೀ ಶರಣಾರೀಗೇ| ಶೀರೆಉಡ್ಗಿರ್ಜೆ ಸಾಲ್ಮು
ತ್ತಕಟ್ಗಿರಿಜೆ ಸಾಲೂವಾಳ್ಗೀಲೀ ಇರುಗಿರಿಜೇ | ಸಾಲಾವಾಳ್ಗೀಲೀ ಇರುಗಿರಿಜೇ
ತೇಕಾಲ ಧೊರೆಗೋಳ್ಗಿ ನಿನ್ನಾಕೊಡುತೀವಿ | ಶೀರೆಉಡಬಲ್ಲೆ ಸಾಲ್ಮುತ್ತ ನಾ
ಬಲ್ಲೆ ಸಾಲೂವಾಳ್ಗೀಲೀ ಇರಲಾರೆ | ಸಾಲೂವಾಳ್ಗೀಲೀ ಇರಲಾರೆ ತೆಂಕಾಲಾ
ಧೊರೆಗೋಳೆಂಬೋರೂ ಹಿರಿಯಣ್ಣಾ | ಧೊರೆಗೋಳೆಂಬೋರೂ ಹಿರಿಯಣ್ಣಾಅಪ್ಪಾ
ಜಿ ನೂರೊಂದು ಜಡೆಯಾ ಶರಣಾರೂ | ನೂರೊಂದು ಜಡೆಯಾ ಶರಣಾರ್ಗೆ
ನನ್ನಾನು ಕೊಡಬೇಕು ಅಪ್ಪಾಜಿ ಮಲ್ಲೈಯ್ಯಾಗೇ | ಬಾಯ್ಕುಟ್ಟಿ ಗಿರ್ಜೀಯುಬಾ
ಯ್ಮೇಲೆ ಹೊಯ್ಯಿರೋ ಓಲೆ ಬಂಗಾರಾ ಅಳ್ಕೊಳಿ | ಓಲೇ ಬಂಗಾರಾ ಅಳ್ಕೊಳ್ಳಿ
ಗಿರ್ಜೀಯು ಬಾಗ್ಲಿಂದಾಚೇಗೇ ತೆರಳೀರಿ (ತಳ್ಳೀರಿ) | ಬಂಗಾರ ಅಳದೀರ ಬಾಯ್ಮೇ
ಲೆ ಹೊಯ್ದಿದ್ದಾರ ಬಾಗ್ಲಿಂದಾಚೇಗೇ ತೆರಳೀರಾ | ಬಾಗ್ಲಿಂದಾಚೇಗೇ ತೆರಳೀರ
ಅಪ್ಪಾಜಿ ಹುಟ್ಟೀದಾ ಮಾನೇ ತಿರವೀರೋ | ನೀತ್ಗೆಟ್ಗಿರ್ಜೀಯು ಕೆನ್ನೀವೋಲುಪ್ಹು
ಯ್ಯಾರಿ ಕಪ್ಪೂಬಂಗಾರಾ ಅಳ್ಕೊಳ್ಳೀ | ಕಪ್ಪೂ ಬಂಗಾರಾ ಅಳ್ಕೊಳ್ಳಿಗಿರ್ಜೀಯು
ಹಟ್ಟೀಯಿಂದಾಚೇಗೇ ತೆರಳೀರೀ | ಕಪ್ಪೂಬಂಗಾರಾ ಅಳಕೊಂಡು ತಾಯುಮ್ಮ
ಹಟ್ಟಿಂದಾಚೇಗೇ ತಳ್ಳೀರಾ | ಹಟ್ಟಿಂದಾಚೇಗೇ ತಳ್ಳೀರತಾಯುಮ್ಮ ಹುಟ್ಟೀದಾ
ಮಾನೇ ತಿರುವೇನಾ | ಆರಂಕಣದರಮಾನೇ ಮೇಲೇ ಗೋದುವೆಸಾಲು ಮಾಳೀ
ಗೇಮೇಲೆ ಮಲಗೀರುವ್ರೋ | ಮಾಳೀಗೇಮೇಲೇ ಮಲಗಿರ್ವೊ ಮಲ್ಲೈಯ್ಯಾಗೆ
ವಾಲೇಬಂದ್ವಾಲೇ ನುಡಿದಾವ್ರೂ | ವಾಲೆ (ಕಾಗದ) ಬಂದಾರೇ ನಾಳೇ ಓದಲು
ಬಲ್ಲೆ ಮಾವಾನಾ ಮಗಳೂ ಸಿರಿಗಿರಿಜೇ | ಮಾವಾನಾ ಮಗಳೂ ಸಿರಿ ಗಿರಿಜೇ ಕೈ
ಲಿರುವ್ರೋ ಹೂವಿನುಂಗರವಾ ಗೆಲಬೇಕು | ಹತ್ತಂಕಣ್ದ ಆರ್ಮಾನೆ ಮತ್ತೆಗೋದುವೆ
ಸಾಲು ಉಪ್ಪರಕೆಮೇಲೇ ಮಲಗೀರುವ್ರೋ | ಉಪ್ಪರ್ಕೆಮೇಲಿರುವ ಮಲ್ಲೈಯ್ಯಾ
ಗುತ್ತಾರ ಉತ್ತಾರ ಬಂದೂ ನುಡಿದಾವ್ರೋ | ಉತ್ತಾರಾಬಂದಾರೆ ಮತ್ತೆ ಓದಲು
ಬಲ್ಲೆ ಅತ್ತೇಯು ಮಗಳೂ ಸಿರಿಗಿರಿಜೇ | ಅತ್ತೇಯುಮಗಳೂ ಸಿರಿಗಿರಿಜೇ ಕೈಲಿರುವೇ
ಮುತ್ತೀನುಂಗರವಾ ಗೆಲಬೇಕು | ಕಪ್ಪೂಮಲ್ಲೈಯ್ಯಾಗೂ ಒಪ್ಪೂಗಿರಿಜಮ್ಮಾ
ಗೂ ಇಪ್ಪತ್ತು ದೀವಟ್ಗಿ ಬೆಳಕಲ್ಲೀ | ಇಪ್ಪತ್ತುದೀವಟ್ಗಿ ಬೆಳ್ಕಲ್ಗಿರ್ಜಮ್ಮಾಗೆ
ವಾಲೇಗ್ವಜ್ಜುರವಾ ಬಿಗಿದಾರೂ | ಸ್ವಾಮಿಾಮಲ್ಲೈಯ್ಯಾಗೂ ಬಾಲೇಗಿರಿಜಮ್ಮಾ
ಗೂ ಸಾಲಾದೀವೀಗೇ ಬೆಳಕಲ್ಲೀ| ಸಾಲಾದೀವೀಗೇ ಬೆಳಕಲ್ಮಲ್ಲೈಯ್ಯಾಗೆ ಬಂಟೀ

(ಪಟ್ಟಿ) ಘೋತರವಾ ಧರಿಸ್ಯಾರೋ | ತಾನೇಮಲ್ಲೈಯ್ಯ ತಾನೇಸಿಂಗಾರ್ರಾದ ಜಲತಾರಾರಂಗೀ ಜೋಮಾಲೇ | ಜಲತಾರಾರಂಗೀ ಜೋಮಾಲ್ಕಂಠೀಸಾರಾ ರಾತ್ರೀಗ್ಮಲ್ಲೈಯ್ಯಾಮದಲಿಂಗಾ ! ನಿಲ್ಲೀಗಿರುಜಮ್ಮಾ ನಿಲುವಾನೋಡಾರಂತೆ ಅಂಗಾಲಾಪದುಮಾಸುಳಿಸುದ್ದ | ಪದ್ಮಾನೆತ್ತೀ ಭಾವನೋಡಾರಂತೇ ನಿಲ್ಲೆ ಸಿಲ್ಲೀ ಮಲ್ಲೈಯಾನಾ ಎದುರೀಗೇ | ಮೂಡಲ್ಸೀಮಿಂದಾ ಮೂರ್ಮ್ಕಾಣಾಹೂವು ಬಂದೊ ಸ್ವಾಮಿಾ ಮಲ್ಲೈಯ್ಯಾನಾ ಮದುವೀಗೇ | ಸ್ವಾಮಿಾ ಮಲ್ಲೈಯ್ಯಾ ಮದಲಿಂಗಾದಾನೆಂದೂ ಹನ್ನೆರಡೂಮಣದಾ ಹೂವ್ಬಂದೋ | ಮಲ್ಲೀಗೆಹೂವೂ ಮಲೆನಾಡುಗಂಧಾವು ಮೆಲ್ಲಾಗೇಬೀಸೋ ಸುಳಿಗಾಳಿ | ಮೆಲ್ಲಾಗೆಬೀಸೋ ಸುಳಿಗಾಳ್ಬೆಟ್ಟಾದ್ಬುರ್ದ ಸ್ವಾಮಿಾಮಲ್ಲೈಯ್ಯಾ ಮದಲಿಂಗಾ | ಸ್ವಾಮಿಾಮಲ್ಲೈ ಯ್ಯಾಗೂ ಬಾಲೇ ಗಿರಿಜಮ್ಮಾಗೂ ಹಾಲಾಕೋಳದಲ್ಲೀ ಕೈದಾರೆ | ಬಾಲೇ ಗಿರಿ ಜಮ್ಮಾಗೂ ಸ್ವಾಮಿಾ ಮಲ್ಲೈಯ್ಯಾಗೂ ತುಪ್ಪಾಗೋಳದಲ್ಲೀ ಕೈದಾರೇ | ಮೂ ಡಾಲ್ಸೀಮಿಂದಾ ಸೂರ್ಜ್ಜನ್ನಂಗಮರ್ಬಂದ್ರು ಸ್ವಾಮಿಾಮಲ್ಲೈಯ್ಯಾನಾ ಮದು ವೀಗೇ | ಹಸುಮಕ್ಕು ಹಿಂದಾಗಿ ಶಿಶುಮಕ್ಕು ಮುಂದಾಗಿ ಬಸ್ವೆಯ್ಯಾಮಡದೀ ಸಹಿ ವಾಗಿ | ಮೂಡಾಲ್ಸೀಮಿಂದಾ ಮುತ್ತೀಸ್ವೈರಣೆ ಬಂದೋ ಕೆತ್ತೀದ್ವಾಸಿಂಗಾ ಸಹಿ ವಾಗಿ | ಪುತ್ರಾಮಲ್ಲೈಯ್ಯಾನಾ ಮದುವೀಗೆ ಹೊರಟಾರೂ ಭೋಗೀಮಲ್ಲೈ ಯ್ಯಾನಾ ಕೈಧಾರ್ಗೀ | ಬೆಟ್ಟಾದ್ಮಲ್ಲೈಯ್ಯಾಗೇ ಬಿಟ್ಟೀಯಸೂಳೇರು ಪಟ್ಟೀ ಸೀರೇಯಾ ಬಿಗಿದುಟ್ಟ್ರೂ | ಪಟ್ಟೇಸೀರೇಯಾ ಬಿಗಿದುಟ್ಮಲ್ಲೈಯ್ಯಾಗೇ ತಟ್ಟೀ ಲಾರತಿಯಾ ಬೆಳಗ್ಯಾರೂ | ಕಂಬಾದ್ಮಲ್ಲೈಯ್ಯಾಗೆ ಸಂಬಳದ ಸೂಳೇರು ಕಾವೀ ಯಸೀರೇ ಬಿಗಿದುಟ್ಟ್ರೂ | ಕಾವೀಯಸೀರೇ ಬಿಗಿದುಟ್ಕಾಸೇನಾಕಿ ತಟ್ಟೀಲಾರ ತಿಯಾ ಬೆಳಗೀದಾರೂ || ಸೋಬನ್ನಿರೇ ಸೋಬನಾ ಬನ್ನಿರೇ ||

## ಪತಿವ್ರತೆಯಾದ ಹೆಣ್ಣುಮಗಳು

ಎಳ್ಳೂಕೊಳ್ಳಾಕೆ ಚೆಳ್ಳೂರ್ಬಾಣ್ಜಿಗಬಂದ ಎಳ್ಳುಂಟೆನಾರೀ ಹಣವೀಗೇ | ಎಳ್ಳುಂಟೆನಾರೀ ಹಣವೀಗೆ ಅಂತಾವ ಸುರಿದಾನೂ ಒಳ್ಳಾಹಣಗೋಳ | ಕ್ವಾರ ಮ್ಮಹಣವಾ ತೂರಮ್ಮರಾಶೀಯ ದ್ವಾರಾವತಿಯೆಂಬೋಧರ್ಮಾರ | ದ್ವಾರಾವತಿ ಯೆಂಬೊಧರ್ಮಾರ್ಪಟ್ಟಾಣ್ಕ್ಹೋಗಿ ಧಾರಾಣೆ ಕೇಳೀ ಬನ್ನೀನಿ | ಧಾರಾಣೆ ಕೇಳ್ಬಂವೆ ದಶರಾಥ್ಬಳ್ಳಾವತಂದೆ ಹಸುರೂಕುಪ್ಪುಸದಾ ಹೊಸಗೋಣೀ | ಹಸುರೂಕುಪ್ಪು ಸದಾ ಹೊಸಗೋಣಿ ತಂದಿವ್ನಿ ಕುಸುಮಾಲೆ ಎಳ್ಳಾ ಅಳಿಬಾರೆ | ಕುಸುಮಾಲನ

ದೀರಿ ಹೊಸ್ಮಾತೀನ್ಯಾಬ್ಣಿಜ್ಜೀಗ, ಅಸಮಾನಗಾರಾ ವೈದಾರಸೊ | ಅಸಮಾನಾ ಗಾರಾ ವೈದರಸಕುಟ್ಟೀಳಿ ಹಸುರೂ ಶೂಲಾಕೇ ಬಿಗಿಸೇನೂ | ಹಸುರೂ ಶೂಲಕೇ ಬಿಗಿಸೇನೂ ಬಣಜೀಗ ಯಾವಾ ಪಟ್ಟಣದಾ ಬಣಜೇಗಾ | ಬಣ ಜೇಗ ಬೊಗಸ್ಯಲ್ಲ ಹಣಬೇಶತ್ತ್ರೇಯಲ್ಲ ಬಣಗಿದ್ದ ಮಾರಾ ನೆರಳಲ್ಲಾ | ಬಣ ಗಿದ್ದಾ ಮಾರಾ ನೆರಳಲ್ಲ ಬಣಜೀಗ ನನಸಂಗ ನಿನಾಗೆ ತರವಲ್ಲಾ | ಕಡದಾ ಏರೀಮೇಲೆ ಕಡಗಾದಕೈನೋಳೆ ಹೊಳೆದಾರೀ ಹುಣಿಸೇ ಎಷ್ಟೇದೂರ | ಹೊಳೆ ದಾರಿ ಹುಣಿಸೇ ಎಷ್ಟೂದ್ದರೋಕ್ಕಲಗಿತ್ತಿ ಕುಡಿಯೋಕೆ ನೀರಾ ಕೊಡುಬಾರೇ | ಹೊಳೆದಾರಿ ಒಳಗಿರುವ ದೋರಾ ಹುಣಿಸೇಹಣ್ಣಾ ತಿಂದಾರಾನೋಡೋ ಕಡುರೂ ಚೀಯಾ | ಬಾವ್ನೀರು ಒದಬಾದಿ ಕೆರ್ನೀರು ಕೆಂಬಟ್ಟೆ ಕುಡಿಯೋಕೆ ನೀರಾ ಕೊಡುಬಾರೆ | ಎಷ್ಟು ಹೇಳಿದ್ರೂ ಕೇಳೊಲ್ಲೊಕ್ಕಲಗಿತ್ತಿ ದೊಡ್ಡೊಕ್ಕಲಗಿತ್ತೀ ಕರಚಲೂವೇ | ದೊಡ್ಡೊಕ್ಕಲ್ಗಿತ್ತೀ ಕಡುಚಲುವೇ ಕೊಳ್ಳೆನಸ್ಕೈಯ್ಯ ಬೀಳೀ ಚಿಗುರೇಲೇಯಾ | ನಸ್ಕೈಯ್ಯ ಬೀಳೀ ಚಿಗುರೇಲೆ ಕಳಿಯುಡಕೆ ಮೂರ್ತಾ ಗ್ಹೋಗೀ ನೆನೆಹೆಣ್ಣೆ | ನೆನೆದೇನು ತಂದೇಯ ನೆನೆದೇನು ತಾಯಿಾಯ ನಿನ್ಯಾಕೆ ನೆನೆದೇನೋ ಹೊಲೆಮುಕ್ಕ |

ಎಷ್ಟು..............................ಜಾಣೊ.................................ವೆ |

ಜಾಣೊಕ್ಕಲಗಿತ್ತೀ ಕರಚಲುವೆ ಎಲೆಹೆಣ್ಣೆ ಎಣ್ಣೀ ನೀರೆಂಬೋ ಎಣೆಗಂಟೂ | ಎಣ್ಣೀ ನೀರೆಂಬೊ ಎಣೆಗಂಟು ಎಲೆಹೆಣ್ಣೆ ಕಡಗಾ ತೋಳ್ಮೇಲೇ ಬರಗೇನೂ | ಕಡಗಾ ತೋಳ್ಮೇಲೇ ಮಲಗಾಕೆ ಕಡಿದಾರೂ ಇರಿದಾರೂ ನಿನ್ನಾ ಬಣಜೀಗ | ಕಡಿದಾರು ಇರಿದಾರು ಬಣಜೀಗ ನಿನ್ನಾ ನಿನಗಿಂತ ಚಲುವಾ ಮನೆಪುರೂಸಾ | ನಿನಗಿಂತ ಚಲುವಾರ್ಮನೆಪುರ್ಸರ್ಕುಟ್ಟೀಳಿ ಕಡಿಸೇನು ನಿನ್ನಾ ಇರಿಸೇನು | ಕಡಿ ಯೋದಿರಿಯೋದಾ ಚೆಳ್ಳೂರಲ್ಲಸ್ಯಾಲೆ ಕಟ್ಟೀದಾಕೆರೆಯಾ ಒಡಿಬಲ್ಲೀ | ಜಾಣೊ ಕ್ಕಲಗಿತ್ತೀ ಎಲೆಬಾಲೆ ಕರಚಲುವೆ ಸಂಗಾಟಾರಾಗಳಿಗೇ ಬರುವೇನೂ | ಜೋಳಾದ ಹೋಲಾಕೆ ಕೂಳೂಕುಂಡ್ಹೋಗೋಳೆ........ಜಾ................ವೆ |

ಜಾಣೊಕ್ಕಲಗಿತ್ತೀ ಕರಚಲುವೆ ಅಟ್ಟಡಿಗೆ ನಮಗೊಂದ ತುತ್ತಾ ಸೀ ತೋರೇ | ಒಬ್ಬಾರ್ಗಟ್ಟಡಿಗೇ ಇಬ್ಬಾರುಣ್ಣಲು ಬಹುದೆ ಇಬ್ಬಂದಿಕಾರಾ ಬಣಜೀಗಾ | ಇಬ್ಬಂದಿಕಾರಾ ಬಣಜೀಗನನ್ನಾಯ್ಯಂದೆ ಇಬ್ಬರ್ಗೆ ಧಾರೇ ಎರದಾರೋ ? | ಇಬ್ಬರ್ಗೆ ಧಾರೇಎರದಾರೆ ಬಣಜೀಗ ನಿನಗಿಂತ ಚಲುವಾ ಮನೆಪುರುಸಾ |

ಎಷ್ಟೊ ಹೇಳಿದರೂ ಕೇಳೊಲ್ಲೊಕ್ಕಲಗಿತ್ತಿ ಹಾಸೇವಜ್ಜುರದಾ ದಸರೀಯಾ | ಹಾಸೇವಜ್ಜುರದಾದಸರೀಯ ಕಡುಜಾಣೆ ಸಂಗಾಟಾರಗಳಿಗೇ ಇರುವೇನು | ಬಣ್ಣಾ ಕಟ್ಸ್ಯವ್ರೇ ನೂಲಲ್ಲಿ ನೂತ್ಸ್ಯವ್ರೆ ಸಣ್ಣುತ್ತ ಅದ್ಕೇ ಬಿಗಿಸ್ಯಾವ್ರೆ | ಸಣ್ಣುತ್ತಾ ಅದ್ಕೇ ಬಿಗಿಸ್ಯಾವ್ರೆ ಬಣಜೀಗ ಹನ್ನೆರಡ್ಡ್ವರಹಾದಾ ದಸರೀಗೆ | ಹನ್ನೆರಡ್ವರ್ಹಾದಾ ದಸ್ರೀಯುು ಮಾಸಿದ್ರೆ ನಮ್ಮೋರು ನಮ್ಮಾಕಡಿದಾರೂ | ಹಾಸೇವಜ್ಜುರದಾ ದಸರೀಯು ಎಲೆಬಾಲೆ ಬಂದೀ ತೋಳ್ಮೇಲೇ ಒರಗೇನೂ |

..............................................................................................

ದೊಡ್ಡೊಕ್ಕಲಗಿತ್ತೀ ಕಡುಜಾಣೆ ದೊರಕಿದರೆ ಕಡಲೇವಾಲಾಡೀ ಬೆಳಿಸೇನೂ | ಕಡಲೇಕಾಯ್ಹಂಗೇ ಕಡೆಮುತ್ತಕಟ್ಸೇನು ಕಡೆದಾಮಾಳ್ಗೀಲೀ ಇರಿಸೇನೂ | ವಾಜಾರಿಕ್ಕೀದಾ ನೇಗಾಲಾ ಹೊತ್ಗೊಂಡು ಮೂಡಾಲಾ ಹೊಲವಾ ಉಳುವೋರೂ | ಮೂಡಾಲಾ ಹೊಲವಾ ಉಳುವ್ರೋರು ಬಣಜೀಗ ಕಡಲೇ ವ್ರೋಲಾಡೀ ಬೆಳೆವಾರೂ | ಉದ್ದೂವ್ರೋಲಾಡೀ ಬೆಳಿಸೇನು ಎಲೆಹೆಣ್ಣೆ ದೊಡ್ಡಾಮಾಳ್ಗೀಲೀ ಇರಿಸೇನೂ | ಬಡಗೀ ಇಕ್ಕೀದ ಕೊಕ್ಕೀಸೇಗ್ಲೊಕ್ಕೊಂಡು ತೆಂಕಾಲಾ ಹೊಲವಾ ಉತ್ತಾರೂ | ತೆಂಕಾಲಾ ಹೊಲವಾ ಉತ್ತೊ ನನ್ನುರುಸಾರು ಉದ್ದೊವಾಲಾಡೀ ಬೆಳೆವ್ರೋರು | ಮೂಡಲ್ಕೋಟ್ಡಿಂದಾ ಮೂರ್ಗುಂಡ್ಬಾಳೆಲೆ ಬಂದೊ ನಮ್ಮಾವಾನಾ ಮಗನೀಗೇ ಶನಿವಾರ | ಮಾವಾನಾ ಮಗನಾ ಶನಿವಾರ್ಕೆ ಉಂಡಹ್ಳಿ ನಾಯಾಗಿ ನೆಕ್ಕೋ ಬಣಜೀಗ | ನಮ್ಮತ್ತೀಮಗನೀಗೇ ನೂರ್ಬಿಂದ್ಗೆ ನೀಕರ್ಾಯುು ನಮ್ಮತ್ತೀಮಗನೀಗೇ ಶನಿವಾರ | ನಮ್ಮತ್ತೀಮಗಾನೂ ಶನಿವಾರ್ಕೆ ಮಾಡ್ನಿಲ್ರಿ ಕತ್ತ್ಯಾಗಿ ಹೊರಳೋ ಬಣಜೀಗ ||

(ಈ ಮಾತನ್ನು ಕೇಳಿ ಶೆಟ್ಟರು ಕಾಲಿಗೆ ಬುದ್ಧಿ ಹೇಳಿದರಂತೆ)

## ನಮ್ಮ ಹಳ್ಳಿಯಲ್ಲಿ ಬಳಿಕೆಯಾಗಿದ್ದ ಕೆಲವು ಗಾದೆಗಳು

### ಅ

ಅಕ್ಕೀಮೇಲಾಸೆ ನಂಟರಮೇಲೆ ಇಷ್ಟ.

ಅಂಬಲಿ ಕುಡಿದರೂ ಇಂಬಾಗಿ ಕುಡಿ

ಆತೀ ಆಸೆ ಗತೀ ಕೇಡು. (ವರಿಬ್ಬು)

ಅಂಬ್ಲೀ ಕುಡ್ಯೋನಿಗೆ ಮಿಾಶೆ ತಿರುಗ ವರಿಬ್ಬು.

ಅರವತ್ತುವರ್ಷಕ್ಕೆನನ್ನಮಗ ಅಪ್ಪಾಅಂದ

ಅತ್ತೊ ಕರೆದೂ ಮಣೆ ಹಾಕಿಸಿಕೊಂಡ.

ಅವ್ವ ಸತ್ತಮೇಲೆ ಅಪ್ಪಾ ಚಿಕ್ಕಪನಲ್ವೆ.

ಅಳತೆಗೆ ಗೊತ್ತೆ ಮನೇ ಬಡಸ್ತನಾ.

ಅತ್ತೇಮೇಲಿನಕೋಪ ಕೊತ್ತೀಮೇಲೆ ತೋರಿದ.

ಅರುಳೇಸೊ ಹೋಯ್ತುಮರುಳುಬಂತಲ್ಲ.

ಅಲ್ಪನಿಗೆ ಐಶ್ವರ್ಯಬಂದರೆ ಅರ್ಧರಾತ್ರಿಯಲ್ಲಿ ಕೊಡೆ ಹಿಡಿದರು.

ಅಹಂಕಾರಕ್ಕೆ ಉದಾಸೀನವೇ ಮಟ್ಟು.

ಅಟ್ಟಕ್ಕೆ ಹಾರಲಾರದಬಡ್ಡಿ ಸ್ವರ್ಗಕ್ಕೆ ಹಾರಿದಳಂತೆ

ಅಧ್ಯಯನ ಓದೋನಿಗೆ ಮಧ್ಯಾಹ್ನಕ್ಕೆ ಹಿಟ್ಟಿಲ್ಲ.

ಅಪ್ಪಸತ್ತರೂ ಇರಬಹುದು ಅರಗಳಿಗಿರೋಕಾಗ್ದು.

ಅಪ್ಪ ಹೇಳಿದ ಹಾಗೆ ಕೇಳೆ ಅವ್ವಬಡ್ಡಿ.

ಅಳಿಯು ಮನೇತೊಳಿಯು.

ಅಸಲಿಗೆ ಮೋಸ ಬಡ್ಡಿಗೆ ಗುದ್ಯಾಟ.

ಅರವತ್ತುವರುಷಕ್ಕೆಅರುಳೋಮರುಳೊ.

ಅಕ್ಕಸಾಲಿಗ ಅಕ್ಕನಚಿನ್ನಾನೂ ಬಿಡ.

ಅತ್ತೇಮನೇಲಿ ಹೇಗಿರುವೆ ಮಗಳೇಅಂದ್ರೆ ಚಿಲಕಕ್ಕೆಮೊಳಕ್ಕೆ ತಗಲಿದಹಾಗೆ ಅಂದ್ಲು.

ಅಯ್ಯೋ ನಂದೋರಾಜಾಭವಿಷ್ಯತಿ.

ಅಪ್ಪ ಹಾಕಿದ ಆಲದಮರವೆಂದು ನೇಣು ಹಾಕಿಕೊಳ್ಳುವುದಕ್ಕಾಗುವುದೇ.

ಅಪ್ಪನಸ್ವತ್ತು ಮಗನಿಗೆ ಶತ್ತೇಸಮಾನ.

ಅಪ್ಪನಕೂಡ ಉಂಡ್ರೇನು ಅವ್ವನಕೂಡಾ ಉಂಡ್ರೇನು.

ಅಡ್ಡಗೋಡೇಮೇಲೆ ದೀಪ ಇಟ್ಟಹಾಗೆ ಮಾತು.

ಅವನಿಗೆ ಅಯ್ಯೋ ಅಂದ್ರೆ ಆರುತಿಂಗಳು ಪಾಪ.

ಅನಾಥರ ಬದುಕಿಗೆ ಆಕಾಶವೆ ಕಾವಲು.

ಅರಳುತಿನ್ನೋಬಾಯೂ ಆಡ್ಕೋಳೋಬಾಯೂ ಒಂದೇ.

ಅಮ್ಮನೋರು ಬರುವ ಹೊತ್ತಿಗೆ ಐನೋರು ಕ್ಕೆ........ಎದ್ದರು.

ಅತ್ತುಹೆದರಿಸಲೋ ಹೇಸಿಗೇಮಾಡಿ ಹೆದರಿಸಲೋ ಅಂದರಂತೆ.

ಅತ್ತೆ ಕತ್ತೇಹತ್ತಿರಕ್ಕೆ ಹೋದರೂ ಚಿಂತಿಲ್ಲ.

ಸೊಸೆ ತಲಬಾಗಿಲಿಗೆ ಬಂದರೆ ಹೋಯ್ತು.

ಅಶ್ವತ್ಥಪ್ರದಕ್ಷಿಣೆ ಮಾಡುವಾಗಲೇ ಹೊಟ್ಟೆ ಮುಟ್ಟಿನೋಡಿಕೊಂಡಳಂತೆ.

ಅತ್ತೇಮೇಲೆಕಣ್ಣು ಅಂಗಡೀಮೇಲೆಕೈ.

ಅರಮನೇ ಭತ್ತಕ್ಕೆ ಹೆಗ್ಗಣಾ ಗುದ್ದಾಡಿದ ಹಾಗಾಯ್ತು.

ಅನ್ನಾಹಾಕಿದ ಮನೇ ಕೆಡೋದಿಲ್ಲ.

ಗೊಬ್ಬರಹಾಕಿದ ಹೊಲ ಕೆಡುವುದಿಲ್ಲ.

ಅತ್ತರೆ ಸಾಯೋಬಡ್ಡಿ ಹೆತ್ತು ಬದುಕುವ ಪಾಪವುಂಟೆ.

ಅಂಗಳದಲ್ಲಿರುವರೆಲ್ಲರೂ ಲಿಂಗವಂತರೇ ಆದರೆ ಒಳಕ್ಕೆಹೋದ ಕೋಳೀ ಕಾಣುವುದಿಲ್ಲ.

ಅಕ್ಕರೆಗಿಲ್ಲದಿದ್ದರೂ ಅಪವಾದಕ್ಕಾದರೂ ಕರಿಯಬೇಕು.

ಅಂಜುತ್ತಾ ಅಂಜುತ್ತಾ ಆಕಾಶವೇ ತಲೇಮೇಲೆಬಿತ್ತಂತೆ.

ಅಟ್ಟಅಡಿಗೆ ಮಿಗಲಿಲ್ಲ ಅಪ್ಪಂತೋರು ಉಣಲಿಲ್ಲ.

ಅಯ್ಯೋ ಈ ಊರಲ್ಲಿ ಅಗಸನೇ ಧರ್ಮಿಷ್ಠ ಅಂದ್ನಂತೆ.

ಅಪ್ಪನನ್ನೇ ಅಪ್ಪ ಅನ್ನದವನು ಚಿಕ್ಕಪ್ಪನನ್ನು ಅಪ್ಪ ಅನ್ನೋ ಪಾಪವುಂಟೋ ?

ಅಗಸನಿಗ್ಯಾಕೆ ಆರಂಬದಾಸ್ಯೆಯ್ಯನಿಗ್ಯಾಕೆ ದನಕರ.

ಅವನೇನು ಅಂಗೈಲೇ ವೈಕುಂಠತೋರ್ಸ್ತಾನೆ.

ಅಂಗ್ಡ್ಯ್ಯನು ಓಡಿಬರುತ್ತಾನೋ ಸಿದಾನವಾಗಿ ಬರುತ್ತಾನೋ ಅನ್ನುವುದನ್ನೇ ಕಾಯುತ್ತಾನೆ.

ಅಂಗೈ ಮಣ್ಣಾದರೆ ಅಂಗಳಿಗೆ ಗಂಜಿ.

ಅರಸನ ಅಂಕೆಯಿಲ್ಲ ದೈವದಕಾಟವಿಲ್ಲ ಹಾಯಾಗಿದೆ.

ಅಡಕೆ ಅಗೆದುಹಾಕು ಬಾಳೆ ಆಳ ತೆಂಗು ತೇಲಿಸಿ.

ಅಳಿಲು ಸೇವೆ ಮಳಲು ಭಕ್ತಿ.

ಅಳಿಯನ ಕುರುಡು ಬೆಳಗಾದ್ರೆ ಗೊತ್ತಾಗುತ್ತೆ.

ಅಂತೂ ಇಂತೂ ಕುಂತೀಮಕ್ಕಳಿಗೆ ರಾಜ್ಯವಿಲ್ಲ.

ಅಳುವವರ ಕಣ್ಣು ಒರಸಿದಹಾಗೆ.

ಅವರೇನು ಗೋಮುಖದ ವ್ಯಾಘ್ರ.

ಅಕ್ಕಿಆಯ್ಕೊಂಡು ತಿನ್ನು ಅನ್ನ ಚೆಲ್ಲಿ ತಿನ್ನು.

ಅವನೇನು ಹೆಗ್ಗಣ ಮಣ್ಣುಕೆರೆಯುವಂತೆ ಎಲ್ಲಾ ತನ್ನ ಕಡೆಗೇ...........

ಅಜ್ಜಿ ನೂತದ್ದೆಲ್ಲ ಅಜ್ಜನ ಉಡಿದಾರಕ್ಕೇ ಆಯ್ತು.

ಆಶೇತೋರಿಸಿ ಮೋಸಮಾಡಿದನಂತೆ.

ಆದರೆ ಅಡಕೇಕಾಯಿ ಹೋದರೆ ಹುಣಸೇಕಾಯಿ

ಆಸೆಗೆ ಮಿತಿಯಿಲ್ಲ ಸಾಯೋದು ತಪ್ಪಲಿಲ್ಲ.

ಆರು ದೋಸೇಕೊಟ್ಟರೆ ಅತ್ತೇಕಡೆ ಮೂರುದೋಸೆ ಕೊಟ್ಟರೆ ಸೊಸೇಕಡೆ.

ಆರತೀತೆಗೆದುಕೊಂಡರೆ ಉಷ್ಣ ತೀರ್ಥ ತೆಗೆದುಕೊಂಡರೆ ಶೀತ.

ಆತುರಗಾರನಿಗೆ ಬುದ್ಧಿ ಮಟ್ಟ.

ಆನೇಭಾರ ಆನೆಗೆ ಇರುವೇಭಾರ ಇರುವೆಗೆ.

ಆಚೇಮನೆಯವಳು ಓಲೆ ಇಟ್ಟುಕೊಂಡಳೆಂದು ಈಚೇ ಮನೆಯವಳು ಕಿವಿ ಕೊಯ್ದುಕೊಂಡಳಂತೆ.

ಅಂಕೆಯಿಲ್ಲದಕಪಿ ಲಂಕೆಸುಟ್ಟಿತು.

## ಆ

ಆನೇಮೇಲೆ ಹೋಗೋನ್ನ ಸುಣ್ಣಾ ಕೇಳಿ.

ಬೊಗಸೇತೊಗೊಂಡು ಭಿಕ್ಷಕ್ಕೆ ಹೋದವರಿಲ್ಲ.

ಆದರೆ ಅಂಕಣ್ಣ ಹೋದರೆ ಡೊಂಕಣ್ಣ.

ಆಚಾರ ಕೆಡ್ಸಲಿಲ್ಲ ಅನಾಚಾರ ಬದುಕಿಸಲಿಲ್ಲ.

ಆಯುಸ್ಸುತೊಗೊಂಡು ಅಡವೀಗೆ ಹೋದವರಿಲ್ಲ.

ಆಳುಕೊಂದಪಾಪ ಆರುತಿಂಗಳಲ್ಲೇ ಕಾಣುತ್ತದೆ.

ಆರಿಸಿ ಇಕ್ಕಲಾರದಬಡ್ಡಿ ಅಟ್ಟಿಕ್ಕ್ಯೋ ದುಂಟೋ.

ಆ ಅನ್ನೋಕೇ ಉಸುರಿಲ್ಲ ಕತ್ತೇಹಾಗೆ ಕಿರಚಿದರಂತೆ.

ಆದದ್ದಕ್ಕೆಮರುಕವ್ಯಾಕೆ ಆಗದ್ದಕ್ಕೆ ಚಿಂತೆಯಾಕೆ.

ಆಳು ಸಡ್ಡೆಯಾದರೂ ಆಯುಧ ಸರಿಯಾಗಿರ ಬೇಕು.

ಇ

ಇಬ್ಬರ ಜಗಳ ಮೂರನೆಯುವನಿಗೆ ಲಾಭ.

ಇರಳು ಕಂಡ ಭಾವೀಗೆ ಹಗಲು ಬಿದ್ದ.

ಇರುವೇಗೂಡಿಗೆ ಬೆಂಕೀ ಇಟ್ಟಹಾಗೆ.

ಇಬ್ಬರು ಹೆಂಡರಕಾಟ ಇರಳು ತಿಗಣೆಯುಕಾಟ.

ಇವತ್ತು ಸತ್ತರೆ ನಾಳೆಗೆ ಎರಡು ದಿವಸ.

ಇಸ್ನೂ ಬುದ್ಧೀಬರೋಕೆ ಬಲೇ ರಾಗೀ ಬೀಸ್ಬೇಕು.

ಇತ್ತಿತ್ತಾಬಾ ಅಂದ್ರೆ ಇದ್ದಮನೇಸೂ ಕಿತ್ತುಕೊಂಡ.

ಇಳಿಯಾ ಮುಳಿಯಾ ಮುಳುಗಿದವನಿಗೆ ಮಳೆಯೇನು ಛಳಿಯೇನು

ಇದ್ದವರಿಬ್ಬರಲ್ಲಿ ಕದ್ದವರ್‍ಯಾರು ಅಂತ.

ಇಲೀಹೋಯ್ತು ಅಂದ್ರೆ ಹುಲೀ ಹೋಯಿತು ಅನ್ನುವರು.

ಇಷ್ಟುಕೆಟ್ಟವಳ ಆಟಾ ನೋಡು, ಅಷ್ಟುಕೆಟ್ಟವಳ ನೋಟಾನೋಡು.

ಈ

ಈಚಲಮರದಕೆಳಗೆ ಮಜ್ಜಿಗೇ ಕುಡಿದಹಾಗೆ.

ಈ ಊರು ನನ್ನಿಂದೆ ಮುಂದೂರು ನನ್ನ ತಲೇಮೇಲೆ.

ಈ ಬೀದೀಲಿ ಜೋಡಿನಲ್ಲಿ ಹೊಡೆದರೆ ಆ ಬೀದೀಲಿ ಹೊಸ ಆಳು.

ಈರಣ್ಣನ ಮುಂದೆ ಬಸವಣ್ಣ ಕೂತಂತೆ.

ಈರುಳ್ಳಿತಿಂದು ಇರಗೊಡದು ಕೀರೇ ತೋಟಕ್ಕೆ ನೀರು ಹೊಯ್ಯಗೊಡದು.

ಉ

ಉಳಲಾರದ ಎತ್ತು ಮೆಳೇಮೇಲೆ ಬಿತ್ತು.

ಉಗುಳನ್ನು ಉಗಿದು ಕಬ್ಬು ನೆಟ್ಟ ಹಾಗಾಯ್ತು.

ಉದ್ದಾಗಿ ಬೆಳದರೇನು ಬುದ್ಧಿ ಬರಲಿಲ್ಲ.

ಉಣ್ಣೋದು ಗಂಜಿ, ಮುಕ್ಕಳಿಸೋದು ಪನ್ನೀರು.

ಉಂಡೆಗಾದರೆ ನಾನು ಹೋಳಿಗಾದರೆ ನೀನು.

ಉಂಡೂಹೋದ ಕೊಂಡೂಹೋದ.

ಉಂಡವನಿಗೆ ಊಟಾ ಇಕ್ಕಬ್ಯಾಡ,

ಉಣ್ಣಲಿಲ್ಲ ಉಡಲಿಲ್ಲ ಹಂಗಾ ಣೆ ತಪ್ಪಲಿಲ್ಲ.

ಉತ್ತರನಪಂಥ ಒಲೇ ಮುಂದೆ ನನ್ನ ಪಂಥ ಎಲೇಮುಂದೆ.

ಉಣ್ಣೋಕುಡೋಕೆ ನಂಟ, ದುಡ್ಡು ಕಾಸಿಗೆ ಒಂಟಿ.

ಉಪ್ಪುಕೊಟ್ಟವನನ್ನು ಮುಪ್ಪಿನತನಕ ನೆನೆ.

ಬಾಳಿದವನಿಗೆ ಎಣ್ಣೇ ಒತ್ತಬ್ಯಾಡ.

ಉಚ್ಚೇಲಿ ಮೀನು ಹಿಡ್ಯೋನ ಸಹ ವಾಸ.

ಉಂಡಮನೆಗೆ ಎರಡು ಬಗೆಯೋನು.

ಉಪಾದ್ರ ಹೆಂಡ್ತೀ ಕಿವೀಗೆ ಇಚ್ಚೋಡಿ ಕರೀಮಣಿ ಅಂತಗಾದೆ.

ಉಂಡರೆ ಎಂಜಲು ಉಟ್ಟರೆ ಮೈಲಿಗೆ ಎಂತಹ ಪ್ರೀತಿಯಪ್ಪಾ.

## ಊ

ಊರಿಗೆ ಸುಂಕಾಬಂದರೆ ರಾಟೆಗೊಂ ದುಕಾಸು.

ಊಟಾ ನಿದ್ದೆ ಪಾಟಾ ಮಾಡಿದಹಾಗೆ.

ಊರು ಹೋಗುಅನ್ನುತ್ತದೆ ಕಾಡು ಬಾ ಅನ್ನುತ್ತದೆ ಇನ್ಯಾಕೆ ಈ ದುರಾಶೆ.

ಊರುಹೋದಮೇಲೆ ಹೆಬ್ಬಾಗಿಲು ಹಾಕಿದರಂತೆ.

ಊರು ಒಳ್ಳೇದಾದ್ರೇನು ಉತ್ಪಾತಕರು ಹೆಚ್ಚು, ನೀರು ಒಳ್ಳೇದಾದ್ರೇನು ಮೊಸಳೇಕಾಟ.

ಊರಿಗೆ ಮಾಡಿದ ಉಪಕಾರ ಹೆಣಕ್ಕೆ ಮಾಡಿದ ಶೃಂಗಾರ.

ಊಟಕ್ಕೆಮುಂಚೆ ನೀರಿಗೆ ಹಿಂಚೆ.

ಊಟಾಸಿಕ್ಕೋದು ಮೊಕದಪುಣ್ಯ ಸೀರೇಸಿಕ್ಕೋದು ಮಗಳಪುಣ್ಯ.

ಊರಮೇಲೆ ಊರುಬಿದ್ರೆ ಶ್ಯಾನುಭೋಗನ ಮಿಾಶೆಗೇನು.

ಊರಲ್ಲಿ ಇಲ್ಲದವನನ್ನು ಹೆಸರು ಹಿಡಿದು ಕರೆದಹಾಗೆ.

ಊರಿಗೆ ಬಂದವಳು ನೀರಿಗೆ ಬರದೇ ಹೋ ದಾಳಾ.

ಊಟಾ ತನ್ನಿಚ್ಛೆ ನೋಟಾ ಪರರಿಚ್ಛೆ.

ಊಟಕ್ಕಿಲ್ಲದ ಉಪ್ಪಿನಕಾಯಿ ಯಾತಕ್ಕೊ ?

ಊರಿಗೊಬ್ಬಳು ಪದ್ಮಾವತಿಯಾದರೆ ಬಲುಹೆಮ್ಮೆ.

ಊರು ದನಾನೆಲ್ಲಾ ಕಾಯ್ದು ದೊಡ್ಡಗೌಡ ಅನ್ನಿಸಿಕೊಂಡನಂತೆ.

## ಎ

ಎಣ್ಣೇ ಬಂದಾಗ ಕಣ್ಣುಮುಚ್ಚಿಕ್ಕೊಂಡರು.

ಎಲ್ಲಾ ಹೋಗುವಾಗ ಅಧರ್ಾಬಿಡೋನೇ ಜಾಣ.

ಎಕ್ಕಡದೊಳಗೆ ಕಲ್ಲು ಸಿಕ್ಕಿಹಾಕಿಕೊಂಡ ಹಾಗಾಯ್ತು.

ಎಲ್ಲೋ ಓಬೀರಾಯನಕಾಲದ ಮಾತಾಡ್ತೀಯಲ್ಲೋ.

ಎತ್ತು ಈಯಿತು ಅಂದ್ರೆ ಕೊಡ್ಗೇಲಿ ಕಟ್ಟು ಅಂದನಂತೆ

ಎತ್ತಿಗೆ ಜ್ವರಾಬಂದರೆ ಎಮ್ಮೆಗೆ ಬರೇ ಹಾಕಿದರಂತೆ.

ಎತ್ಲಾಗಿ ಹೋದ್ರೂ ಥುತ್ತು ಬಾಯಿಗೇ ಬರಬೇಕು.

ಎಂಜಾಲ್ಹೆ ಎತ್ತೂ ಅಂದರೆ ಉಂಡೋರು ಎಷ್ಟುಜನ ಅಂದನಂತೆ.

ಎರಡು ದೋಣೀಮೇಲೆ ಕಾಲಿಟ್ಟಹಾಗಾಯ್ತು.

ಎತ್ಗೋತ್ಗೆ ಕಳ್ಳ ನಡೂನ ಉಡಗೆಜ್ಜೇನೆ ಕದ್ದ.

ಎಲ್ಲರ ಮನೆಯ ದೋಸೆಯೂ ತೂತೇ.

ಎತ್ತು ಏರಿಗೆ ಎಳೆದರೆ ಎಮ್ಮೆ ನೀರಿಗೆ ಎಳೆಯಿತು.

ಎಮ್ಮೇಮೇಲೆ ಮಳೇ ಹೊಯ್ದಹಾಗೆ.

ಎಂತ ದಕ್ಷಿಣೆಯೋ ಅಂತ ಪ್ರದಕ್ಷಿಣೆ.

ಎದ್ಯಾ ದಾಸ್ಯಯ್ಯಾ ಅಂದರೆ, ಕಡಾಸು ಕಂಕುಳಲ್ಲಿ ಅಂದನಂತೆ.

ಎಂತೆಂತವರಿಗೋ ಅಂತರಾಟ ಸುಮ್ಮನಿರೋ ಕಕ್ಕಾಟ

ಎತ್ತಿಲ್ಲದೋನಿಗೆ ಎದೆಯಿಲ್ಲ.

ಎತ್ತಿದ ಗುದ್ಲಿ ಇಳಕಬ್ಯಾಡ ಒಡೆಯನಿಗೆರಡು ಬಗೆಯಬೇಡ.

ಎಲ್ಲರೂ ರಾಜರಾದರೆ ಪಲ್ಲಕ್ಕೀ ಹೊರುವರು ಯಾರು.

ಎಡವಿದಕಾಲೇ ಎಡವಿದಹಾಗಾಯ್ತು.

ಎದುರಿಗೆ ಹೋದರೇ ನೀರುಮಜ್ಜಿಗೆ ಕೊಡದವಳು ಆಳು ಕಳುಹಿಸಿದರೆ ಕೆನೆಮೊಸರು ಕೊಡುವಳೇ.

## ಏ

ಏನೋಗಾಡಾ ಓಡಾಟಾ ಅಂದರೆ ಶ್ಯಾನುಭೋಗರ ಮನೇಲಿ ದೇವರೂಟ ಅಂದ್ನಂತೆ.

ಏನು ಕಂಚೀಗೋಪುರ ಕಾಗೇ ಹೊತ್ಕೊಂಡು ಹೋದದ್ದು.

ಏನು ಬೆಕ್ಕಿಗೆ ಜ್ವರಬರೋ ಮಾತಾಡುತ್ತೀಯಲ್ಲಾ.

## ಐ

ಐಯ್ಯರ್ ವಾಳಿಕಿ ವಿದ್ಯಮೂ ಲೇದು ಗರ್ವಮೂ ಲೇದು.

## ಒ

ಒಡ್ಡೋಕೆ ಲಗ್ಗೆಯಿಲ್ಲ ಹೊಡೆಯೋಕೆ ಚಂಡಿಲ್ಲ.

ಒಳಗೆರೇಕ್ಕೈಲಿ ಕತ್ತೆಮುನಿಸಿ ಕೊಂಡಿತಂತೆ.

ಒಲ್ಲದ ಗಂಡನಿಗೆ ಮೊಸರಿನಲ್ಲಿ ಕಲ್ಲಿತ್ತು.

ಒಕ್ಕಲಿಗನ ಸಂಪತ್ತು ಹಾರವರ ಹಿಕ್ಮತ್ತು.

ಒಂದು ರೂಪಾಯಿದ್ದರೆ ಒಂದಾನೇ ಬಲ.

ಒಳ್ಳೇಯವನ ಮಾನ ಹಳ್ಳೀಲಿ ಹೋಯಿತು.

ಒಡಕುಬಾಯಿಯೂ ತೂತು ಹರಬಿಯೂ ಒಂದೆ.

ಒಬ್ಬರಿಗೆ ಕೊಟ್ಟಿದ್ದೇ ಬಂತು ಇಬ್ಬರಿಗೆ ಇಕ್ಕಿದ್ದೇ ಬಂತು.

ಒಳಗಳ್ಳನನ್ನು ಹಿಡಿಯುವುದು ಕಷ್ಟ ಒಡೆದ ಕೆರೆ ಮುಚ್ಚೋದು ಕಷ್ಟ.

ಒಬ್ಬರಿಗಿಬ್ಬರು ಲೇಸು ಗುಡಿಸಲಿಗೆ ಮನೇ ಲೇಸು.

ಒಲಿದರೆ ನಾರಿ ಮುನಿದರೆ ಮಾರಿ.

ಒಳಗೆ ಪೊಳ್ಳಿನಜ್ಞಾನ ಮೇಲೆ ಬ್ರಹ್ಮನಜ್ಞಾನ.

ಒಕ್ಕಲಿಗಮಡ್ಡೊ ಮರಮಡ್ಡೊ.

ಒಂದು ತಲೆಗೆ ಎರಡು ತುರುಬು ಏನುಚಂದ.

ಒಂದು ಕ್ಷಣದ ಭೋಗ ಸಾಯೋ ತನಕ ರೋಗ.

ಒರಳಿಗೆ ತಲೇಹಾಕಿ ಒನಕೇ ಏಟಿಗೆ ಹೇಗಪ್ಪಾ ಅಂದ್ರೆ.

ಒಂದು ಕಣ್ಣಿಗೆ ಬೆಣ್ಣೆ ಒಂದು ಕಣ್ಣಿಗೆ ಸುಣ್ಣ.

## ಓ

ಓದಿದರೆ ಮಲ್ಲೋಗರವೇ ?

ಓಡ್ಹೋಗೋ ಬಡ್ಡಿ ಹಾಲಿಗೆ ಹೆಪ್ಪು ಹಾಕುವಳೆ ?

## ಕ

ಕಪೀ ಕುಣಿಯುತ್ತದೆ ಸೈ ಅನ್ನಿ, ಮೇಲೆ ಬೀಳುತ್ತದೆ ಛೆ ಅನ್ನಿ.

ಕಳ್ಳನು ಹೊಕ್ಕಮನೆಗೆ ಎಣ್ಣೆಯೊಂದು ದಂಡ.

ಕಬ್ಬಿಣವನ್ನು ಕಾದಾಗಲೇ ಬಡಿಯ ಬೇಕು.

ಕಟ್ಟೇಕಲ್ಲು ಕಿತ್ತಹಾಗಾಯಿತು.

ಕಬ್ಬಿಣದ ಸಹವಾಸದಿಂದ ಬೆಂಕಿಗೆ ಏಟು.

ಕೊಟ್ಟು ನಿಷ್ಠೂರವಾಗುವುದಕ್ಕಿಂತ ಕೊಡದೇ ನಿಷ್ಠೂರವಾಗುವುದು ಒಳ್ಳೆಯದು.

ಕುರುಡನ ಕೈಯ್ಯಲ್ಲಿ ರೊದೊಣ್ಣೆ ಕಿತ್ತು ಕ್ಕೊಂಡಹಾಗಾಯಿತು.

ಕೇಳುವವನಿಗೆ ಹೇಳುವವನು ಅಡಿ ಯಾಳು.

ಕೂಳಿಗೆ ಬಡತನವಾದರೆ ಕುಲಕ್ಕೇನು ಬಡತನ.

ಕೊಡೋದೊಂದುಕಾಸು, ಕೋಣೆ ತುಂಬಾ ಹಾಸು.

ಕತ್ತೇ ಬಲ್ಲದೇ ಕಸ್ತೂರೀ ಗುಣನಾ.

ಕಾಮನಿಗೆ ಕಣ್ಣಿಲ್ಲ.

ಕುಂಬಳಕಾಯಿ ಕಳ್ಳಾ ಅಂದರೆ ಹೆಗಲು ಮುಟ್ಟಿನೋಡಿಕ್ಕೊಂಡನಂತೆ

ಕೆರೆಯು ಬತ್ತಿಹೋಗಿ ಭಾವೀಕಡೀಗೆ ಬಂದ ಹಾಗಾಯಿತು.

ಕೂತುಮಲಗುವನೇ ಜಾಣ.

ಕುಂಬಾರನಿಗೆ ವರ್ಷ ದೊಣ್ಣೆಗೆ ನಿಮಿಷ.

ಕಾಂಚಾಣಂ ಕಾರ್ಯಸಿದ್ಧಿ ಅಂತ.

ಕೈಕೆಸರಾದರೆ ಬಾಯಿಮೊಸರು.

ಕೆಟ್ಟಕಣ್ಣಿನ ನೋಟಕ್ಕೆ ಕಲ್ಲು ಕಂಭ ಸಿಡಿಯಿತು.

ಕೋಣಸಮುಂದೆ ಕಿನಡಿ ಬಾರಿಸಿದ ಹಾಗಾಯ್ತು.

ಕಳ್ಳನನ್ನು ನಂಬಿದರೂ ಕುಳ್ಳನನ್ನು ನಂಬಬೇಡ.

ಕುದ್ರೆ ಬಾಲಾ ಬೀಸಿದರೆ ತನ್ನಲಾಯಕ್ಕೆ ಜೀಸುತ್ತದೆ.

ಕಾಮಾ (ಬೆಕ್ಕು) ಕೊಂದಪಾಪ ಕಾಶೀಗೆ ಹೋದರೂ ಬಿಡದು.

ಕುರುಡು ಚಿತ್ತೆಮಳೆ ಎರಚಿದತ್ತ ಬೆಳೆ.

ಕುಣಿಯೋಕೆ ಬಂದಮೇಲೆ ಮುಸಕೇನು.

ಕುಣಿಯಲಾರದ ಸೂಳೆಗೆ ಅಂಕಣವೇ ಡೊಂಕು.

ಕೊಡಲೀಕಾವು ಕುಲಕ್ಕೆ ಮೃತ್ಯು.

ಕೆತ್ತುತ್ತಾ ಕೆತ್ತುತ್ತಾ ಶಿಗುರು ಇದ್ದೇ ಇದೆ.

ಕಾಡಿನಲ್ಲಿ ಹೊಂಬಾಳೆ ಹುಡಿಕಿದ ಹಾಗಾಯ್ತು.

ಕಳ್ಳಕಳ್ರು ಸಂತ್ಗೇಕಟ್ಟಿದ ಸಮಾಚಾರ.

ಕಸಾಕೊಟ್ರೂ ರಸಾಮಾಡೋನೇ ಜಾಣ.

ಕೆಳಕ್ಕೆ ಬಿದ್ದರೂ ಮಿಾಶೆ ಮಣ್ಣಾಗ

ಕುಯ್ದು ತಂದ ಅಣ್ಣೇಸೊಪ್ಪು ಕೊಂಡು ಕ್ಕೊಂಡ ರಾಗಿ ಅಣ್ಣಾ ಚಂದಾಗುಂಡಾ ನಾ ನೋಡು ಅಂದ್ಲಂತೆ.

ಕಾಲವು ಹೋಗುತ್ತದೆ ಮಾತು ನಿಲ್ಲುತ್ತದೆ.

ಕಳ್ಳತನಕ್ಕೆ ಕಲ್ಲೂ ಸಹಾಯವಾಗುತ್ತದೆ.

ಕಣ್ಣಿಗೆ ಹತ್ತಿರ ಕಾಲಿಗೆ ದೂರ.

ಕೈಸಾ ನಿಯತ್ ವೈಸಾ ಬರ್ಕತ್ ಅಂತ.

ಕುಳ್ಳಾಕೆಡಿಸಿದ ಕೊಳ್ಳೇಗಾಲಾನಾ.

ಕತ್ತೆಗೂ ಕುದುರೆಗೂ ಸೋದರಮಾವನೆ.

ಕೈಯ್ಯಲ್ಲಿ ಇಲ್ಲದವನು ಕಳ್ಳ ಹೊಟ್ಟೆಗೆ ಇಲ್ಲದವನು ಬಡವ.

ಕೆಲಸವಿಲ್ಲದ ಕಮ್ಮಾರ ಮಕ್ಕಳ ಮೈ ಕೆತ್ತಿದ.

ಕುಂಬಾರರ ರಾಮನೂ ರಾಮನೆ, ದಶರಥರಾಮನೂ ರಾಮನೇ ಅನ್ನು.

ಕರೆಯುವ ಎಮ್ಮೇಕೊಟ್ಟು ಗುದ್ದುವ ಕೋಣವನ್ನು ತೆಗೆದುಕೊಂಡ ಹಾಗಾಯ್ತು.

ಕೆಟ್ಟಮೇಲೆ ಬುದ್ಧಿಬಂತು ಅಟ್ಟಮೇಲೆ ಒಲೇ ಉರಿಯಿತು.

ಕೈಲಿರೋ ಹುಣ್ಣಿಗೆ ಕನಡಿಯಾಕೆ.

ಕಟ್ಟೇಲಿ ನೀರಿಲ್ಲ, ಹೊಟ್ಟೇಲಿ ಮಕ್ಕಳಿಲ್ಲ ಇನ್ನೇನು.

ಕಸದಲ್ಲಿ ಕಾಸುಕಂಡ್ರೂ ನಾಲಿಗೇಲಿ ತೆಗ್ಯೋನು.

ಕಂಡಿದ್ದು ಹೇಳಿದರೆ ಕೆಂಡದಂತಹ ಕೋಪ.

ಲಿಲ್ಲ ಅಂದ್ಹಂತೆ.

ಕಟ್ಟೇಕೆಳಗೆ ಹೋದನೀರೂ ಮಸಾಣಕ್ಕೆ ಹೋದ ಹೆಣವೂ ಹಿಂತಿರುಗಿ ಬರುತ್ತವೋ ?

ಕುರಿಹೆಗಲಲ್ಲಿ ಹುಡುಕೋದು ಊರಸುತ್ತ.

ಕಾಸಿಗೆತಕ್ಕ ಕಜ್ಜಾಯ.

ಕಾಸಿಲ್ಲ ಕರೀಮಣಿಯಿಲ್ಲ ಧೂಪಾ ಹಾಕಿದ್ದೂ ಹಾಕಿದ್ದೇ.

ಕೊಟ್ಟಾ ಕೊಟ್ಟಾ ಕೊಟ್ಟವನು ಕೆಟ್ಟ (ಅಕ್ಕಸಾಲೆ.)

ಕೊಬ್ಬಿದ ನಾಯಿ ಒಡೆಯನ ಗುರುತು ಅರಿಯದು.

ಕಂಕಳಲ್ಲಿ ದೊಣ್ಣೆ ಕೈಯ್ಯಲ್ಲಿ ಶರಣಾರ್ತಿ.

ಕಂಡಿದ್ದುಬಿಡೇ ಮುಂಡೇ ದೈವ.

ಕುರುಡಣ್ಣ ಕುರುಡನಿಗೆ ದಾರೀ ತೋರಿಸಿದನಂತೆ.

ಕೈಯಿಗೆ ಬಂದ ತುತ್ತು ಬಾಯಿಗೆ ಬರಲಿಲ್ಲ.

ಕಂಕಣದ ಬಲವಿದ್ದರೆ ಕಾಶೀಗೂ ರಾಮೇಶ್ವರಕ್ಕೂ ಮದುವೆ.

ಕಳ್ಳನಮನಸ್ಸು ಹುಳ್‌ಹುಳ್ಗೆ.

ಕತ್ತೇಹೊತ್ತುಕೊಂಡು ಕಣೀಕೇಳಿದನಂತೆ.

ಕಳ್ಳನಹೆಂಡತಿ ಯಾವತ್ತಿದ್ದರೂ ಮುಂಡೆ.

ಕೆಂಪು ಮಿಾಶೆಯವನನ್ನೂ ಕೊತ್ತೀಕಣ್ಣಿನವನನ್ನೂ ನೆಚ್ಚಬೇಡ.

ಕೊಡ್ಡೋದಾತಾ ಇತ್ತಿತ್ತಬರಲಿ ಕೇಳೋ ಕಡಾಹುಟ್ಟಿ ಬಡವಕೆಟ್ಟ.

ಕೀಳುಮೇಲು ಮೇಲುಕೀಳು.

ಕೈತೋರಿಸಿ ಅವಲಕ್ಷಣ ಅನ್ನಿಸಿಕ್ಕೊಂಡ ಹಾಗಾಯ್ತು.

ಕುಂಡೇಮೇಲೆ ಹೊಡೆದರೆ ದವಡೇಹಲ್ಲು ಉದುರಿತು.

ಕನ್ನಡ ಕಸ್ತೂರಿ ಅರವು ಅಧ್ವಾನ ಕಣೋ

ಕೆರೆಕಿತ್ತರೆ ಬೈಲುಮೇಲೆ.

ಕಬ್ಬು ಡೊಂಕಾದರೆ ಸೀಯೂ ಡೊಂಕೆ.

ಕುದುರೇ ಹಿಂದೆ ಹೋಗಬೇಡ, ದನದ ಮುಂದೆ ಹೋಗಬೇಡ

ಕಾಲಾ ಕೆಟ್ಟುಹೋದಕಾಲಕ್ಕೆ ಕಾಗೇ ರಾಗೀ ತಿಂತು.

ಕರೆದು ಹೆಣ್ಣುಕೊಟ್ಟರೆ ಮಲ್ಲೋಗರ ಬಂತಂತೆ.

ಕುಟುಕರ ಅಂಗಡೀಲಿ ಬಸವಪುರಾಣ ಹೇಳಿದ ಹಾಗಾಯ್ತು.

ಕೂತುಕ್ಕೊಂಡು ಉಣ್ಣುವವನಿಗೆ ಕುಡುಕೇ ಹಣಾ ಸಾಲದು. (ಸೋಮಾರಿಗೆ)

ಕೊಟ್ಟವರ ಗಂಟು ಕೊಟ್ಟರೆ ಸಂಗೇನು ಉಳಿಯಿತು ಅಂದನಂತೆ.

ಕೊಳ್ಳೋ ಅನ್ನುವುದು ನಮ್ಮ ವಂಶದಲ್ಲೇ ಇಲ್ಲ; ತತ್ತಾ ಅನ್ನುವುದು ನಮ್ಮ ತಲೆತಲಾಂತರಕ್ಕೂ ಉಂಟು.

ಪಾಪಿ ಅತ್ತತ್ತಲೇ ಹೋಗಲಿ ಅಂದನಂತೆ.

ಕುಂಟೆತ್ತು ಹೊಲಕ್ಕೆ ಮೂಲ. (ನಾಶಕರ)

ಕೋಪಾಬಂದಾಗ ಕತೇಕೇಳು ಧನಾ ಬಂದಾಗ ದಾನಾಮಾಡು.

ಕಾಡುಕೋಳಿ ಮಕರಸಂಕ್ರಾಂತಿ

ಕರುಬಲ (ಹೊಟ್ಟೇಕಿಚ್ಚಿನವ) ನಿಗೆ ಕ್ಷಯ.

ಕೂಳುಚಲ್ಲಿದರೆ ಕಾಗೆಗೇನು ದರಿದ್ರ.

ಕೊಳಗದ ಕೈಲಿ ಬಳ್ಳಾ ಮುನ್ನಿಕ್ಕೊಂಡಿತಂತೆ.

ಕಂಡವರ ಗಂಟು ಹೊಡೆದು ಕಾರ್ಥಬ್ಬ ಮಾಡದಿದ್ದರೇನು ?

ಕುಡಿದವನು (ಹೆಂಡ ಕುಡಿದವನು) ಬಲ್ಲನೆ ಪಿಸುಮಾತ.

ಕಾಯಿಗಿಂತ ಜುಟ್ಟೇ ಉದ್ದವಾದಂತೆ.

ಕಂಡವರ ಮನೆ ಕಡುಬು ನೆಚ್ಚಿಕೊಂಡು ತನ್ನ ಮನೇಲಿ ಪಾಯಸ ಕಾಸಿದಂತಾಯ್ತು.

ಕೆಲ್ಸಾಮಾಡಿದರೆ ಕಡಲೇ ತಿಂದು ಕೈ ತೊಳದಂತಿರಬೇಕು.

ಕಾಣದ ಊರಿಗೆ ನಾಲಿಗೆಯೇ ದಾರಿ.

ಕಂಚುಮುಟ್ಟು ಸಗವಲ್ಲ ದನ ಧಾನ್ಯವಲ್ಲ.

ಕುಲಾಸೋಸಿ (ಶೋಧಿಸಿ) ಹೆಣ್ಣುತತ್ತಾ ನೆಲಾಸೋಸಿ ನೀರುತತ್ತಾ.

ಕೋಪಕ್ಕೆ ಮೂಗು ಕೂಯಿಸಿಕ್ಕೊಂಡಂತೆ

ಕಾಸಿಗೆ ಒಂದು ಸೀರೆಯಾದರೂ ನಾಯಿ ಮೈ ಬೆತ್ತಲೆ.

ಕೂದಲು ಸುಟ್ಟರೆ ಇಜ್ಜಲಲ್ಲ ಬೂದಿಯಲ್ಲ.

ಕಾಗೇಕೊಂದವನಿಗೆ ಕಾಮಾಲೆ.

ಕಪೀಗೆ ಹೆಂಡಾ ಕುಡಿಸಿದ ಹಾಗಾಯ್ತು.

ಕೊಟ್ಟವರೊಡವೆ ಕೊಡಲಿಲ್ಲ ಬಿದ್ದಗೋಡೆಹಾಕಲಿಲ್ಲ ಜಂಭಾಮಾತ್ರ ಬೆಟ್ಟದಷ್ಟು.

ಕೋಟೀ (ರೂಪಾಯಿ) ಕೊಟ್ಟು ಕೂಟಾ ಕಟ್ಟು.

ಕಬ್ಬಿಣದ ಅಂಗಡೀಲಿ ನೊಣಕ್ಕೇನು ಅಗ್ಗ.

ಕೆಲಸಕ್ಕೆ ಕಳ್ಳ ಊಟಕ್ಕೆ ಸಿದ್ಧ.

ಕೆಟ್ಟು ಪಟ್ಟಣಾ ಸೇರು.

ಕಿವಿಹರ್ಕಿಯಾದರೂ ಕಿರೀ ಹೆಂಡತಿಯಲ್ಲವೆ ?

ಕೋಳೀಕೇಳಿ ಸಂಬಾರ ಅರ್ದಾರಾ?

ಕಾಸಿಲ್ಲದೇ ಕೈಲಾಸಕ್ಕೆ ಹೋಗ್ತೀನಿ ಅಂದ್ರೂ ಹೊರವ್ರೇ ದಿಕ್ಕಿಲ್ಲ.

ಕೊಡೋಕಾಸು ಕೊಡ್ತಾ ಕೊಳಕು ಮಜ್ಜಿಗೆ ಕುಡಿದಂತಾಯ್ತು.

ಕಂಬಾ ಊರ್ಗೋಲು ಮಾಡಿಕೊಂಡಂತಾಯ್ತು.

## ಖ

ಖಂಡಿತವಾದಿ ಲೋಕವಿರೋಧಿ.

ಖಂಡುಗ ಹಾಲಿಗೆ ತೊಟ್ಟುವಿಷಬಿಟ್ಟಂತೆ.

## ಗ

ಗುರುತುಕಂಡ ಕಳ್ಳ ಜೀವಸಹಿತ ಬಿಡ.

ಗಾಳಿ ಬಂದಾಗ ತೂರಿಕೊಳ್ಳುವನೇ ಜಾಣ.

ಗಂಡಸಿಗ್ಯಾಕೆ ಗೌರೀ ದುಃಖ.

ಗೂಬೇಕೈಲಿ ಸೋಬಾನೆ ಹಾಡಿಸಿದ ಹಾಗೆ

ಗಂಡ ಇಲ್ಲದವಳು ತುರುಬು ನೆನಸಿಕೊಂಡ ಹಾಗೆ.

ಗಾಣ್ಗಿತ್ತಿ ಅಯ್ಯೋ ಅಂದ್ರೆ ನೆತ್ತೀ ತಣ್ಣಗಾಯಿತೆ?

ಗಾದೇಮಾತು ವೇದಕ್ಕೆ ಸಮಾನ.

ಗಟ್ಟದಕೆಳಗೆ ಉಪ್ಪು ಅಗ್ಗಾದರೆ ಇಲ್ಲೇನು ಬಂತು ಭಾಗ್ಯ.

ಗಂಡಹೆಂಡರ ಜಗಳ ಉಂಡು ಮಲಗುವ ತನಕ.

ಗಾಳೀ ಗುದ್ದಿ ಮೈನೋಯಿಸಿಕೊಂಡ ಹಾಗಾಯ್ತು.

ಗೆದ್ದರೆ ಆಡೋಕೆ ಬಂದೆ, ಸೋತರೆ ನೋಡೋಕೆ ಬಂದೆ ಅನ್ನೋನು

ಗಂಡಹೆಂಡರ ಜಗಳದಲ್ಲಿ ಕೂಸು ಮೆತ್ತಗಾಯ್ತು

ಗಂಡಸಿಗಿಂತ ಹಿರಿಯವಳು ಮಂಡೋದರಿ.

ಗುಟುಕು ನೀರನ್ನು ಗಟಕ್ಕನೆ ನುಂಗಿದೆ ಅಂದನಂತೆ.

ಗುರುವಿಗೇ ತಿರುಮಂತ್ರಾ ಹೇಳೋನು.

ಗಡ್ಡಕ್ಕೆ ಬೇರೆ ಶೀಗೇಕಾಯಿ.

ಗೋಕುಲಾಷ್ಟಮಿಗೂ ಇಮಾಂಸಾಬರಿಗೂ ಏನು ಸಂಬಂಧ.

ಗೊಡ್ಡೀಗೇನುಗೊತ್ತು ಹೆರೋಸಂಕಟ.

ಗಾಣ್ಗಿತ್ತಿ ಕೈ ಹುಟ್ಟೋವಾಗಲೇ ಚೊಟ್ಟು.

ಗಂಟು ಮುರಿಸಿದರೆ ಹೋಯ್ತು, ಹಾಲು ಒಡೆದರೆ ಹೋಯ್ತು.

ಗಟ್ಟಾಹತ್ತಿದರೂ ಹುಟ್ಟುಚಾಳೀ ಹೋಗದು.

ಗರ್ತಿಯಿಂದ ಗೌಡ ನೀತಿಯಿಂದ ಪ್ರೌಢ.

## ಚ

ಚಾಡಿಕಾರನಿಗೆ ಊರೆಲ್ಲಾ ನಂಟರು.

ಚೋಳಿಗೆ ಪಾರುಪತ್ಯ ಕೊಟ್ಟಹಾಗೆ.

ಚಿಕ್ಕಪ್ಪ ತಾನೂ ಇಕ್ಕ ಭಿಕ್ಷಾನೂ ಬೇಡಗೊಡ.

ಚಿಟಕೀಚಪ್ಪರ ಆರುಕಾಲು ಬೇಟೆ.

ಚಿನ್ನದಕತ್ತೀ ಅಂತ ಕತ್ತು ಕೂಯಿದು ಕೊಳ್ಳುವುದಕ್ಕೆ ಆಗುತ್ತದೆಯೇ.

## ಛ

ಛಳಿ ಶಿವರಾತ್ರೀ ಹೊತ್ತಿಗೆ ಶಿವಶಿವಾ ಅಂತ ಹೋಯ್ತು

## ಜ

ಜಗವ ಜಯಿಸಿದರೂ ತನ್ನನ್ನು ತಾನು ಜಯಿಸಲಾರ.

ಜಾಪಾಳದ ಮಾತ್ರೆ ವೈಕುಂಠದ ಯಾತ್ರೆ.

ಜನಮರುಳೊ ಜಾತ್ರೆ ಮರುಳೋ.

ಜಗವನ್ನೇ ಹೊರುವವಳು ಮಗುವನ್ನು ಹೊರಲಾರಳೆ.

ಜಮೇದಾರ್ರ ಕುದುರೇ ಹೋದರೆ ಪಕ್ರುದೀನ್‌ಸಾಬಿ ಗಡ್ಡಕ್ಕೇನು ?

ಜಟ್ಟಿ ಜಾರಿಬಿದ್ದರೆ ಅದೂ ಒಂದು ವರಸೆ.

ಜೇನಿಗ ಬಿಡ ಕೋಮಟಿಗ ಕೊಡ.

ಜೇನು ಇಳಕುವವನು ಕೈ ನೆಕ್ಕದೇ ಬಿಡುವನೆ.

ಜಿಪುಣನಿಗೂ ಕಾಸಿಗೂ ಜೀವದೊಡನೆ ಗಂಟು.

ಜನಾ ಮೆಚ್ಚಿಸೋಕೆ ಜಗದೀಶ್ವರನಿಂದಲೂ ಆಗದು.

ಜಾತೀಗೆ ಜಾತಿ ವೈರಿ, ಹಾವಿಗೆ ಮುಂಗಸಿ ವೈರಿ.

ಜಾತ್ರೆ ಕಳೆದಮೇಲೆ ಪರಿಷೆಗೇನು ಅಗ್ಗ.

ಜಾತ್ರೆಗ್ಹೋಗಿ ಜವ್ನವಿಲ್ಲದೆ ಬಂದಮೂರ್ಖ.

## ತ

ತುಂಬಿದ ಸಂತೇಲಿ ನನ್ನ ತುಂಡಂಗಿ ಮಗನ್ನ ಕಂಡ್ರಾ ಅಂದಳಂತೆ.

ತಾನತಾನಕ್ಕೆಲ್ಲಾ ರುದ್ರಾಕ್ಷಿ ತಾನು ಹೋಗೋದು ಮಾದ್ಗಿತ್ತಿ.

ತಿಗಳ ತಾನು ಕೆಡೋದಲ್ದೆ ಸೆರೇನೂ ಕೆಡಿಸಿದ.

ತಾನುಂಟೋ ಮೂರುಲೋಕವುಂಟೋ (ಸ್ವಾರ್ಥತೆ)

ತಾಳಿದವನು ಬಾಳುವನು.

ತಾನು ಕಳ್ಳ ಪರರನ್ನು ನಂಬ.

ತಿಪ್ಪೇಲಿ ಕೂತುಕೊಂಡು ಗೌಳೀಶಕುನ ಕೇಳಿದ ಹಾಗೆ.

ತೀರಿಲ್ಲ ತಿಟುವಟವಿಲ್ಲ ಜಂಭಮಾತ್ರ ತೊಂಬೇ ಅಷ್ಟು.

ತುಂಬಿದ ಕೊಡ ತುಳುಕುವುದಿಲ್ಲ.

ತುತ್ತು ತೂಕಾ ಕೆಡಿಸಿತು.

ತಾನೂ ಉಣ್ಣ ಪರರಿಗೂ ಕೊಡ.

ತಾಯಿ ಮಕ್ಕಳು ಒಂದಾದ್ರೂ ಮಾತು ಮಾತ್ರ ಬೇರೆ ಇರ್ಲಿ.

ತಾಯಿಕರುಳೂ ಹೊಂಗೇ ನೆಳಲೂ ಒಂದೇ.

ತಾಯಿ ಮಾಡಿದಂತೆ ಹೊಟ್ಟೆ, ಊರು ಮಾಡಿದಂತೆ ಕೊಳಗ.

ತಿರುಕೊಂಡು ತಿನ್ನುವವನನ್ನು ಹಿಡಕೊಂಡು ಹೊಡೆದರು.

ತಾಟಕ ತಲೇ ಹತ್ತಲಿಲ್ಲ ನಾಯಿಗೆ ಮದುವೆ ಆಗಲಿಲ್ಲ.

ತಾನು ಮಾಡೋದು ಉತ್ತಮ ಮಗ ಮಾಡುವುದು ಮಧ್ಯಮ ಆಳು ಮಾಡುವುದು ಹಾಳು.

ತಲೆಬಾಗಿಲಲ್ಲೇ ತಾಯಿ ನೋಡಿದ ಮೇಲೆ ಒಳಗೇನು ನೋಡುವೆ ಮಗಳ ಚಂದವಾ.

ತಾಳು ತಳ್ಳುವುದಕ್ಕೆ ಹೋಗಿ ಬಾಲ ಸಿಕ್ಕಿಸಿಕೊಂಡ ನರಿಯಂತಾಯ್ತು.

ತಲೆಯನ್ನು ಕೂಯಿದು ಇಟ್ಟರೂ ಸೋರೇಬುರುಡೆ ಅಂದರೆ ಇನ್ನೇನು ಮಾಡೋಣ.

ತನ್ನ ಬಲವೇ ಬಲ, ರಾಗೀ ಫಲವೇ ಫಲ.

ತುಟೀ ಮೀರಿದ್ದು ಕಟವಾಯಿಗೆ ತಗಲಿತು ಅಂತಾಗಾದೆ.

ತಾನು ನೋಡಿದ ಮೊಲಕ್ಕೆ ಮೂರೇ ಕಾಲು ಅಂದ್ನಂತೆ.

ತನ್ನ ಬಾಯಿ ಕೆಟ್ಟದ್ದಾದರೆ ಊರೆಲ್ಲ ಕೆಟ್ಟದ್ದೇ.

ತನ್ನ ಕೈಲಿದ್ದ ಹಗ್ಗಾ ಕೊಟ್ಟು ಹಿಡ ಕಟ್ಟು ಹಾಕಿಸಿಕೊಂಡನಂತೆ.

ತಾನು ತಿನ್ನುವುದೇ ಭತ್ತದ ತವಡು ವಾರಕ್ಕೆ ಹಂದಿ ಮೇಯಿಸುತ್ತೀನೆ ಅಂದನಂತೆ.

ತಲೇಹೂಯ್ಯೋಕೆ ಬಂದವನ ಹತ್ತಿರ ಕತ್ತಿನ ಹುಣ್ಣಿಗೆ ಔಷಧಿ ಕೇಳಿದಹಾಗಾಯ್ತು.

## ದ

ದಣೀತನಕ ದೂರು ಹೋಳೇತನಕ ಓಟ.

ದನಾ ತಿನ್ನುವವನಿಗೆ ಗೊಬ್ಬರದ ಆಣೆ.

ದರಿದ್ರಕ್ಕೆ ಮೈಯ್ಯೆಲ್ಲಾ ಕೂರೆ.

ದೇವರ ಗಂಟೇಹೋದರೆ ಪೂಜಾರಿ ನಂಟರಿಗೇನು ?

ದೊಂಬರ ನಷ್ಟಕ್ಕೆ ಅಗಸನಕತ್ತೆ ಈಡಾದ ಹಾಗಾಯ್ತು.

ದಾಕ್ಷಿಣ್ಯಕ್ಕೆ ಬಸರಾದರೆ ಹೆರೋಕೇ ಜಾಗವಿಲ್ಲ.

ದಾಸಯ್ಯ ಎತ್ತ ದನಕರ ಎತ್ತ.

ದೇವರು ವರಾಕೊಟ್ಟರೂ ಪೂಜಾರಿ ವರಾಕೊಡ.

ದೇವರ ಮಗನಾದರೂ ಮಾಡಿದ್ನೇ ಉಣಬೇಕು.

ದಾನದಾನಕ್ಕೆಲ್ಲಾ ನಿದಾನವೇ ಒಳ್ಳೆಯದು.

ದಂಡಲ್ಲಿ ನೋದರಮಾವನೆ,

ದಿವಸದಕೂಳು ನೆಚ್ಚಿಕೊಂಡು ವರುಷದಕೂಳು ಹಾಳುಮಾಡಿಕೊಂಡಂತೆ.

ದೀವಳಿಗೇಲಿ ದನಾ ಕೆಣಕಬೇಡ.

ದೇಶಾಂತರ ಹೋದರೂ ಸ್ವತಂತ್ರವಾಗಿ ಹೋಗು.

ದುಷ್ಟರ ಕಂಡರೆ ದೂರಾ ಇರು.

ದಾಯಾದೀ ಕಾಟ ದಾರೀ ಬಿಟ್ಟೋಟ.

ದಂಡು ಬರಲಿ ದಾಳಿಬರಲಿ ಉಂಡಿರೋ ಮಗನೆ.

ದುಡ್ಡಿದ್ದವನು ದೊಡ್ಡಪ್ಪ.

ದೋಸೇ ಮೊಗಚಿಹಾಕುವುದು ಎಷ್ಟುಹೊತ್ತು.

ದಾರೀಲಿಬಿದ್ಗೊಂಡು ನನ್ನ ಹಣೇ ಬರ ಅಂದ್ರೆ.

ದನಾಕೊಂದು ಜೋಡು ದಾನಮಾಡಿ ದಂತಾಯ್ತು,

ದೊಡ್ಡವರು ಹಗೇವು (ರಾಗಿ ತುಂಬಿರುವ ಗುಂಡಿ) ಕೀಳುವ ಹೊತ್ತಿಗೆ ಬಡವರ ಪ್ರಾಣ ಹೋಯಿತು,

ದತ್ತಪುತ್ರನಿಗ್ಯಾಕೆ ಪಿತೃಭಕ್ತಿ,

ದೊಡ್ಡಮನೆ ಕಸದಲ್ಲಿ ದುಡ್ಡಿಲ್ದೇ ಉಂಟೆ,

ದೊಡ್ಡೀವಳಗೆ ಹುಲ್ಲುಮೆದೆ ಹಾಕಿದನಂತೆ,

ಧರ್ಮಕ್ಕೆ ದಟ್ಟೀಕೊಟ್ಟರೆ ಹಿತ್ತಲಿಗೆ ಹೋಗಿ ಮೊಳಾ ಹಾಕಿದನಂತೆ,

ಧರ್ಮವೇ ಜಯ,

## ನ

ನಾಯಿ ಹೊಡಿಯುವುದಕ್ಕೆ ಬಣ್ಣಾ ಕೋಲಾಗ ಬೇಕೆ.

ನರೀ ಕೂಗು ಗಗನಾ ಮುಟ್ಟೀತೆ.

ನೀರಲ್ಲಿ ಬಂದದ್ದು ನೀರಿಗೆ, ಹಾಲಲ್ಲಿ ಬಂದದ್ದು ಹಾಲಿಗೆ.

ನೀರಲಿದ್ದ ಕಪ್ಪೇನ ದಡಕ್ಕೆ ಹಾಕಿದ ಹಾಗೆ.

ನಾನೊಲ್ಲೇ ಅಂದ್ರೆ ನಮ್ಮಪ್ಪ ಇನ್ಯಾರಿಗೆ ಮದುವೆ ಮಾಡ್ಯಾನು.

ನಾಯನ್ನು ಪಲ್ಲಕ್ಕಿಯಮೇಲೆ ಕೂರಿಸಿದರೆ ಹೇಸಿಗೇಕಂಡು ಇಳೀಬಿತ್ತಂತೆ

ನವಿಲನ್ನು ನೋಡಿ ಕೆಂಬೂತಿ ಪುಕ್ಕಾ ತರಕೊಂತು.

ನಡೆಯೋದೇ ಒಂದು ನುಡಿಯೋದೇ ಒಂದು.

ನಾಯಿಗೆ ಕೆಲಸವಿಲ್ಲ ನಿಲ್ಲುವುದಕ್ಕೆ ಹೊತ್ತೇ ಇಲ್ಲ.

ನಮ್ಮನೇ ಬೆಂಕಿಯಾದರೇನು ಸುಡೋದು ಬಿಟ್ಟೀತೆ.

ನೀನು ಭತ್ತಾಕುಟ್ಟು ನಾನು ಭುಜಾ ಹಾರಿಸುತ್ತೀನಿ ಅಂದಳಂತೆ.

ನಮ್ಮ ಕೈಕಾಸು ಮೇಲುಗೋಟೆ ನಾಮ.

ನಮಾಜಿಗೆ ಹೋಗಿ ಮಸೀತಿಮೇಲೆ ಬಿದ್ದಹಾಗಾಯಿತು.

ನರಕನ (ಪಾಪಿ) ಸ್ವತ್ತು ನಾಯಿ ತಿಂದಿತು.

ನಂಟ ಮನೆಗೆ ಮೃತ್ಯು ಕುಂಟ ಧೌಡಿಗೆ ಮೃತ್ಯು.

ನಾಯೂ ಹಸಿದಿತ್ತು, ಹಿಟ್ಟೂ ಹಳಸಿತ್ತು.

ನೆಕ್ಕೋ ನಾಯಿಗೆ ಲಿಂಗವೇನು ಪೀಠವೇನು.

ನೀನು ತಂದುಹಾಕು, ನಾನು ತಿಂದು ಹಾಕುವೆನು.

ನಾಯಿ ಬಾಲಕ್ಕೆ ಬೊಂಬುಕಟ್ಟಿದರೆ ಡೊಂಕು ಹೋಗುತ್ತದೆಯೇ ?

ನಡೆಯುವಕಾಲು ಎಡುವುತ್ತದೆ.

ನಾಯಿ ಬಗುಳಿದರೆ ದೇವಲೋಕ ಹಾಳೆ.

ನಗುವಿನ ಮಾತಿನವನು ಕೇಡುಬಯುಸಿದ.

ನೀನು ದಾರೀಬಿಡು ನಾನೇ ಉಗುಳಿಸಿಕ್ಕೊಳ್ಳುವೆನು ಅಂದನಂತೆ.

ನಗುವವರ ಮುಂದೆ ಎಡವಿ ಬಿದ್ದ ಹಾಗಾಯಿತು.

ನೀರಿಗೆ ಬೆರಳುಅದ್ದಿ ಚೀಪಿದಂತಾಯ್ತು.

ನಿಮ್ಮ ಧಾರಣೇಮನೆಹಾಳಾಗ ಮೊದಲು ನನ್ನ ಮಡಲು ತುಂಬಿರೋ ಅಂದನಂತೆ.

ನಿದ್ರೆಕೆಟ್ಟಿಯೋ ಬದ್ಧಿಗೆಟ್ಟಿಯೋ ಅಂತ ಗಾದೆ.

ನಾಯಿಗೆ ಹೇಳಿದರೆ ಅದು ತನ್ನ ಬಾಲಕ್ಕೆ ಹೇಳಿತಂತೆ.

ನದೀನಾಂ ಸಾಗರವೇ ಗತಿ ಅಂತ ಗಾದೆ.

ಬೈಯ್ಯುತ್ತಾ ಮಾತಾಡುವವನು ಮೇಲು ಬಯುಸಿದ.

ನನ್ನ ಎರಡು ಕಣ್ಣೂ ಹೋಗಲಿ ಅವನದು ಒಂದು ಹೋದರೆ ಸಾಕಲ್ಲಾ ಅಂದನಂತೆ.

ನಾಯಿ ಮುಟ್ಟಿದ ಮಡಕೆಯನ್ನು ತಿಪ್ಪೆಗೆ ಬಿಸಾಡೋದೇ.

ನಾಯಿ ತಲೇಮೇಲಿನ ಬುತ್ತಿ ಏನು ಸೆಚ್ಚಿಗೆ.

ನಿತ್ಯಾ ಸಾಯುವವನಿಗೆ ಅಳುವವರ್ಯ್ಯಾರು.

ನಮ್ಮೂರಲ್ಲೇನಪ್ಪಾ ಬದುಕಿದರೆ ಬಡಿದುಕೊಳ್ಳುವರು ಕೆಟ್ಟರೆ ಕೇಕೇ ಹಾಕುವರು.

ನಾಯಿ ಕಡಿದಕಾಲು ಸರಕಕ್ಕೆ ಹೋಗುವತನಕ ನೋವು ತಿನ್ನುವರ್ಯ್ಯಾರು ಹೇಳು.

ನಮ್ಮ ಚಿನ್ನ ಚನ್ನಾಗಿದ್ರೆ ಒಪ್ಪಕ್ಕ್ಯ್ಯಾಕೆ ಅಕ್ಕಾಸಲೇ ಬಳೀಗೆ ಹೋಗಬೇಕು.

ನಾವು ಮುಪ್ಪಾದ್ರೆ ಸ್ವಾಮಿಾ ಮುಪ್ಪಾದಾನಾ.

## ಪ

ಪಂಚಾಂಗ ಹೋದರೆ ನಕ್ಷತ್ರ ಹೋಯಿತೇನು.

ಪಾಪಿ ಸಮುದ್ರಹೊಕ್ಕರೂ ಮೊಳಕಾಲುದ್ದ ನೀರೇ.

ಪಡಿಯಲ್ಲೇ ಹಿಡಿತ ಹಿಡಿಯದವನು ಪಾವಲ್ಲಿ ಹಿಡಿಯೋ ಪಾಪವುಂಟೋ.

ಪಾಳ್ಯದಲ್ಲೇ ತುಳಿದಾಟ ಒಳ್ಳೇಯದಲ್ಲ.

ಪ್ರಾಣಾನಾದರೂ ಬಿಟ್ಟು ಮಾನಾ ಕಾಯ್ದುಕೋ.

ಪ್ರತ್ಯಕ್ಷವಾಗಿ ಕಂಡರೂ ಪ್ರಮಾಣ ಇರಬೇಕು.

ಪಾಪೀಸ್ವತ್ತು ಪರರಪಾಲು.

ಪುರುಳೇಸೌದೆ ಇಲ್ಲದೆ ದೊಡ್ಡಸೌದೆ ಉರಿಯುತ್ತದಯೇ.

ಪುರಾಣ ಹೇಳೋಕೆ ಬದನೇಕಾಯಿ ತಿನ್ನೋಕೆ.

ಪೋಲೀಮುಂಡೇದಕ್ಕೆ ತಾಲೀಕಟ್ಟಿದರೆ ತಾಲಿತಾಳಿ ಪೋಲಿಪೋಲಿ.

ಪುನಗಿದ್ದರೆ ಎತ್ತಲಾಗಾದರೂ ಹಚ್ಚಿಕ್ಕೊಳ್ಳಬಹುದು.

## ಫ

ಫಲವನ್ನು ಹಾಕಿ (ಫಲವೃಕ್ಷಗಳನ್ನು) ಪಾಪಾ ಕಳಕೊಂಡ್ರು.

## ಬ

ಬೇಲೀಗೆ ಓತೀಸಾಕ್ಷಿ ಓತೀಗೆ ಬೇಲೀಸಾಕ್ಷಿ.

ಬರಗೆಟ್ಟದೇವರಿಗೆ ಪರಾವಮಾಡಿದ ಸಮಾಚಾರ.

ಬೆಕ್ಕಿನ ಕತ್ತಿಗೆ ಇಲೀ ಗಂಟೇಕಟ್ಟಿದ ಹಾಗೆ.

ಬೆಳಗಾನಾ ಹೆತ್ತಮಗಾನಾ ನಾಯಿ ಹೊತ್ತು ಕೊಂಡು ಹೋಯ್ತು.

ಬಿಟ್ಟವನಿಗೆ ಸೂಳೆ ಹಿಡಿದವನಿಗೆ ಹೆಂಡತಿ.

ಬಾಯಿಬಡಕ ಬರದಲ್ಲಿ ಗೆದ್ದ.

ಬಡವರ ಮಕ್ಕಳನ್ನು ಭಾವಿಗೆತಳ್ಳಿ ಆಳಾ ನೋಡಿದರಂತೆ.

ಬಾಯಲ್ಲಿಲಲ್ಲ ಅನ್ನೋದ ಕೈಯ್ಯಲ್ಲಿಲಾಲ್ಲ ಅನ್ನು (ಸ್ವಲ್ಪವಾದರೂ ಕೊಡು)

ಬೀದೀಲಿ ಹೋಗುವ ಮಾರಿ ಮನೆಗೆ ಬಂದುಹೋಗು ಅಂದರಂತೆ.

ಬಡವನ ಕೋಪ ಔಡಿಗೆ ಮೂಲ.

ಬೆಳಗಾಗುವತನಕ ರಾಮಾಯಣ ಕೇಳಿ ಬೆಳಗಾಗುತ್ತಲೂ ರಾಮನಿಗೂ ಸೀತೆಗೂ ಏನಾಗಬೇಕೆಂದರಂತೆ.

ಬೆಟ್ಟಾ ಅಗೆದು ಇಲೀ ಕೂಡಿದ ಹಾಗಾಯಿತು.

ಬಗ್ಗಿಕ್ಕೊಂಡು ಉತ್ತರೆ ಕಂಡಾಯಾ ಕೊಡೋದು ತಪ್ಪೀತೆ.

ಬುದ್ಧೀ ಇಲ್ಲದವನು ಉದ್ದಿನ ಬಾಡಿಗೇಗೆ ಹೋದ.

ಬೇಲಿಯೇ ಎದ್ದು ಹೊಲಾಮೇದ ಹಾಗಾಯ್ತು.

ಬೀಸೋದೊಣ್ಣೆ ತಪ್ಪಿದರೆ ಸಾವಿರವರ್ಷ ಆಯುಸ್ಸು.

ಬಾಯಿಬಿಟ್ಟರೆ ಬಣ್ಣಗೇಡು.

ಬಡವರ ಮನೆಗೆ ಭಾಗ್ಯಲಕ್ಷ್ಮಿ ಬಂದಂತೆ.

ಬೆಟ್ಟಕ್ಕೆಲ್ಲಾ ಹಚ್ಚಡಾ ಹೊದಿಸುವರ್ಯಾರು.

ಬಗಳುವ ನಾಯಿ ಕಚ್ಚುವುದಿಲ್ಲ ಕಚ್ಚುವ ನಾಯಿ ಬಗುಳುವುದಿಲ್ಲ.

ಬಡವನಿಗೆ ಯಾಕೆ ಆನೇ ಮೂದೇವಿ.

ಬಿಕ್ಕಳಿಸೋದೆ ಇಷ್ಟು ಹೊತ್ತಾದರೆ ಬಿದ್ಗೋಳೋದು ಇನ್ನೆಷ್ಟು ಹೊತ್ತಿಗೆ.

ಬಿಟ್ಟದಸಾಲಿನಲಿ ದನಾ ತತ್ತಾ ಕೊಟ್ಟ ಸಾಲಿನಸಲ್ಲಿ ಹೆಣ್ಣು ತೆಗೆದುಕ್ಕೊಂಡು ಬಾ.

ಬಲ್ಲವನೇ ಬಲ್ಲ ಬೆಲ್ಲದ ರುಚೀನಾ.

ಬರ್ತಾಬರ್ತಾ ರಾಯರ ಕುದುರೆ ಕತ್ತೆಯಾಯ್ತು.

ಬಡವನನ್ನು ಕಂಡರೆ ಬಿಲ್ಪತ್ರೆ ಬುಸ್ಸೆಂತು.

ಬಲವ್ನೋ ಸಾವಿರ್ಧಾನೆ ಬಲ ಮನಸ್ಸುಮಾತ್ರ ಅರ್ಧಾಳು ಮನಸ್ಸು.

ಬಡವಾ ನೀ ಮಡಗಿದಹಾಗಿರು.

ಬಡತನಕ್ಕೆ ಮೈ ಎಲ್ಲಾ ಬಾಯಿ.

ಬರೀ ಕೈಗೆ ಹಿತ್ತಾಳೆ ಕಡಗಾ ವಾಶಿ.

ಬಿಸಿಲು ಬಂದಕಡೆ ಛತ್ರಿ ಇಡಿಯೋನು.

ಬೆಂದಮನೆಗೆ ಹಿರಿದಿದ್ದೇ ಲಾಭ.

ಬೆಳ್ಳಗಿರುವುದೆಲ್ಲಾ ಹಾಲು ಅಂತ ನಂಬೋನು.

ಬಿಟ್ಟೀ ಕುದುರೆ ಅವರ್ಕೆ ಚೆಬ್ಬೆ.

ಬೆಕ್ಕಿಗೆ ಚೆಲ್ಲಾಟ ಇಲೀಗೆ ಪ್ರಾಣ ಸಂಕಟ.

ಬುದ್ಧಿ ಬ್ರಹ್ಮಾಂಡ ಆಳಬೇಕು ಅನ್ನುತ್ತದೆ ಅದೃಷ್ಟ ಕತ್ತೆಕಾಯಿಸುತ್ತಿದೆ.

ಬಂದೀಖಾನೇಲಿ ಬುತ್ತೀ ಬಿಚ್ಚಿದಹಾಗೆ.

ಭೀಮನಿಗೆ ಭಿಕ್ಷವಿಲ್ಲ, ನಾರಾಯಣನಿಗೆ ಅನ್ನವಿಲ್ಲ ಎಂಥಾ ಊರಪ್ಪಾ ಇದು.

ಬಡಾಯಿಗೆ ಬಳಿದಿಕ್ಕಿ ಬಳಕ್ಕೆಹೋದಲಂತೆ ಕೈ ನೆಕ್ಕೋಕೆ.

ಬೆಣ್ಣೇ ಇಟ್ಟುಕೊಂಡು ತುಪ್ಪಕ್ಕೆ ಅರಸಿದ ಹಾಗೆ.

ಬೆಕ್ಕು ಕಣ್ಣುಮುಚ್ಚಿಕೊಂಡು ಹಾಲು ಕುಡಿದರೆ ಯಾರಿಗೂ ಗೊತ್ತಿಲ್ವೆ.

ಬದುಕಿದಿರೆ ಬಡಾಸಾಬಿ ಕೆಟ್ಟರೆ ಫಕೀರ್‌ಸಾಬಿ.

ಬೈದರೂ ತಾಯಿ, ನೀರಾದರೂ ಮಜ್ಜಿಗೆ.

## ಭ

ಭೂಮೀಬಿಟ್ಟು ಗರಡೀಸಾಧನೆ ಮಾಡೋದುಂಟೆ.

ಭಂಡೀ ಭಂಡಾಟ ಹೇರು ಹೆಡ್ಡಾಟ ತಲೆಹೊರೆ ಪರಮಸುಖ.

ಭಾವೀನೀರಿಗೆ ಬಡಿದಾಟ ಹೊಳೇ ನೀರಿಗೆ ಹೊಡೆದಾಟ.

ಭೀಷ್ಮಾಚಾರ್ಯರಿಗೆ ಸದಾ ನೆಗಡಿಅಂತೆ.

## ಮ

ಮದುವೇ ಮಾಡಿನೋಡು ಮನೇಕಟ್ಟಿ ನೋಡು.

ಮುಪ್ಪಿನಸೂಳೆ ಮಹಾಪತಿವ್ರತೆ.

ಮುತ್ತು ಒಡೆದರೆ ಹೋಯ್ತು ಮಾತು ಆಡಿದರೆ ಹೋಯ್ತು.

ಮಕ್ಕಳ ಮಾತಿಗೆ ಒಕ್ಕಲು ಹೋದರು.

ಮೋಟೀಮರೇಲಿ ಕೋಟೀಗೆದ್ದ.

ಮರಾ ಬಿದ್ಮೇಲೆ ನೋಡು ಪೈರು ಎದ್ಮೇಲೆ ನೋಡು.

ಮಕ್ಕಳು ಹುಟ್ಟೋಕೆಮುಂಚೆ ಕುಲ್ಲಾವಿ ಹೊಲಿಸಿದರಂತೆ.

ಮಲಗುತ್ತಿದ್ದವನಿಗೆ ಹಾಸಿಗೆ ಹಾಕಿಕೊಟ್ಟಹಾಗೆ.

ಮಸಾಣಕ್ಕೆ ಹೋದ ಹೆಣದಂತೆ ಹಿಂತಿರುಗಾತಾ.

ಮೂಸುಗೊತ್ತಿ ಅಣ್ಣಮಾತಾಡ್ದೆ ಮೆದ್ದ.

ಮಾಡುವರನ್ನು ಕಂಡರೆ ನೋಡು ನನ್ನ ಶಿವಪೂಜೆ ವಿಸ್ತಾರವಾ ಅಂದನಂತೆ.

ಮನೆಗೆ ಮಾರಿ ಪರರಿಗೆ ಉಪಕಾರಿ.

ಮಾಡೋದನಾಚಾರ ಮನೇಮುಂದೆ ಬೃಂದಾವನ.

ಮಕ್ಕಳೆಲ್ಲಾ ಮನವಾರ್ತೆ ಮಾಡಿದರೆ ಅಪ್ಪನಿಗ್ಯಾಕೆ ಇಬ್ಬರುಹೆಂಡ್ರು.

ಮೊಕಾ ನೋಡಿ ಮಣೇ ಹಾಕುತ್ತಾರೆ.

ಮೀಶೇ ಬರೋನು ದೇಶಾ ಅರಿಯ.

ಮೆಣಸು ಹುಳಿತರೆ ಜೋಳಕ್ಕೆ ಕಡಮೆಯೇ.

ಮದುವೆಯಾಗದೆ ಹುಚ್ಚು ಬಿಡದು, ಹುಚ್ಚು ಬಿಡದೆ ಮದುವೆಯಾಗದು.

ಮುಂದೆ ಬರುವನಿಗಿಂತ ಹಿಂದೆ ಇದ್ದವನೇ ವಾಶಿ.

ಮುಂಡೇ ಮದುವೆಗೆ ಮೂವತ್ತೆಂಟು ವಿಘ್ನ.

ಮೇಲೆ ನೋಡಿದರೆ ಗಟಾಂಗಟಿ ಒಳಗೆ ಲೊಟಾಂಪಟಿ.

ಮಾಡೋನು ಕಂಬಳಿಯವನು ದೂರೋಪು ದುಪ್ಪಟಿಯವನನ್ನು.

ಮುಂಗೈ ಬಿಟ್ಟು ಮೊಳಕೈ ಹಿಡುಕೊಂಡ.

ಮಲಗಿರುವಾಗ ತಲೇಮೇಲೆ ಕಲ್ಲು ಹಾಕುವನು.

ಮೇಲೆಬಿದ್ದ ಸೂಳೆ ಹಾಗದ ಕಾಸಿಗೂ ಬ್ಯಾಡ.

ಮನಸ್ಸಿನಂತೆ ಮಹದೇವ.

ಮಾಡಬಾರದ್ದು ಮಾಡಿದರೆ ಆಗಬಾರದ್ದು ಆಯಿತು.

ಮದುವೆಯಾಗೋ ಅಂದ್ರೆ ನೀನೇ ನನ್ನ ಹೆಂಡತಿಯಾಗು ಅಂದನಂತೆ.

ಮುಪ್ಪಿನ ಕಾಲದಲ್ಲಾದ ಮಗ ಹೆಗಲಿಗೆ ಭಾರ.

ಮಂಕುದಿಣ್ಣೆ ಮದುವೆಗೆ ಹೋದರೆ ವಾಲಗದವರೆಲ್ಲಾ ಅಟ್ಟಾಡಿಕೊಂಡು ಹೊಡೆದರಂತೆ.

ಮಾಡಿದವರ ಪಾಪ ಆಡಿದವರ ಬಾಯಲ್ಲಿ.

ಮಾತುಬಲ್ಲವನಿಗೆ ಜಗಳವಿಲ್ಲ, ಊಟಬಲ್ಲವನಿಗೆ ರೋಗವಿಲ್ಲ.

ಮಾಡುದ್ದುಣ್ಣೋ ಮಹರಾಯ.

ಮರಿ ಆಸೆಗೆ ಕುಂಡು ಕುದುರೆ ಸಾಕಿದೆ.

ಮಾರೀಕಣ್ಣು ಹೋತನ ಮೇಲೆ.

ಮೋಟುಗುದ್ದಿ ಮನುಷ್ಯನಿಗೆ ಮೂಲ.

ಮನೆ ಅರಮನೆಹಾಗಿದೆ ಮಲಗಿದರೆ ಮಾತ್ರ ನಿದ್ರೆಬರುವುದಿಲ್ಲ.

ಮರಾನೋಡಿ ಚಕ್ಕೇ ಎತ್ತುವನೇ ಜಾಣ.

ಮೂಗಿರುವತನಕ ನೆಗಡಿ ತಪ್ಪುವ ಹಾಗಿಲ್ಲ.

ಮದುವೆಗೆ ಮುಂಚೆ ಬೆಕ್ಕು ಅಡ್ಡಲಾಯಿತು.

ಮನೇ ಕದವನ್ನು ಕೊಟ್ಟು ಬೆಳಗಾನ ನಾಯಿ ಹೊಡೆದರು.

ಮಾತೇ ಮುತ್ತು ಮಾತೇ ಮೃತ್ಯು.
ಮಗೂ ಸತ್ರೂ ತಪ್ಪಲಿಲ್ಲ ಹೇಸಿಗೇ
ನಾಥ ಅಂದ್ಮಂತೆ.
ಮುಚ್ಚಿದ ಕೈ ಶುಭಲಕ್ಷಣ.
ಮನೋ ಜಯಂತು ಮಾಂಡವ್ಯ ಅಂತ.
ಮನಸ್ಸು ಕೆಟ್ಟಾದರೂ ಸೈರಿಸುತ್ತದೆ,
ಕೊಟ್ಟು ಸೈರಿಸುವುದಿಲ್ಲ.
ಮೋಯೋದು ಮೂರುಆಳು ಕಾಯೋ
ರು ಆರುಜನ.

ಯ

ಯಾವೂರೋ ಗೌಡ ಅಂದ್ರೆ ಕಂಬಳಿಗೆ
ಮೂರುಹಣ ಅಂದನಂತೆ.
ಯುಕ್ತಿ ಕಾಣದ ಮುರ್ಖ ಹೆಂಡ್ತಿ
ತಲೇಕೂದಲು ಕಿತ್ತ ಅಂತ.
ಯಾರಿಗೆ ಯಾರೊ ಹರಿದಾಸ.
ಯಾವಳೊ ನಮ್ಮ ಯಜಮಾನ್ರೂ ಕ
ಛೇರಿಗೆ ಹೋಗ್ತಾರೆ ಅಂದಳಂತೆ.

ರ

ರಾಯರಿಗೆ ರಾಜ್ಯವಾದರೂ ರಾಗೀಬೀ
ಸೋದು ತಪ್ಪುವುದಿಲ್ಲ.
ರಾಯರ ಏಕಾಂತ ಮೂರು ಊರುಳ್ಳೀ
ಗೆಡ್ಡೆ.
ರುಪಾಯಿ ಇದ್ದವನು ಶಿಪಾಯಿ.
ರಂಗನ ಮುಂದೆ ಶಿಂಗನೆ.
ರೊಟ್ಟೀಜಾರಿ ತುಪ್ಪದಲ್ಲಿ ಬಿತ್ತು.
ರಾಮಾಯಣ ಅಂದ್ರೆ ಸಾಮಾನ್ಯವೇ
ಆಳಿಗಾಳು ಹೊರೆಭಾರ ಅಂದನಂತೆ.
ರಾಮೇಶ್ವರಕ್ಕೆ ಹೋದರೂ ಶನೇಶ್ವರ
ಬಿಡದು.

ಶ

ಶನಿರಾಯ ಹೆಗಲೇರಿದರೆ ಹೊನ್ನೂ ಸಹ
ಮಣ್ಣು.
ಶೆಟ್ಟರ ಸಾಕ್ಷೀಹಾಗೆ ಹೇಳ್ತೀ
ಯಲ್ಲೋ.
ಶರೀರಕ್ಕೊಂದು ವ್ಯಾಧಿ ದುಃಖ, ಸಂ
ಸಾರಕ್ಕೊಂದು ಕ್ಲೇಶದ ದುಃಖ.
ಶ್ಯಾನುಭೋಗರು ಊರುಮುಂದೆ
ಬೈದರೆ ಕುಲವಾಡಿ ಒಲೆಮುಂದಾದರೂ ಬೈಯ್ಯುವನು.
ಶಿಕ್ಕಿದವರಿಗೆ ಶೀರುಂಡೆಯಾಯ್ತು.
ಶಿಂದಗಟ್ಟದ ದೇವರು ಹಿಂದು
ಮುನ್ನಾಯ್ತು.
ಶೀಗೇ ಮೆಳೇಮೇಲೆ ಬಿದ್ದ ಬಟ್ಟೆಯನ್ನ
ಹೇಗೋ ಹಾಗೆ ತೆಗೆದುಕೊಳ್ಳಬೇಕು.
ಶಿಕ್ಷೆಯಿಂದಲೇ ಮೋಕ್ಷ.
ಶರಣನಗುಣ ಮರಣದಲ್ಲಿ ನೋಡು.

## ಸ

ಸತ್ಯಕ್ಕೆ ಸಾವಿಲ್ಲ, ಸುಳ್ಳಿಗೆ ನೆಲೆಯಿಲ್ಲ.

ಸಾವಿರ ಸುಳ್ಳಾದರೂ ಹೇಳಿ ಒಂದು ಮದುವೇಮಾಡು.

ಸತ್ತವನ ಮೊಕ ಎತ್ಲಾದರೆ ಏನು.

ಸಾಬರೇ ಹೋಗುವಾಗ ಸಾಬರ ಗಡ್ಡಕ್ಕೆ ಹ್ಯಾಗೆ ಅಂದ್ರೆ.

ಸುಮ್ಮನೆ ಯಾಕೆ ಸಾಯ್ತಿ ಕಸಾ ಹೊತ್ತಾದರೂ ಸಾಯಿ ಅಂದಳಂತೆ.

ಸಾವಿರ ಚಿತ್ಕಾರ (ಚಿತ್ರ) ಒಂದು ಮಸೀನುಂಗಿತು.

ಸಾವಿರ ಉಳೀಪೆಟ್ಟು ಬಿದ್ದರೆ ತಾನೇ ಒಂದು ವಿಗ್ರಹ.

ಸತ್ತವರ ಮನೆಯಲ್ಲಿ ಕೆಟ್ಟವರ್ಯಾರು ಅಂದ್ರೆ ಸತ್ತವರೇ ಕೆಟ್ರು.

ಸಮಯಕ್ಕೆ ಆದವನೇ ನಂಟ.

ಸುಂಕದವನೊಡನೆ ಸುಖದುಃಖ ಹೇಳಿದರೇನು.

ಸತ್ತಹಾರುವನೂ ಒಂದೆ ಬದುಕಿದ ಒಕ್ಕಲಿಗನೂ ಒಂದೆ.

ಸಜ್ಜನನ ಕಷ್ಟ ದುರ್ಜನನ ಸಿರಿ ಅಪಾರ ದಿನ ನಿಲ್ಲುವುದಿಲ್ಲ.

ಸತ್ತವರ ಮಕ್ಕಳು ಇದ್ದವರ ಕೈಕೆಳಗೆ.

ಸಂಸಾರ ಗುಟ್ಟು ವ್ಯಾಧಿರಟ್ಟು.

ಸಹವಾಸದಂತೆ ಬುದ್ಧಿ, ಬುದ್ಧಿಯಂತೆ ಲದ್ದಿ.

ಸೋತುಗೆಲ್ಲು ಅಂತಾಗಾದೆ.

ಸನ್ಯಾಸೀಗ್ಯಾಕೆ ಸುರೂಪಪ್ರಾಪ್ತಿ.

ಸಾಯುವವನ ಕಣ್ಣಿಗೆ ಸುಳಿದವನೇ ಜವರಾಯ.

ಸಾಲವೇ ಶೂಲ.

ಸಾವಿರ ಕುದುರೆಗೆ ಯಜಮಾನ ತನ್ನ ಹೆಂಡತಿಗೆ ಕಾಸ್ದಾರ.

ಸಾಲಗಾರ ಸುಮ್ಮನಿದ್ದರೂ ಸಾಕ್ಷಿಗಾರ ಸುಮ್ಮನಿರ.

ಸಂತೇಹೊತ್ತಿಗೆ ಮೂರು ಮೊಳ ನೇಯ್ದರೆ ಸರಿ.

ಸಗಣಿಯವನೊಡನೆ ಜಗಳಕ್ಕಿಂತ ಗಂಧದವನೊಡನೆ ಗುದ್ದಾಟವೇ ವಾಸಿ.

ಸೂಳೆ ಸುಲಿದುಕೊಂಡು ತಿಂದಳು ಮಿಂಡಗಾರ ತಿರಿದುಕೊಂಡು ತಿಂದ.

ಸೂಳೇ ಕೈಲಿ ಭತ್ತಾಕುಟ್ಟಿಸಿದ ಸಮಾಚಾರ.

ಸಂತೆ ಕಟ್ಟುವುದಕ್ಕೆ ಮುಂಚೆ ಗಂಟು ಕಳ್ಳರು ಒಂದ ಹಾಗಾಯಿತು.

## ಹ

ಹಂಚೀಕಡ್ಡಿಮೇಲೆ ಬಿದ್ದರೆ ನಡಾ ಮುರಿದು ಹೋಗುತ್ತೆ ಅಂತೀಯಲ್ಲೊ.

ಹೊಸವೈದ್ಯನಿಗಿಂತ ಹಳೇ ರೋಗಿ ವಾಸಿ.

ಹಾವಿನ ಹೆಜ್ಜೆ ಹಾವಿಗೇ ಗೊತ್ತು.

ಹಾದೀಲಿ ಹೋಗುವವನ್ನು ಕೆಣಕ ಅವನು ಬಂದು ತದಕ.

ಹೊಳೆಯಲ್ಲಿ ಹುಣಿಸೇಹಣ್ಣು ಕದರಿದ ಹಾಗಾಯಿತು.

ಹುಲಿ ಹಳ್ಳಕ್ಕೆಬಿದ್ದರೆ ಆಳಿಗೊಂದು ಕಲ್ಲು.

ಹಬ್ಬಾ ಅಂದ್ರೆ ತಿಥಿ, ತಿಥಿ ಅಂದ್ರೆ ಹಬ್ಬಾ ಅನ್ನೋಳು.

ಹಾವಿನ ಕಾಲು ನೋಡೇನು ಹಾದರಗಿತ್ತಿ ನೆಲೆ ನೋಡಲಾರೆ.

ಹೊಟ್ಟೆಗೆ ಹಿಟ್ಟಿಲ್ಲ ಜುಟ್ಟು ಮಲ್ಲಿಗೆ ಹೂವು ಕೇಳಿತು.

ಹೊಳೇ ದಾಟಿದ ಮೇಲೆ ಅಂಬಿಗರ ಮಿಂಡ.

ಹೊಳೆ ನೀರೆಲ್ಲಾ ಹೋಗಲಿ ಆ ಮೇಲೆ ದಾಟೋಣ ಅಂದನಂತೆ.

ಹೂವಿನ ಜೊತೇಲಿ ನಾರು ಸ್ವರ್ಗ ಸೇರಿತು.

ಹಗ್ಗಾ ಸಾವಿರಮಾರಿದ್ದರೂ ಕುಣ್ಕೆ ನಮ್ಮ ಕೈಲಿರಬೇಕು.

ಹಿಂದಕ್ಕೆ ಹೋಗದ ಕತೆ ಮುಂದಕ್ಕೆ ಬಾರದ ಕತೆ.

ಹಾರಕದ ಕಣವೂ ಹೋಯ್ತು ಹರಿಸೇವೆ ಊಟವೂ ಹೋಯಿತು.

ಹಾಗದ ಕೋತಿ ಮುಪ್ಪಾಗದ ಬೆಲ್ಲತಿಂತು.

ಹಸಿದಾಗ ಹಾರವನನ್ನೂ ಉಂಡಾಗ ಹೊಲೆಯನನ್ನೂ ಕೆಣಕಬೇಡ.

ಹಲವು ಬೆರಕೆಸೊಪ್ಪು ಚಂದ ಹಾದರಕ್ಕೆ ಹುಟ್ಟಿದ ಮಗು ಚಂದ.

ಹಳೇ ಮೊರಕ್ಕೆ ಸಗಣಿಯೇ ಆಧಾರ.

ಹೋದದ್ದಕ್ಕೆ ಹೊಣೆಯಿಲ್ಲ ಇದ್ದದ್ದಕ್ಕೆ ಸಾಕ್ಷಿಯಿಲ್ಲ.

ಹತ್ತು ಜನ ಕೊಟ್ಟ ಹುಲ್ಲುಕಡ್ಡಿ ಒಬ್ಬನ ತಲೆ ಹೊರೆ.

ಹಣಾ ಕಂಡರೆ ಹೆಣವೂ ಬಾಯಿ ಬಿಡ್ತು.

ಹಳ್ಳಕ್ಕೆಬಂದ್ರೆ ಹೆಂಡತಿ, ತಿಟ್ಟಿಗೆ ಬಂದರೆ ತಾಯಿ ಅನ್ನೋನು.

ಹೆಣಾ ಹೊರೇಕೆ ಹಿಂದಾದರೇನು ಮುಂದಾದರೇನು.

ಹಂಗಿನ ಮನೆಗಿಂತ ಅಂಬಲಿ ಗುಡಿ ಸಲೇ ಲೇಸು.

ಹಣ್ಣು ತಿಂದವನು ತಪ್ಪಿಸಿಕೊಂಡ ಸಿಪ್ಪೆ ತಿಂದವನು ಶಿಕ್ಷಾಕಿಕೊಂಡ.

ಹೊಟ್ಟೆಗಿಲ್ಲದ ಶ್ಯಾಸುಭೋಗ ಹಳೇ ಕಡ್ತಾ ಹುಡುಕಿದ.

ಹೇಳೋಬಡ್ಡಿ ಮಾಡೋಕಾಗದೆ.

ಹಿರೀತನ ಕೊಟ್ಟು ಕಿರೀತನ ಯಾರು ಬಯ್ಸಾರು.

ಹೊಡೆ ಬರುವಾಗ ಮಡಾಕಟ್ಟು.

ಹೆಡ್ಡನ ಆರಂಬ ಗೊಬ್ಬರದಲ್ಲಿ.

ಹಂಕಲು (ಒಂದು ಹುಲ್ಲುಕಡ್ಡಿ) ಆಯುತ್ತಿದ್ದವನಿಗೆ ಅರಿಹುಲ್ಲು (ಕಂತೆ ಹುಲ್ಲು) ಸಿಕ್ಕಿದಹಾಗಾಯ್ತು.

ಹಾಡ್ತಾಹಾಡ್ತಾ ರಾಗ ಉಗುಳ್ತಾ ಉಗುಳ್ತಾ ರೋಗ.

ಹೆತ್ತವರಿಗೆ ಹೆಗ್ಗಣ ಮುದ್ದು.

ಹಸಿದವರಿಗೆ ಅಂಬಲಿ ಮುದ್ದು.

ಹುಟ್ಟಿದ ಗಳಿಗೆ ಚನ್ನಾಗಿದ್ದರೆ ಯುಗಾದಿ ಫಲ ಏನು ಮಾಡೀತು.

ಹುಟ್ಟೋವಾಗ ಅಣ್ಣಾ ತಮ್ಮ ಬೆಳೆದಮೇಲೆ ದಾಯಾದಿ.

ಹೊಸದರಲ್ಲಿ ಅಗಸ ಗೋಣಿ ಎತ್ತೆತ್ತಿ ಒಗೆದ.

ಹಸುರಿನ ಆಶೆಗೆ ಹೋಗಿ ದೊಸರಿಗೆ (ಹಳ್ಳಕ್ಕೆ) ಬಿದ್ದ ಹಾಗಾಯ್ತು.

ಹಿತ್ತಲಗಿಡ ಮದ್ದಲ್ಲ.

ಹೆತ್ತತಾಯಿ ಹೂಯ್ಯೋ ಮಳೆ ಎರಡೂ ಒಂದೆ.

ಹಲ್ಲಿದ್ದರೆ ಕಡಲೇ ಇಲ್ಲ, ಕಡಲೇ ಇದ್ದರೆ ಹಲ್ಲೇ ಇಲ್ಲ.

ಹಾಳೂರಿಗೆ ಉಳಿದವನೇ ಗೌಡ.

ಹಾವು ಬಡಿದು ಹದ್ದಿಗೆ ಹಾಕಿದಹಾಗೆ.

ಹುಡುಗನು ಗಂಡನಲ್ಲ ಗುಡಿಸಲು ಮನೆಯಲ್ಲ.

ಹೇಳಿಕೊಟ್ಟ ಮಾತು ಕಟ್ಟಿಕೊಟ್ಟ ಬುತ್ತಿ ಎರಡೂ ಎಷ್ಟುದಿವಸ ಬಂದೀತು.

ಹಾದರ ಕಳ್ಳತನ ಮನೇಮೇಲೇ ಕಾಣುತ್ತವೆ.

ಹುಲಿಗೆ ಹಸಿವಾದರೆ ಹುಲ್ಲು ತಿನ್ನುವುದೇನು ?

ಹೂಸಿದವರ‍್ಯಾರು ಅಂದ್ರೆ ಹಳೇ ಸೀರೆಯವರು.

ಹರಿಯೋನೀರಿಗೆ ಡೊಣೆನಾಯಕನ ಅಪ್ಪಣೆಯೇನು.

ಹೊಳೆಗೆ ಹಾಕಿದರೂ ಅಳೆದು ಹಾಕು

ಹಾದರದಲ್ಲಿ ಬಂದಿದ್ದು ಹುಯಿಲಲ್ಲಿ ಹೋಯ್ತು.

ಹಣ್ಣಿಲ್ಲ ಕಾಯಿಲ್ಲ ಬಾ ನನ್ನ ಗುಡಿಗೆ, ತೀರ್ಥವಿಲ್ಲ ಪ್ರಸಾದವಿಲ್ಲ ಹೋಗು ನಿನ್ನ ಮನೆಗೆ.

ಹುಣಸೇಮರ ಮುಪ್ಪಾದರೆ ಹುಳಿ ಮುಪ್ಪೆ ?

ಹುಚ್ಚುಮುಂಡೇ ಮದುವೆಯಲ್ಲಿ ಉಂಡವನೇ ಜಾಣ.

ಹಿತ್ತಲಿಲ್ಲದ ಮನೇ ಬ್ಯಾಡ ತವರಿಲ್ಲದ ನಂಟು ಬ್ಯಾಡ.

ಹಣವಿಲ್ಲದವನು ಹೆಣಕ್ಕೆ ಸಮಾನ.

ಹೇಡಿಕೈಲಿ ವಜ್ರಾಯುಧ ಕೊಟ್ಟ ಹಾಗೆ.

ಹಾಸಿಗೆ ಇದ್ದಷ್ಟು ಕಾಲುಚಾಚು.

ಹಸುವನ್ನೇ ತಂದಾಯ್ತು, ಕರೆಯೋ ಗಡಿಗೆಗೆ ಹ್ಯಾಗೆಅಂದ್ರೆ.

ಹೊಟ್ಟೆಯೊಡನೆ ಕೈಕಾಲು ಮುನಿಸಿಕ್ಕೊಂಡಂತೆ.

ಹಾವಿಗೆ ಹಾಲೆರದ ಹಾಗಾಯಿತು.

ಹೌದಪ್ಪನ ಚಾವಡೀಲಿ ಹೌದಪ್ಪ, ಅಲ್ಲಪ್ಪನ ಚಾವಡೀಲಿ ಅಲ್ಲಪ್ಪ.

ಹೇಳುವುದು ಸುಲಭ ಮಾಡುವುದು ಕಷ್ಟ.

ಹೇಸಿಗೇ ಮೇಲೆ ಕಲ್ಲುಹಾಕಿ ಮೋರೇ ಮೇಲೆ ಸಿಡಕ್ಕೆಂದರೆ.

ಹೊಸಮನೆಗೆ ಕಾಗೇ ನುಗ್ಗಿದ ಹಾಗಾಯ್ತು.

ಹತ್ತರೊಡನೆ ಹನ್ನೊಂದು ಪರ್ಸೇಗುಟ್ಟಿ ಗೋವಿಂದ.

ಹಣವಂತನ ಮನೆಯಲ್ಲಿ ಕಿರಿಯುವನೂ ಬಡವರ ಮನೆಯಲ್ಲಿ ಹಿರಿಯುವನೂ ಆಗಬಾರದು.

ಹಸೀ ಹುಲ್ಲಿನೊಡನೆ ಬಿಸೀ ಹುಲ್ಲೂ ಹೋಯ್ತು.

ಹೊನ್ನು ಹಿಡಿದರೆ ಮಣ್ಣು ಆಗುತ್ತ ದಲ್ಲಾ.

ಹಬ್ಬಕ್ಕಿಂತ ಮದುವೆ ಲೇಸು, ಒಬ್ಬರಿಗಿ ಬ್ಬರು ಲೇಸು.

ಹೇಳೋದೋ ಹೆಬ್ಬಾದ ಬಿತ್ತೋದು ಮಾತ್ರ ಧೂಳ್ಹದ.

ಹೊಸ ಪೂಜಾರಿ ನಾಯಿತೊಳಸಿ ಕೂ ಯ್ದ ಹಾಗಾಯ್ತು.

ಹೊನ್ನು ತೋರಿಸಿ ಮಣ್ಣು ಕೊಡುವನು.

ಹೊಲೆಯ ಹೊತ್ತನ್ನು ಅರಿಯ ಕಬ್ಬ ರಗ (ಅಂಬಿಗ) ಕಾರ್ಯ ಅರಿಯ.

ಹೆಂಡಾಕುಡಿದು ಬುಂಡೇ ಉರುಳಿಸಿದ ಹಾಗಾಯ್ತು.

ಹೂವಿಗೆ ಹೋದ ಹೊನ್ನೇಗೌಡ ಮ ದುವೆಯಾದ ಮೂರು ದಿನಕ್ಕೆ ಬಂದ.

ಹಿರಿಯಕ್ಕನ ಚಾಳಿ ಮನೆ ಮಕ್ಕಳಿಗೆಲ್ಲ.

ಹಿಟ್ಟೂ ಸೊಪ್ಪೂ ತಣ್ಣಗಾಗುತ್ತಾ ಬಂತು.

ಹೊಲದಲ್ಲಿರುವ ಕಸುರನ್ನೂ ಹೊಟ್ಟೆ ಯಲ್ಲಿರೋ ಬಸ್ರನ್ನೂ ನೆಚ್ಚುವರ್‍ಯಾರು.

ಹುರಿಯುವ ಓಡಿನಿಂದ ಒಲೆಗೇ ಬಿದ್ದ ಹಾಗಾಯ್ತು.

ಹಾರವರ ಹೊಲಕ್ಕೆ ಹಾರಕ, ದೇವರ ಹೊಲಕ್ಕೆ ಹುಚ್ಚೆಳ್ಳು.

ಹನ್ನೊಂದು ತಿಂಗಳು ಇದ್ದವಳು ಇ ನ್ನೊಂದು ತಿಂಗಳು ಇರಲಾರಳೆ.

ಹುಬ್ಬುಬ್ಬಾಡಿ (ಜಂಬ) ಹಬ್ಬಕ್ಕೇ ಅಕ್ಕಿ ಇಲ್ಲದೆ ಹೋಯ್ತು.

ಹರಳುಕಡ್ಡಿ ಆದರೇನು? ತಲೇ ಒಡೆ ದರೆ ಸರಿ.

ಹಸೀ ತಿಂದು ಹುಸೀ ಆಡುವವರು.

ಹಸಿದು ಹಲಸಿನ ಹಣ್ಣು ತಿನ್ನು ಉಂಡು ಮಾವಿನ ಹಣ್ಣು ತಿನ್ನು.

ಹೊಟ್ಟೆ ನಮ್ಮದಾದರೆ ಹಿಟ್ಟೂ ನಮ್ಮ ದೇನು.

ಹೆಣ್ಣು ಕೊಟ್ಯೋ ಬೆನ್ನು ಕೊಟ್ಯೋ ಅಂತಗಾದೆ.

ಹೊಲದೊಳಗೇ ಕೋಳಿಹಾಗೆ ಆಡಿ ಕ್ಕೊಂಡು ನನ್ನ ಗಂಡ ಒಕ್ಕಳ ರಾಗೀ ಬೆಳ್ದ ಅಂದಳಂತೆ.

ಹೆಗ್ಗ ದೇಶಾಂತರ ಹೋದರೂ ನೆಲಾ ಕೆರೆಯುವುದು ತಪ್ಪುವುದಿಲ್ಲ.

ಹೊಂಬಾಳೆ ಮನೆಗೆಬಂದು ತಿಂಗಳಾ ಗುತ್ತಾ ಬಂತು.

ಹುಚ್ಚಲ್ಲ, ಬೆಪ್ಪಲ್ಲ ಶಿವಲೀಲೆ.

ಹೋಗುವವನನ್ನು ಹೋಗು ಅಂತ ಬರು ವವನನ್ನು ಬಾ ಅಂತ ಅಂಧಹಾಗೆ,

ಹೋದ ದಾರೀಗೆ ಸುಂಕವಿಲ್ಲ.

ಹೆಚ್ಚಿದ ಹೊಲ ಹಾಳು.

ಹತ್ತು ಬೆರಳೂ ಒಂದೇ ಸಮನಾಗಿ ದ್ದಾತಾ.

ಹೆಂಡದಂಗಡೀಸೂ ಹೆಂಗಸಿನ ಭಾವ ವನ್ನೂ ಹೊತ್ತಾರೆ ನೋಡು.

ಹಾವಿಗೆ ಹಡಗೇ ನಡುಗಿತು.

ಹೆಣ್ಣು ಹೆಚ್ಚಿದ ಮನೆಹಾಳು, ಹಣ್ಣೇ (ಸೊಪ್ಪು) ಹೆಚ್ಚಿದಹೊಲ ಹಾಳು.

ಹಾಗದದ ಕಾಸಿದ್ರೆ ಹಾಗದ ಹಣ್ಣೆ ನ್ನಂಗೆ (ಕಳೆ.)

ಹರ್ತೇ ಹಗ್ರೋೀವನಿಗೆ ಹಾಲೂ ಅನ್ನ ಬಿತಾ, ಬಿತ್ರೋನ್ಗೇ ಬಿಸೀ ಅನ್ನಾ.

ಹಡಗ್ದಡಗೇ ಮುಳುಗಿ ಹೋಗುತ್ತಿರು ವಾಗ ಹೆಡಗೇಗೆ ಹ್ಯಾಗೆ ಅಂದ್ರೆ.

ಸಾಮಾನ್ಯವಾಗಿ ಎಲ್ಲಾ ಊರುಗಳಲ್ಲಿಯೂ ಅತಿ ಹಿಂದಣಿಂದ ಬಂದ ಪದ್ಧತಿಯೇ ಶಾಸ್ತ್ರವಾಗಿರುವುದು ಸರಿ. ಆದರೆ ನಮ್ಮೂರಿನ ಹಿಡಿಕಟ್ಟು ಯಾವೂ ರಲ್ಲೂ ಇರಲಿಲ್ಲ, ಯಾರಾದರೂ ಹೊಸದಾಗಿ ಅಧಿಕಾರಿಗಳಾಗಿ ಬಂದು ಗ್ರಾಮ ಪರೀಕ್ಷೆ ಮಾಡಬೇಕೆಂದು ಬಂದಾಗ ಅವರು ಊರನ್ನು ಅಪ್ರದಕ್ಷಿಣೆಯಾಗಿ ಸುತ್ತಿ ದರೆ ಆಗಲೇ ಓಹೋ ಗ್ರಾಮಕ್ಕೆ ಏನೋ ತೊಂದರೆ ಬಂತು ಎಂದು ಗುಜುಗುಜು ಗುಟ್ಟುತ್ತಿದ್ದರು. ದೇವರ ಉತ್ಸವವು ಮೂರು ಪ್ರದಕ್ಷಿಣೆ ಬರುವ ಕಡೆಗಳಲ್ಲಿ ಒಂದೇ ಪ್ರದಕ್ಷಿಣೆ ಬಂದರೆ ಅದಕ್ಕೂ ಹೀಗೆಯೇ ಅನ್ನುತ್ತಿದ್ದರು. ಒಂದು ಸಲ ನಮ್ಮೂರ ದೊಡ್ಡಮ್ಮನನ್ನು ಊರ ಹೊರಗಿಂದ ತರುವ ಜಾಗದಿಂದ ತರಲಿಲ್ಲ. ಸರಿ. ಊರಲ್ಲೆಲ್ಲಾ ಗ್ರಾಮ ಮುಖಂಡರನ್ನು ಬೈಯ್ಯಲಾರಂಭಿಸಿದರು. ಕಡೆಗೆ ಉತ್ಸವವು ಆಂಜನೇಯಸ್ವಾಮಿಯ ಗುಡಿಯ ಸಮೀಪಕ್ಕೆ ಬರುವ ವೇಳೆಗೆ ಒಬ್ಬನ ಮೇಲೆ ದೇವರು ಬಂದೇ ಬಿಟ್ಟಿತು. ಏನಿರೊ—ಮಾಮೂಲು ಜಾಗದಿಂದ ನನ್ನ ತಂಗಿ ದೊಡ್ಡಮ್ಮನನ್ನು ಯಾಕೆ ತರಲಿಲ್ಲ. ನಿಮ್ಮ ಊರನ್ನು ಧ್ವಂಸ ಮಾಡಿ ಬಿಡುವೆನು. ನಾನು ವೀರಾಂಜನೇಯನೆಂದು ಗೊತ್ತಿಲ್ಲವೋ ? ಎಂದು ಗರ್ಜಿಸಿ, ನೆಗೆದು, ಹಾರಿ, ಕುಪ್ಪಳಿಸಿ ಎಷ್ಟು ಜನರು ಹಿಡಿದರೂ ದಕ್ಕದೆ ಗಲಾಟೆ ಮಾಡಿದನು. ಆಗ ಪಟೇಲನು ದೊಡ್ಡಮ್ಮನಿಗೂ ಆಂಜನೇಯನಿಗೂ ಮಧ್ಯಸ್ಥವಾಗಿ ನಿಂತು ಈಸಲ ಕ್ಷಮಿಸಬೇಕೆಂದು ಹೇಳಿ ಹರಕೆ ಕಟ್ಟಿ ಉತ್ಸವವನ್ನು ಮುಂದಕ್ಕೆ ಸಾಗಿಸಿದನು. ಈ ವಿಚಾರವನ್ನು ವಿಮರ್ಶಾದೃಷ್ಟಿಯಿಂದ ನೋಡಿದರೆ ಹೀಗೆ ಕಾಣುತ್ತದಲ್ಲಾ. ಗ್ರಾಮದ ಮುಖಂಡರು ಕಾರಣಾಂತರಗಳಿಂದ ಬಹು ಹಿಂದಿನ ಸಂಪ್ರದಾಯ ವನ್ನು ಬದಲಾಯಿಸಿದಾಗ ಸಾಮಾನ್ಯ ಪ್ರಜೆಗಳಿಗೆ ಅದು ತಪ್ಪೆಂದು ತೋರಿ ಆ

ಅಭಿಪ್ರಾಯವನ್ನು ಮುಖಂಡರಿಗೆ ತಿಳಿಸಲು ಧೈರ್ಯವಿರಲಿಲ್ಲ. ಒಂದು ವೇಳೆ ತಿಳಿಸಿದರು ಎಂದು ಇಟ್ಟುಕೊಳ್ಳೋಣ. ಹೇಳಿದರೆಷ್ಟೋ ಹೇಳದಿದ್ದರೂ ಅಷ್ಟೆ. ಅದಕ್ಕಾಗಿ ಜನರು ಮೇಲಿನ ಉಪಾಯವನ್ನು ತಾಳಿ ಮುಖಂಡರ ಅಭಿಪ್ರಾಯವನ್ನು ಖಂಡಿಸುತ್ತಿದ್ದರು. ದೇವರು ಬಂತೆಂದು ಹೇಳಿ ಸಭೆಯಲ್ಲಿ ತಮ್ಮ ಮಾರ್ಪಾಟನ್ನು ಖಂಡಿಸುವಾಗ ಮುಖಂಡರು ತೆಪ್ಪನಿರಬೇಕಾಗುತ್ತಿತ್ತು. ತೆಪ್ಪನಿರದೆ ಗದರಿಸಲು ಹೋದರೆ ಊರವರೆಲ್ಲಾ ಒಗ್ಗಟ್ಟಿನಿಂದ ಇವನು ನಾಸ್ತಿಕ, ದೇವರಲ್ಲಿ ಭಕ್ತಿಯಿಲ್ಲ, ಇವನ ಯಜಮಾನ್ಯವನ್ನು ತಪ್ಪಿಸಿ ಎಂದು ಹೇಳಿ ತಪ್ಪಿಸಲೂ ಸಿದ್ಧವಾಗುತ್ತಿದ್ದರು. ಈ ರೀತಿಯಾಗಿ ಲಕ್ಷೋಪಲಕ್ಷ ವರ್ಷಗಳಿಂದ ಸಂಪ್ರದಾಯ ರಕ್ಷಣೆಯಾಗುತ್ತಿತ್ತು. ರಾಜರ ಪ್ರಭಾವವು ಹಳ್ಳಿಗಳ ಧಾರ್ಮಿಕ ನೈತಿಕ ಸಾಮಾಜಿಕ ಪದ್ಧತಿಗಳ ಮೇಲೆ ಬೀಳದೆ ಇದ್ದುದರಿಂದ ಇಂದಿಗೂ ನಾವು ನಮ್ಮ ಹಿರಿಯರ ನಡೆ ನುಡಿಯನ್ನರಿಯಲು ಹಳ್ಳಿಗಳನ್ನೇ ಶರಣು ಹೊಂದಬೇಕಾಗಿದೆ.

## ಹುಡುಗರಾಗಿದ್ದಾಗ

ಗೌರೀ ಗಣೇಶನ ಹಬ್ಬಗಳಲ್ಲಿ "ಗಣೇಶಬಂದ, ಹೊಟ್ಟೇಮೇಲೆ ಗಂಧ, ಕಾಯ್ಕಡ್ಬು ತಿಂದ, ಚಿಕ್ಕೊಳ್ಳೇಲ್ಬಿದ್ದ, ದೊಡ್ಡೊಳ್ಳೇಲೆದ್ದ" ಎನ್ನುವ ಹಾಡೇ ಕೇಳುತ್ತಿತ್ತು. ಮಳೆಯು ಹುಯ್ಯುತ್ತಿರುವಾಗ ಚಿಕ್ಕಚಿಕ್ಕ ಹುಡುಗರು ಬೀದಿಗೆ ಓಡಿಬಂದು ಆಕಾಶದ ಕಡೆಗೆ ಮುಖ ತಿರುಗಿಸಿಕೊಂಡು "ಹೂಯ್ಯೋ ಹೂಯ್ಯೋ ಮಳ್ರಾಯಾ ಹೂವಿನ್ತೋಟಕ್ನೀರಿಲ್ಲಾ" ಎಂದು ಕೂಗಿಕೊಳ್ಳುತ್ತಿದ್ದರು. ಹೆಣ್ಣು ಹುಡುಗರು "ಕಣ್ಣಾಮುಚ್ಚೆ ಕಾಡೇಗೂಡೆ, ಉದ್ದಿನಮೂಟೆ ಉರಳೇ ಹೋಯ್ತು ನಮ್ಮಕ್ಕೀ ಬಿಟ್ನೋಬಿಟ್ಟೆ, ನಿಮ್ಮಕ್ಕಿ ಹಿಡಿದುಕೊಳ್ಳಿರೋ ಹಿಡಿದುಕೊಳ್ಳಿ" ಎಂದು ಕಣ್ಣಾಮುಚ್ಚಾಲೆ ಆಟ ಆಡುವರು. ಬೇಲಿ ಗಿಡಗಳ ಮೇಲಿರುವ ಚಿಟ್ಟೆಗಳನ್ನು ಉಪಾಯದಿಂದ ಹಿಡಿದು ಅವುಗಳ ಕಾಲಿಗೆ ನೂಲು ಕಟ್ಟಿ ಕೈಮೇಲೆ, ತಲೆಯ ಮೇಲೆ ಭುಜದ ಮೇಲಿಟ್ಟುಕೊಂಡು ನಲಿಯುವರು. ಅವುಗಳಿಗೆ ಸ್ವಲ್ಪ ಅಪಾಯವಾದರೂ ಬಹಳ ವ್ಯಥೆಪಡುತ್ತಿದ್ದರು. ಹೊಳೆಗೆ ಹೋದರೆ ಜೋಳದ ಬೆಂಡು, ಹುಚ್ಚಕಬ್ಬು ಇವುಗಳಿಂದ ದೋಣಿ, ತೆಪ್ಪಗಳನ್ನು ಮಾಡಿ ತೇಲಿ ಬಿಡುತ್ತಿದ್ದರು.

ಅವುಗಳು ತೇಲುತ್ತಾ ತೇಲುತ್ತಾ ಲಾಗಾ ಹಾಕಿದರೆ ಕೇಕೇ ಹಾಕಿ ನಗುತ್ತಿದ್ದರು. ನಮ್ಮೂರ ಬೇಲಿಗಳಲ್ಲಿ ಉಣ್ಣೇ ಮೆಳೆ (ಲೆಂಟಾನ್) ವಿಶೇಷವಾಗಿದ್ದು ಅದರಲ್ಲಿ ನಾನಾ ಬಣ್ಣದ ಹೂವು ಬಿಡುತ್ತಿತ್ತು. ಅವುಗಳನ್ನು ಕುಯ್ದು ದೇವರಿಗೆ ಮುಡಿಸಿ ತಾವೂ ಮುಡಿದುಕೊಂಡು ನಲಿಯುತ್ತಿದ್ದರು. ಎಷ್ಟೋ ಹುಡುಗರು ಭಜನೆಯ ಜೊತೆಯಲ್ಲಿ ಹೋಗಿ ಬಂದು ದೇವರ ನಾಮಗಳನ್ನು ತೊದಲು ನುಡಿಯಿಂದ ಹಾಡುತ್ತಿದ್ದವು. ಅವು ಕೇಳುವುದಕ್ಕೆ ಏನೋ ಒಂದು ವಿಧವಾಗಿ ಆನಂದವಾಗಿದ್ದವು. ಮನೆಯ ಹದಿಗೆ ಹಾಕಿರುವ ಕಲ್ಲುಗಳ ಪೊಟರೆಗಳಲ್ಲಿ ಕಿರಜೇನು, ದುಂಬಿಗಳು ಒಂದು ವಿಧವಾದ ಜೇನನ್ನು ಶೇಖರಿಸಿಡುತ್ತಿದ್ದುವು. ಅವುಗಳನ್ನು ಸಮಯ ನೋಡಿ ಓಡಿಸಿ ಆ ಜೇನುತುಪ್ಪವನ್ನೆಲ್ಲಾ ಕುಡಿದು ಹೊಟ್ಟೆಯ ಮೇಲೆ ಧಾರೆ ಬೀಳಿಸಿಕೊಂಡು ಮನೆಗೆ ಬರುತ್ತಿದ್ದರು. ಹೇಮಗಿರಿ ಜಾತ್ರೆಗೆ ಹೊಸ ಅಂಗಿ, ಕುವ್ವಾಲಿ, ಗಿಲಿಕೆ, ಕಡ್ಲೇಪುರಿ, ರಾಗಮಾಲಿಕೆ ತೆಗೆದು ಕೊಡದಿದ್ದರೆ ಮೂರು ದಿನವಾಗಲಿ ಅಳುವುದನ್ನು ಬಿಡುತ್ತಿರಲಿಲ್ಲ. ಪ್ರತಿ ಶುಕ್ರವಾರವೂ ಪಾಠಶಾಲೆಯಲ್ಲಿ ಶುಕ್ರವಾರಪೂಜೆ ಮಾಡುವ ಪದ್ಧತಿ. ಅದಕ್ಕಾಗಿ ಎಲ್ಲರೂ ಒಂದೊಂದು ಕಾಸು ಸೇರಿಸಿ ವಿನಾಯಕನ ಪೂಜೆ ಮಾಡುತ್ತಿದ್ದರು. ಮಠವನ್ನು ಗುಡಿಸಿ ಸಾರಿಸಿ ರಂಗೋಲೆ ಇಕ್ಕಿ (ಟ್ಟು) ವಿನಾಯಕನನ್ನು ಪೂಜಿಸಿ, ಎಡ ಬಲಗಳಲ್ಲಿ ಮೇಸ್ಟರ ಬೆತ್ತಗಳನ್ನು ನಿಲ್ಲಿಸಿ ಪೂಜೆ ಮಾಡುವಾಗ,—

ಬೆನಕ ಬೆನಕ, ಏಕದಂತ, ಪಚ್ಚೆಕಲ್ಲು, ಪಾಣಿಬಟ್ಲು
ನಮೋನಮೋ ವಿಘ್ನೇಶ್ವರನ ಪಾದಕ್ಕೆ ನಮೋನಮೋ

ಎಂದು ಎಲ್ಲರೂ ಹೇಳಿ ನಮಸ್ಕಾರ ಮಾಡುವರು. ಚೌಕಾಬಾರವಾಡುವಾಗ ಮೊದಲನೇ ಆಟದ ಫಲವನ್ನು ಅದು ಚೌಕವಾಗಲಿ ಕಡೆಗೆ ಭಾರವಾಗಲಿ ದೇವರಿಗೆ ಸಮರ್ಪಣೆ ಮಾಡದ ಹುಡುಗರು ನಮ್ಮೂರಲ್ಲೇ ಇರಲಿಲ್ಲ. ಯಕ್ಷಗಾನದ ಆಟವಾದರೆ ನಾಲ್ಕಾರು ದಿನಗಳು ಆಟದ ಹಾಡುಗಳನ್ನು ಹೇಳುವುದೂ ಹೊಳೆಯ ಮರಳಿನ ಮೇಲೆ ತಾವೂ ಅವರಂತೆ ಕುಣಿಯುವುದೂ ಸ್ವಭಾವವಾಗಿ ಹೋಗಿತ್ತು. ಕಣ್ಣಾಮುಚ್ಚೆ—ಕೋಟೇಮೇಲೆ ಕುಡಗೋಲು, ಸಾಧು ಗೋದು ಇತ್ಯಾದಿಗಳೆಲ್ಲಾ ಸರ್ವರಿಗೂ ಸದಾ ಮಂದಟ್ಟಾದ ವಿಷಯವೇ. ಆದರೂ ಈ ಗ್ರಂಥಾರಂಭದ ಉದ್ದೇಶವು ಹಳೇಕಾಲದ ಮಧುಕರ ದಫ್ತಾರದಂತೆ ಚೂರುಪಾರುಗಳನ್ನೂ ಶೇಖರಿಸುವ ಅಭಿಲಾಷೆಯಿಂದ ಕೂಡಿದೆ. ಹುಡುಗರ ಆಟಪಾಟದ ಮಾತುಗಳು ಕೆಲವು

ಗೂಢಾರ್ಥಗಳಿಂದ ಕೂಡಿರುವಂತೆ ತೋರುವುದು. ಅರ್ಥ ಸಾಮಂಜಸ್ಯವಿಲ್ಲದೆ ಶಬ್ದರಚನೆಯು ಅಸಂಭವ. ಕಣ್ಣಾಮುಚ್ಚೆ ಇತ್ಯಾದಿ ವಾಕ್ಯರಚನೆಗಳ ನಿಬಂಧನ ಕಾರರಿಗೆ ಆದಿಯಲ್ಲಿ ಏನು ಅಭಿಪ್ರಾಯವಿತ್ತೋ ತಿಳಿಯದಾಗಿದೆ. ಒಂದು ವೇಳೆ ಹೀಗಿರಬಹುದೇ—

ವಿರಹಿಣಿಯು—ಪ್ರಿಯ ನಿನ್ನ ವಿರಹ ದುಃಖದಿಂದ ಬೆಂದು ಬೆಂಡಾಗಿ ಕಣ್ಣಾಮುಚ್ಚೆ ಮನಸ್ಸಿನಲ್ಲಿ ನನಗೆ ಹೀಗೆ ತೋರಿತು ಇನ್ನು ನನಗೆ ಕಾಡೇ ಗೂಡು ; ಹೇಗಿದ್ದರೂ ಪ್ರಿಯನ ಸಮಾಗಮವು ಅಸಾಧ್ಯ ಎಂದು. ಆದರೂ ಪ್ರೀತಿ ಪುತ್ತಳಿಯೇ-ಉದ್ದಿನಮೂಟೆಯು ಉರುಳಿಹೋದರೆ ಅದರೊಳಗಿರುವ ಕಾಳುಗಳು ಚಲ್ಲಿ ಚಲ್ಲಾಪಿಲ್ಲಿಯಾಗಿ ಹೋಗುವಂತೆ, ನಾನು ವಿರಹತಪ್ತೆಯಾಗಿ ಪರಾಧೀನಳಾದ್ದರಿಂದ ನನ್ನಲ್ಲಿರುವ ಆತ್ಮಸಂಯಮನ, ಗೌರವಯುಕ್ತ ನಾಚಿಕೆ, ಪರಪುರುಷರಲ್ಲಿ ಅನಾಸಕ್ತಿ ಮುಂತಾದ ಗುಣಗಳೆಲ್ಲಾ ಉದುರಿಹೋಗಿವೆ. ಇದೋ ನನ್ನ ಹಕ್ಕಿ ನನ್ನ ಜೀವವನ್ನು ನಿನ್ನ ಪಾದಾರವಿಂದಗಳಲ್ಲಿ ಬಿಟ್ಟೆನೋ ಬಿಟ್ಟೆ. ನಿಮ್ಮ ಹಕ್ಕಿ ಇನ್ನು ನಾನು. ನಿಮ್ಮ ಹಕ್ಕಿ ನಿನ್ನವಳು ಹಿಡಿದುಕೊಳ್ಳಿರೋ. ಅಯ್ಯೋ ನನ್ನನ್ನು ಹಿಡಿದುಕೊಂಡು ಕಾಪಾಡು ಹಿಡಿದುಕೊಳ್ಳಿ ಕಾಪಾಡು ಎಂದಿರಬಹುದೋ ?— ಅಥವಾ.

ಸತ್ತ ಸತಿಯನ್ನು ಮುಂದಿಟ್ಟುಕೊಂಡು ವೈರಾಗ್ಯದ ತುಂಬಿನಿಂದ ತುಂಬಿ ರುವವನೊಬ್ಬನು ಈ ದೇಹಕ್ಕೇನು ಶಾಶ್ವತ. ಸತ್ತು ಕಣ್ಣುಮುಚ್ಚಲು ಇದಕ್ಕೆ ಕಾಡೇ ಗೂಡು ಶ್ಮಶಾನವೇ ವಾಸಸ್ಥಳ. ಅಯ್ಯೋ ಉದ್ದಿನಮೂಟೆ ಉರುಳಿಹೋದರೆ ಬಾಯಿಮುಚ್ಚಿದ ಚೀಲದಿಂದ ಕಾಳುಗಳು ಉದುರುವಂತೆ ಆಯುಸ್ಸು ಮುಗಿದರೆ ಈ ಜೀವಗಳು ಉರುಳಿಹೋಗುತ್ತವೆ ಅಷ್ಟೆ. ಅದರಂತೆ ಈ ಸತಿ ಎಂಬ ವಸ್ತು ವಾಯ್ತು. ಎಂದು ಹೇಳುತ್ತಾ ಹಾಗೆಯೇ ಮಾಯಾಪಾಶ ಬದ್ಧನಾಗಿ ಪ್ರೀತ್ಯತಿಶಯದಿಂದ ನಮ್ಮ ಹಕ್ಕಿ, ನಮ್ಮ ಸತಿಯನ್ನು ಬಿಟ್ಟೆನೋ ಬಿಟ್ಟೆ ಹಕ್ಕಿ ಹಾರಿಹೋಗುವಂತೆ ನನ್ನ ಸತಿಯು ಸತ್ತು ಸ್ವರ್ಗಕ್ಕೆ ಬಂದಿರುತ್ತಾಳೆ. ದೇವತೆಗಳಿರಾ ನಿಮ್ಮ ಹಕ್ಕಿ ನಿಮ್ಮಲ್ಲಿ ಸೇರಿರುವಳು ಹಿಡಿದುಕೊಳ್ಳಿರೋ ಹಿಡಿದುಕೊಳ್ಳಿ ಅವಳನ್ನು ನರಕಕ್ಕೆ ತಳ್ಳದೆ ಹಿಡಿದುಕೊಂಡು ಕಾಪಾಡಿ ಎಂದು ಹೇಳಿರಬಹುದೇ-ಛೆ. ಹೆಣ್ಣುಮಕ್ಕಳ ಆಟದಲ್ಲಿ ಇದೆಲ್ಲಾ ಎಲ್ಲಿ ಬಂತು ಒಂದುವೇಳೆ ಹೀಗಿದ್ದರೂ ಇರಬಹುದು.

ಯಮುನಾನದಿಯ ಮರಳು ದಿಣ್ಣೆಯಮೇಲೆ ಶರಚ್ಚಂದ್ರನ ಕಿರಣಗಳು ಹಾಲು ಚಲ್ಲಿದಂತೆ ಪ್ರಸರಿಸುತ್ತಲಿವೆ. ಮಂದಮಾರುತನು ಅರಳಿರುವ ಹೂವುಗಳ

ಮೇಲೆ ಹಾಯ್ದು ಬರುವಾಗ ಕೃಷ್ಣಪರಮಾತ್ಮನ ಬಳಿಗೆ ಬರಿಗೈಲಿ ಹೋಗುವು ದೇನು ನಡತೆ ಎಂದುಕೊಂಡು ಅಲ್ಲಿ ಸಿಕ್ಕಿದ ಸುಗಂಧಪರಾಗವನ್ನೇ ಕಾಣಿಕೆಯ ನ್ನಾಗಿ ತೆಗೆದುಕೊಂಡು ಬಂದು ಸಮಯ ನಿರೀಕ್ಷಣೆಯಿಂದ ಸುಳಿದಾಡುತ್ತಿರು ವನು. ಒಂದುಕಡೆ ರಾಧೆ, ರುಕ್ಮಿಣಿ, ಅವಳ ಸಖಿಯರು, ಗೋಪಿಯರು. ಸ್ವಲ್ಪ ದೂರದಲ್ಲೇ ಕೊಳಲನ್ನು ಕೈಲಿ ಹಿಡಿದು ಗೊಲ್ಲರೊಡನೆ ಚಕ್ಕಂದವಾಗಿ ಮಾತಾ ಡುತ್ತಿರುವ ಕೃಷ್ಣಪರಮಾತ್ಮ—ರಾಧೆಯು ಚಪಲೆ, ರುಕ್ಮಿಣಿಯು ಏನೂ ಅರಿಯದ ಹುಡುಗಿ, ಅವಳು ಯಮುನೆಯನ್ನು ನೋಡುತ್ತಾ, ನನ್ನ ಸ್ವಾಮಿಯು ಇದರಂತೆ ಬಣ್ಣವುಳ್ಳವನು, ಇದರಂತೆ ತಿಳಿಯಾದ ಮನಸ್ಸುಳ್ಳವನು, ಇದರಂತೆ ಗಂಭೀರ ವಾದ ಹೃದಯವುಳ್ಳವನು ಇತ್ಯಾದಿಯಾಗಿ ವರ್ಣಿಸುತ್ತಾ ಗೋಪಿಕೆಯರೊಡನೆ ಮಾತಾಡುತ್ತಿರುವಾಗ ರಾಧೆಯು ಮೆಲ್ಲನೆ ನುಸುಳಿಕೊಂಡು ಹತ್ತಿರವಿದ್ದ ಕಾಡಿನ ಗಿಡಗಳಲ್ಲಿ ಮರೆಯಾದಳು. ಎಷ್ಟೋ ಹೊತ್ತಿನಮೇಲೆ ಕೃಷ್ಣನ ವೇಣು ನಾದವನ್ನು ಕೇಳಿ ಎಚ್ಚೆತ್ತ ರುಕ್ಮಿಣಿಯು ಹಿಂತಿರುಗಿ ನೋಡಿದಳು, ರಾಧೆ ಯಿರಲಿಲ್ಲ. ಓಹೋ ಈಗ ಕೆಲಸ ಕೆಟ್ಟಿತು. ಆದರೂ ರಾಧೆಗೆ ತಕ್ಕ ಪ್ರತೀಕಾರ ಮಾಡುವೆನೆಂದು ಯೋಚಿಸಿ, ಓ ಗೊಲ್ಲರಾ! ಜೋಕೆ, ಜೋಕೆ ಸ್ವಲ್ಪ ಎಚ್ಚರಿಕೆ ತಪ್ಪಿ, ಯಮುನಾ ನದಿಯಕಡೆಗೆ ಜ್ಞಾನವುಳ್ಳವಳಾದೆ. ಅದೇ ಕಣ್ಣುಮುಚ್ಚಿದಂ ತಾಯ್ತು. ಹಾಗೆ ಕಣ್ಣುಮುಚ್ಚೆ ಆ ರಾಧೆ ಇರುವಳಲ್ಲಾ ಆ ರಾಧೆ ಅವಳು, ಉದ್ದಿನಮೂಡೆಯು (ದುಂಡು ಹೆಚ್ಚಾಗಿರುವುದರಿಂದ) ದಡಬಡನೆ ಉರುಳಿಹೋ ಗುವಂತೆ ಈ ಮರಳನ್ನೂ ದಾಟಿ ಬೇಗಲೆ ಈ ಕುಂಜವನದಲ್ಲಿ ಮರೆಯಾಗಿರುವಳು. ಎಂದು ಹೇಳುತ್ತಿರುವಾಗಲೇ, ತನ್ನ ಪತಿದೈವವು ರಾಧೆಯಮೇಲಣ ಅಸೂಯೆ ಯನ್ನು ಎಲ್ಲಿ ತಿಳಿದುಕೊಂಡುಬಿಡುವನೋ ಎಂದು ಯೋಚಿಸಿ, ನಮ್ಮ ಹಕ್ಕಿ ಬಿಟ್ಟೆನೋ ಬಿಟ್ಟೆ. ನಿಮ್ಮ ಹಕ್ಕಿ ಕೃಷ್ಣನನ್ನಾದರೂ ಹಿಡಿದುಕೊಳ್ಳಿರೋ. ನನ್ನ ಮೇಲಣ ಭಕ್ತಿಯಿಂದಲಾದರೂ ಕೃಷ್ಣನನ್ನು ಕುಂಜವನದ ಕಡೆಗೆ ಬಿಡದೆ ಹಿಡಿ ದುಕೊಳ್ಳಿ ಎಂದು ಹೇಳಿದಳು. ಪಾಪ, ಗೊಲ್ಲರು ಗೊಂದಲದಲ್ಲಿ ಬಿದ್ದರು. ಅವರಿಗೇನುಗೊತ್ತು ಅದರರ್ಥ. ಹಕ್ಕಿ ಮಾತಿನಿಂದ ಕಕ್ಕಾಬಿಕ್ಕಿಯಾದರು ಗಂಡು ಹಕ್ಕಿಯೂ ಹಾರಿ ಹೋಯಿತು. ಅಯ್ಯೋ ಪಾಪ ಅಂದಿನ ರುಕ್ಮಿಣಿಯ ಚಾಂದ್ರಿ ಕಾವಿಹಾರವು ಬೆಲ್ಲವಿಲ್ಲದ ಪಾಯಸವನ್ನು ತಿಂದಹಾಗಾಯ್ತು. ಅದಿರಲಿ. ಈ ಅಭಿ ಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡೇ ಕವಿಯು ಕಣ್ಣುಮುಚ್ಚೆ ಸೂತ್ರವನ್ನು

ರಚಿಸಿರುವನೇ! ಆದ್ದರಿಂದಲೇ ಕಣ್ಣುಮುಚ್ಚಿಬಿಟ್ಟ ಹುಡುಗಿಯು ಹುಡುಕಾಡಿ ಯಾರನ್ನಾದರೂ ಪತ್ತೇಮಾಡುವುದು? ರಾಧೆಯು ಮರೆಯಲ್ಲಿ ಕೃಷ್ಣನನ್ನು ಹಿಡಿದಂತೆ, ಇದೂ ನಮಗೆ ಸರಿಬೀಳಲಿಲ್ಲ. ವಾಚಕರೇ ಯೋಚಿಸಿ ಅದರ ಅರ್ಥವನ್ನು ಹುಡುಗರಿಗೆ ತಿಳಿಸಲಿ. ಹೀಗೆ ಹುಡುಗರ ಸಂಪ್ರದಾಯದ ಮಾತುಗಳ ಅರ್ಥವು ನನಗೇನೋ ಬಲು ಗಡಸಾಗಿಯೂ ಆದರೆ ಸಾರಭರಿತವಾಗಿಯೂ ಕಾಣುವುದು.

## ಸಾಧುಗೋದು

ಹಣ್ಣುಹಣ್ಣು ಮುದುಕನು ಜಗಲಿಯಮೇಲೆ ಕೂತು, ದೇಶದ ಸ್ಥಿತಿಗತಿಯನ್ನು ಲೆಕ್ಕಾಚಾರಮಾಡುತ್ತಾ ನಿರಾಶೆಯಿಂದ ಬೀದಿಯಲ್ಲಾಡುತ್ತಿರುವ ಮಕ್ಕಳನ್ನು ನೋಡಿ, ಮಕ್ಕಳಿರಾ ಆಡಿ-ಆಡಿ-ಹೀಗೇ ನೀವು ಆಡುತ್ತಿರಿ, ನಿಮಗೆ ಆಗುತ್ತದೆ ಮೋಕ್ಷ. ಈ ಸಾಧುಸ್ವಭಾವವನ್ನು ಬಿಟ್ಟು ಸ್ವಲ್ಪ ವೀರಪುರುಷರಾಗಿ-ಅಯ್ಯೋ-ಸಾಧು ಗೋದು-(ಸನ್ಯಾಸಿಗಿನ್ಯಾಸಿ ಅನ್ನುವಂತೆ) ಪರಕೀಯರು ಬಂದು ಪಾವು ಜೋಡಿನಕಾಲಿನ-ಫರಂಗಿಯವರು ಲಾಟ್‌ಮೆ-ಲೂಟ್ಮೆ-ಚಲ್ ಆಗುತ್ತಾರೆ ಆಗ ಬಾಯಿಬಾಯಿ ಬಿಡಿ ಎಂದು ಹೇಳಿರಬಹುದು. ಅವನಿಗೆ ಹಿಂದುಸ್ಥಾನಿ, ಇಂಗ್ಲೀಷು, ಕನ್ನಡ ಭಾಷೆಗಳು ಅಲ್ಪಸ್ವಲ್ಪ ಕಿವಿಗೆ ಬಿದ್ದಿರಬಹುದು. ಆದರೆ ಹೃದಯದಲ್ಲುತ್ಪನ್ನವಾದ ದೇಶದ ಅವನತ ಸ್ಥಿತಿಯ ದುಃಖವು ಆ ರೀತಿಯಾಗಿ ಮಾತನಾಡಿಸಿರಬಹುದೆ?

ನಮ್ಮ ಹಳ್ಳಿಯಲ್ಲಿ ವಾಡಿಕೆಯಾಗಿದ್ದ ಮಾತಿನ ರೀತಿಯು.

(ಸಾಮಾಜಿಕಚಿತ್ರ)

ಮುದುಕ— ಏನಲ್ಲಾಮಗಾ ನಿಪ್ಪಸ್ಕುಟ್ಟೆ ಅಪಾರಾ ಜಗ್ಳಾ ಆಡ್ತೀತ್ತಿ ಇಳ್ಳಲ್ಲೀ.

ಹುಡುಗ—ಅಯ್ಯೋ, ನಮ್ಮೂರಲ್ಲಿ ಹಾಲುಣ್ಣೋ ಪುಣ್ಯಾತ್ಮರೇ ಇಲ್ವಾ, ನಮ್ಮಪ್ಪ ಕಿರೀ ಹೆಂಡ್ತಿ ಮಾತ ಕೇಳ್ಕೊಂಡು ತಬ್ಲೀ ಗೋಳಾದ ನಮ್ಮ ಇಷ್ಟು ಓಂಕಾರ ಗತಿ ಹತ್ತಸ್ತಾನಲ್ಲಾ ನೋಡಾನೇ, ಮೂರು ಕೋರ್ಟುಗಂಟಾ ಆಗ್ಲಿ. ಫುಲ್‌ಬೆಂಚುಗಂಟ ಹತ್ತೀನಿ ಅವಳಿಗೆ ನಾನು ಶರಣಾಗತನಾದರೆ ನಾನು ಈ ಊರಲ್ಲಿ ಹೊಗೇ ಹಾಕ್ಕೊಂಡು ಇರೋಕಾಯ್ತದಾ! ನಮ್ಮಪ್ಪನಿಗೇ ನಾನು ಹುಟ್ಟಿದ್ರೆ ನೋಡ್ಕೋ ದೊಡ್ಡಪ್ಪಾ ಆ ಕಾರ್ಕತ್ನಾರಾ.

ಮು— ಆ ಅದಿರ್ಲೀ ಯಾರ್ಮನೇ ಬಿಸ್ಲು ಯಾರು ತೊಗಂಡಾರು. ಒಂದೂ ಅನ್ನು, ಏನೋ ಅವ್ಳೂವೇ ಸೋರು ನೀರಿಗೆ (ಧಾರೇ ನೀರಿಗೆ) ಕೈ

ಯ್ಯೊಡ್ಡಿ ಬಂದವಳೆ? ನಿಂಗೂವೇ ಅವ್ನೇ ಆಗ್ಬೇಕು. ಯಾಕ್ಬೈದು ಸುಮ್ನೆ ಕರ್ಮಾ ಕಟ್ಕೊಂಡಿ, ಹ್ಯಾಂಗೊ ಹಾಂಗೆ ಎಲೇಮರೇ ಕಾಯ್ಹಂಗೆ ಇರ್ಲಾಮಗ, ಹೇಳ್ದೋ ರೂ ಆಗೋಕಿಲ್ಲ, ಕೇಳ್ದೋರೂ ಆಗೋಕಿಲ್ಲ.

ಹು— ದೊಡ್ಡಪ್ಪ ನಮ್ಗೇ ಅದ್ಯಾಕೇ ನಮ್ಮೂರ್ಗೇ ನೀನು ಹಿರೀಕ, ಮು ಮ್ಮನ್ನ ನಿನ್ಮಾತ್ಯಾಕೆ ತೆಗ್ಯೋನೆ.

ಐನೋರು— ಏನೋ ಗೌಡ, ಜಗಳಾಬಿಡಿಸೋಕೆ ಬಂದ್ರೆ ನನ್ನೇ ತಳ್ಬಿಟ್ರಲ್ಲೋ.

ಗೌಡ— ಅಯ್ಯೋ 'ಆಪಾಟಿ ರಣಾಗ್ರದಲ್ಲಿ ರಕ್ತದ ಕೋಡೀ ಹರೀತಿರೋ ವಾಗ ನಿಮ್ಮ್ಯಾರು ಕೇಳ್ತಾರೆ, ಯಾರ್ಗೆ ಜ್ಞಾನ ಸುದ್ಧಾಗಿದ್ದಾತು. ಅದಲ್ದೆ ನೋಡಿ ನಮ್ಜನ್ದ ಜಗ್ಳಾ ಬಿಡ್ಸೋಕ್ಬಂದ್ರೆ ಹೇಂಗೆ ಅಂತೀರಿ, ಇಲ್ಲಾ ಎರ್ಡೇ ಟು ಕೊಡೋಹಂಗಿರ್ಬೇಕು, ಇಲ್ಲಾ ಎರ್ಡೇಟು ತಿನ್ನೋಹಂಗಿರ್ಬೇಕು.

ಐ— ಸರಿಕಣಪ್ಪಾ ಸರಿ.

ರೈತರು— ಜ್ಯೋಸ್ರೈನೋರೆ, ಹೊನ್ನಾರು ಯಾವತ್ಕಟ್ಬೇಕು.

ಜ್ಯೋಯಿಸರು—ಬೆರಳುಗಳಿಂದ ಮೀನ ಮೇಷ...........ಎಣಿಸುತ್ತಾ ನಾಡಿ ದ್ದು ಬುಧವಾರ.

ರೈ— ಯಾರ ಹೆಸರ್ಬಲಾ ಚಂದಾಗದೆ.

ಜ್ಯೋ— ಈ ಊರ ಆಂಜನೇಯಸ್ವಾಮಿ ಹೆಸರನವರು ಹನುಮಪ್ಪ ಹನು ಮೇಗೌಡ ಅನ್ನೋರು ಮುಂದಾಲರಾಗಿ ಬರಬೇಕಪ್ಪಾ.

ರೈ— ಎತ್ಗೋಳು ಯಾವ್ಬಣ್ದೋವ ಮುಂದೆ ಕಟ್ಬೇಕು.

ಜ್ಯೋ— ನೋಡು, ಅತೀ ಕರೀದೂ ಆಗ್ದು ಅತೀ ಕೆಂಪ್ದೂ ಆಗ್ದು, ನೋಡಿ ಮಧ್ಯಸ್ಥಿಕೆಯಾಗಿರೋದು ಆಗ್ಬಹುದು.

ಸಾಹುಕಾರ—ಏನೋ ನಿನ್ನ ಅಣಿವು ದಣಿವು ಬಂಗ ಬಡತನ ಎಲ್ಲಾ ಕೇಳಿಕೊಂ ಡು ಬಂದಾಯ್ತು. ಇನ್ನೂ ದುಡ್ಡುಕೊಡೋಕೆ ಇಷ್ಟವಿಲ್ಲವೋ.

ಸಾಲಗಾರ— ಅಪ್ಪಾ, ನಿನ್ನಮಗನಾಯ್ತೀನಿ, ನಾನು ಎರಡು ವರ್ಷದ ಬಡ್ಡಿ ಕೊಡಲಾರೆ (ಕಾಲಿಗೆ ಅಡ್ಡಬಿದ್ದು) ಸಾಲಾ ತೀರ್ಸೋತನಕ ನಾನು ನಿಮ್ಮನ್ಗೇಯಾ. ಇದೋ ಈ ದುಡ್ಡು ತೊಗೊಂಡು ನಮ್ಮಪ್ಪನ್ಮಗ್ನಾಗಿ ಮಾಡಪ್ಪ, ಅಣ್ಣಾ ಸಟಾಗಿ ನಿಮ್ಹೇಳ್ರಪ್ಪ, ಹಾಳುಮುಕ್ಳು ಸರ್ಯಾದೋರು ಹುಟ್ಲಿಲ್ಲಾ (ಮಗ್ಗ ಲಲ್ಲಿ ಕೂತಿರುವವರ ಕೈಲಿ ಸ್ವಲ್ಪ ಶಿಫಾರಸ್ ಹೇಳಿಸಿ) ಗೋಳಾಡಿ ಅಂತೂ ಇಂತೂ ಸಾಲಾತೀರಿಸಿ ಪತ್ರ ತೆಗೆದುಕೊಂಡು ಮನೆಗೆ ಹೋದನು.

ಸಾಹುಕಾರ— (ಇಸ್ಕೊಬ್ಬನನ್ನು ಕುರಿತು) ಏನೋ ತಲೇ ತಪ್ಪಿಸಿಕೊಂಡು ಏಟ್ದ್ವ ತಿರ್ಗ್ಗೀಯೋ, ನಿನ್ನ ಮನೇಬಾಗಿಲ್ಗೆ ತಿರ್ಗಿ ಕಾಲು ಸಮೇತಲ್ಲೋ.

ಸಾಲಗಾರ— ಹೋಗ್ಗೋೀಗು, ದಾವಾ ಹಾಕ್ಕೋೀಗು, ಕೋರ್ಟವ್ರೇನು ತಲೇ ಒಡ್ದಾರಾ, ಒಂಭತ್ತು ವರ್ಸಕ್ಕೆ ತಾನೇ ನಾನು ನಿನಗೆ ಹಣಾ ಕೊಡೋದು. ನಮ್ಮ ನ್ಯಾಯಾ ಹೇಂಗೆ ಅಂತಿ. ಹಿಂದಲ್ದು ಇಸ್ಕೋಬೇಕಾದ್ರೆ ಮುಂದಕ್ಕೆ ಸಾಲಾ ಕೊಡಬೇಕಪ್ಪಾ.

ಯಜಮಾನ— ಇದ್ಯಾಕ್ಣೆ ತಪ್ಪಲೇ ಚೌರಿಗೇಯ ನಿಂತ್ಹಿದ್ಹಂಗೇ ಬಿಸಾಕ್ತಿದ್ದಿ.

ಹೆಂಡತಿ— ಅಯ್ಯೋ ಹೋಗು, ಯಾವ ಮುಂದ್ಲಾರುಳೋ ಮಗನ್ಗೆ ಸಂಪಾದನೆ ಮಾಡಿ ಇಡ್ಬೇಕು, ಹೋದರೆ ಹೋಯ್ತದೆ. (ಪಾಪ ಮಕ್ಕಳಿರಲಿಲ್ಲ)

ದಣಿ— ಲೋ--ಲೋ ಹೊಲೆಯ--ಲೋ ಹಬ್ಬದ್ದಿವ್ಸ ಹುಳ್ಳೀಕಾಳು ತಿನ್ನೋ ಬಡ್ಡೀಹೈದ್ನೆ, ಕುಂಡ್ಗೆ ಅರಿವೇಕಾಣದ ಸೂಳೇಮಗ್ನೆ, ಆಗ್ಲೆ ಹೆನ್ಮ್ರೆ ಬಂತ್ಲಾ ನೋಡ್ಯ, ನಿನ್ನ ಬುರುಡೇ ಕಾಯಿಸ್ತೀನಿ. ತಲೆಗೆ ಅರಿವೇ ಇಲ್ಲದ ಬಡ್ಡೀಹೈಕ್ಳ ಕೂಲೀಗೆ ಸೇರಿಸಿಕೊಂಡರೆ ಇದೇ ಪಾಡು. ಅಕ್ಕೀಕಾಳಿಗೆ ಅರಿಶಿನ ಹಾಕಿ ಅಕ್ಕಾ ಇವತ್ತು ನಮ್ಮನೇಲಿ ಹರಿಹಬ್ಬ ಅನ್ನೋ ಲೌಡೀಮಗನೆ, ಊಂ ಹೂಂ.

ಆಳು—ಹೋಗ್ರ್ರಯ್ಯ, ನಿಮ್ಮನೇಲಿ ಗೇದೂ ಗೇದೂ ತಲೇ ಕೂದ್ಲೆಲ್ಲಾ ಉದ್ರೋೀದೊ, ಹೋದ ಯುಗಾದ್ಗೀಯಾ ನಿಮ್ಮದುಡ್ಡು ತೀರ್ಹೋೀಯ್ತು. ನೀವು ಹೇಳೋದು ಇನ್ನೂ ಎಂಡು ಯುಗಾದಿ ಕಳೀಬೇಕು ಅಂತೀರಿ. ಅದ್ಹೇಂಗ್ರಯ್ಯ ಆ ಲೆಕ್ಕಾಚಾರ. ನಾವು ಮೂಡ್ರು ನಮ್ಗೆ ಈತರಕ್ಕೀತರ ಅಂತ ಅಕ್ಸರಾ ತಿಳ್ದೋೀರ ಕೂರ್ಸಿಕೊಂಡು ಮಾತಾಡ್ರೈಯ್ಯ.

(ದಣಿ ಹೊಡ್ತ ಜೋರಾಯ್ತು, ಆಳು ನೀಲಗಿರಿ ಕಾಫೀತೋಟಕ್ಕೋಡಿದ)

ಏನಯ್ಯ ಜೊಸ್ರ್ಯೊೀರ ಕರ್ಸಿದ್ದೆ ಮಗ್ನೆ.

ಅಯ್ಯೋ ನೋಡಪ್ಪ, ನಮ್ಮನೇ ಗಡ್ವ ಆಗ್ಲೆ ಒಣ್ಗೋಣೆ, ಸೊಂಪ್ಲ ಸೊಂಪ್ಲ ಹುಡುಕ್ಯಾಡ್ತಾನೆ. ಮನೆ್ಗೇ ಬರೋಲ್ಲ, ಹಿಟ್ನೂ ಸರ್ಯಾಗೆ ತಿನ್ನೊಲ್ಲ, ಏನಾರ ಆಗ್ಲಿ, ಸಾಲ್ವೊ ಸೋಲ್ವೊ ಮಾಡಿ ಕತ್ತೊಗಂದ ಕಟ್ತೀನಿ. ಇಲ್ದಿದ್ರೆ ಮಾನಾ ಬರೋಹಂಗಿಲ್ಲ. ಅದ್ಕೇ ಹೆಸ್ರುಬಲಾ ಕೇಳೋನಾ ಅಂತ ಕರ್ಸಿದ್ದೆ.

ಕೇಳಿದವನು— ಸರಿ. ಯಾವ್ದೂವೇ ಆಯಾ ಕಾಲ್ದಲ್ಲಾದ್ರೆ ಚಂಧ, ಮಾಡೋದ್ಮಾಡು; ಯಾರ್ದ್ಹಣೇಲಿ ಯಾರು ಬರ್ದವ್ರೆ.

ಏನಣ್ಣ—ರಾತ್ರಿಯಲ್ಲಾ ಜಗಳ. ಆ ಕೇರಿಯೋರೂ ದೊಣ್ಣೇ ತೊಗೊಂಡು ಬಂದಿದ್ರಂತಲ್ಲಾ.

ಮಾವ—ಇದೇನು ಹಿಂಗ್ಕೇಳ್ತಿ. ಈ ಹಾಡು ಹಾಗರಣಾ ನೋಡ್ಕೋ ಈರಂಪ ಲೇವಡಿ ನೋಡ್ಕೊ. ಈ ಹಾದೀ ರಂಪ, ಈ ಬೀದೀರಂಪ ಉಂಟೊ.

ನಮ್ಮ ಹೈದ್ನ ಹಿಡ್ಕೊಂಡು ಹೊಡ್ಯೋಕೆ ಬಂದ್ರಂತೆ ಇವ್ರೆ ಹೇಳ್ತಿ................,

ಇವ್ರಿಂದ ಸಾವರೂಪಾಯಿ ಖರ್ಚಾಗ್ಲಿ ನಾಕ್ಹೇಟ ಹೊಡ್ದೇ ಬರೋವೆ ಅಂತ ನಮ್ಮ ಹೈದನ್ಗೆ ಹೇಳ್ತಿದ್ದೆ ಅಷ್ಟೇ ಮಾವ. ಸರಿ. ಸರಿ.

(ಸುಗ್ಗೀಕಾಲ—ನಮ್ಮೂರ ಹುಡುಗರು ಒಂದು ಮನೆಯಲ್ಲಿ ಸೇರಿ ಪ್ರಹ್ಲಾದ ಚರಿತ್ರೆ ಆಟವನ್ನು ಕಲಿಯುತ್ತಿದ್ದರು. ಮದ್ದಲೆಯು ಒಳ್ಳೇ ಚನ್ನಾಗಿ ಶಬ್ದ ಮಾಡುತ್ತಿತ್ತು. ಒಬ್ಬ ಹಳೇ ವಯಸ್ಸಿನ ಗೌಡನು ಬಂದು) ಏನು ಸ್ವಾಮಿ, ಮದ್ದಲೆ ಏನಂತದೇ ಹೇಳಿಮತ್ತೆ. ನಿಮ್ಮ ಶಾಸ್ತ್ರ ನಿಮ್ಮ ಪುರಾಣ ಏನಂತದೇ ನೋಡಾನಾ.

ನಾನು—ಅಪ್ಪಾ, ನಾವು ಪಟ್ಟಣದಲ್ಲಿದ್ದೋರು. ಇಲ್ಲಿ ನಡವಳಿಕೇ ಒಂದು ತರಹ, ಸಂಗೇನೂ ಗೊತ್ತಿಲ್ಲ. ನೀನು ಹೇಳಿದರೆ ನಾನು ತಿಳುಕೊಳ್ತೇನಿ ಅಂದೆ.

ಗೌಡ—ನೋಡಿ ಮದ್ಲೇಸದ್ದ ಹಂಗೇ ಆನ್ಸಿಕೇಳಿ, ಅಂದಾಗಿ ಕೇಳಿ ಅದ್ಹೇಳೋದೇನು ಅಂತ, ದೊರೆಕಿವಿ ಕತ್ತೇಕಿವಿ, ದೊರೇಕಿವಿ ಕತ್ತೇಕಿವಿ ಅಂತದೆ.

ನಾನು—ಹೌದು, ನೀನು ಹೇಳಿದಮೇಲೆ ಹಾಗೇ ಕೇಳಿಸುತ್ತದೆ. ಅದೇನು ಕಾರಣ.

ಗೌಡ—ನೋಡಿ ಒಬ್ಬ ರಾಜನ ಕಿವಿ ಕತ್ತೇಕಿವಿಯಾಕಾರವ್ವಾಗಿತ್ತು. ಇದು ಮಂತ್ರೀಗೆ ಮಾತ್ರ ಗೊತ್ತಿತ್ತು. ಅವನು ಯಾರಕೈಯ್ಯಲ್ಲಾದರೂ ಈ ಸಮಾಚಾರ ಹೇಳಬೇಕೂ ಅಂತ ಮನಸ್ಸಿನಲ್ಲಂದ್ಕೊಂಡ. ಆದರೆ ಧೊರೇ ಎಲ್ಲಿ ಏನ್ಮಾಡ್ತಾನೋ ಅಂತ ಹೇಳ್ಳೇ ಇಲ್ಲ. ಬರ್ತಾಬರ್ತಾ ಮಂತ್ರೀಹೊಟ್ಟೆ ಊದ್ಕೊಂತು. ಒಂದಿನ ಬೇಟೇಗ್ಹೋದಾಗ ಮಂತ್ರಿ ಕಾಡೊಳಗೆ ಗುಟ್ಟಾಗಿ ಒಂದು ಬನ್ನಿಮರದ ಕೈಲಿ, ದೊರೇಕಿವಿ ಕತ್ತೇಕಿವಿ ಅಂದ್ಬಿಟ್ಟ. ಮಂತ್ರೀದೊಳ್ಳು ಕರಗಿತು. ಬನ್ನಿಮರ ಯಾರ್ಕೈಲೂ ಹೇಳೋಕಾಗ್ದೆ ಒಣ್ಗೀಹೋತ್ತು. ಆಟಗಾರರು ಮದ್ಲೇ ಮಾಡೋಕೆ ಆ ಮರಾನಾ ಕಡ್ದು ಮದ್ಲೇ ಮಾಡಿದ್ರು. ಆ ಊರ ಅರಮನೇಮುಂದೆ ಆಟಾ

ಆಡಿದ್ರು, ರಾಜ್ನೂ ಬಂದಿದ್ದ ಮದ್ಲೆ ಹೊದ್ದೇಟಿಗೆ ಆ ಮರ "ದೊರೇಕಿವಿ ಕತ್ತೇ ಕಿವಿ" ಅಂತ ಕಿಚ್ಕೊರ್ಕಂತು. ಹಂಗಂದೇಟಿಗೆ ದೊರೆ ಓಡ್ದ, ಮರ ಚಿಗತ್ಗೊಂತು. ಅವತ್ನಿಂದ ಮದ್ಲೇ ಜಾತಿಯೆಲ್ಲಾ ಮಾತಾಡ್ಕೊಂಡು ಹಂಗೇ ಹೇಳ್ತವೆ ಅಂದ.

ನಾನು—ಓಹೋ, ಇದ್ರೂ ಇರಬಹುದು ಅಂದೆ.

ಹೆಂಗದಕ್ಕಾ ನಿನ್ನಮಗನ್ಗೇ— ಅವ್ವಾ ಏನ್ಹೇಳ್ಲಿ ಒಂದು ಬಂಗಾ ನೀಸ್ಲಿಲ್ಲ ಒಂದು ಬಡ್ತನಾ ನೀಸ್ಲಿಲ್ಲ. ಒಂದು ಕಷ್ಟಾ ಸುಕ ಅನುಭವಸ್ಲಿಲ್ಲ. ಎತ್ತೆ ತರ್ಬೇಕು ಅಂತಾ ಭತ್ತಾ ಮಾರಿದ್ದುಡ್ಡಾ ದೇವರ ಗೂಡಲ್ಲೇ ಮಡ್ಗವ್ನೆ. ಅಯ್ಯೋ ಅವ್ನು ಉಳ್ಕೊಂಡಕಾಲಕ್ಕೆ ಹೇಳ್ತೀನಿ, ಯಾವ ದೇವತೆಯೂ ನನ್ನಮಗ್ನ ಕಷ್ಟಾ ಹೊಡೆಯೋಲ್ಲಲ್ಲಾ.

ಇನ್ನೊಬ್ಬಳು—ಶಾಸ್ತ್ರಾಗೀಸ್ತ್ರಾ ಕೇಳ್ದ್ಯಾ, ಅದ್ರಲ್ಲೇನ್ಸುಟ್ಟು.

ಮೊದಲಿನವಳು—ಮೂರು ನಾಕ್ಕಡೆ ಕೇಳ್ದೆ, ಕೇಳ್ದಕಡೇಲಲ್ಲಾ ಇದು ದೇವರ ಕುಸಲ, ಸೌಂತಿ ಕುಸಲ ಅಂತ್ಲೇ ಬಂತ್ಕಣವ್ವಾ.

ಹಂಗಾದ್ರೆ ಹರಕೇ ಹೂಡು ಕಟ್ಟಿ ದೇವರೂ ದಯ್ಯಾ ಬಲಾಮಾಡ್ಕೋಳ್ಳಕ್ಕಾ. ಐನೋರ ಕೈಲಿ ಒಂದು ಯಂತ್ರ ಕಟ್ಸಿ ಒಂದು ಮಂತ್ರಾ ಹಾಕ್ಸು, ದಾನಾ ಕೊಡ್ಸು, ಹನುಮಂತ್ರಾಯ್ನ ಹೂವು ಕೇಳು, ಪಂಡಿತಯ್ಯನ ಕೈಲಿ ಒಂದು ಪೂಜೇ ಹಾಕ್ಸು, ದೊಡ್ಡಮ್ಮನ್ಗೆ ವಾಹನಾ ಎತ್ತುಸ್ತೀನಿ ಅಂತ ಹರಕೆ ಕಡ್ಗೋ, ಅತ್ಲುಗಪ್ಪೆ ಆಸ್ಪತ್ರೇಲಿ ಒಳ್ಳೇ ಔಸ್ತಿ ಕೌಟ್ತಾರಂತೆ ಹೊತ್ನಂತೆ ಹೋಗಿ ತತ್ತಾರಕ್ಕಾ.

ನೀ ಹೇಳಿದ್ದೆಲ್ಲಾ ಮಾಡಿವ್ನಿ. ಅಪ್ಪಾ ಬೆಟ್ಟದ ರಂಗ, ನನ್ಹೊಡ್ಕೊಂಡು ನನ್ನ ಮಗ್ನ ಉಳ್ಸಪ್ಪಾ ನಿನ್ನ ಕೈಮುಗೀತೀನಿ.

(ಸ್ವಲ್ಪ ಹೊತ್ತಿನ ಮೇಲೆ ಹುಡುಗನು ಅವ್ವಾ ಬಾತುಸ ರೊಟ್ಟೀ ಕಡೀತೀನಿ ತತ್ತಾ ಅಂದ)

(ನಮ್ಮೂರ ಶ್ಯಾನುಭೋಗರ ಕಂಠಸ್ವರವು ಬೆಟ್ಟದಮೇಲಿರುವ ಗಂಟೇಧ್ವನಿಯಂತಿತ್ತು. ಯಾವ ವಿಷಯವನ್ನೂ ಸಭೆಯವರಿಗೆ ಅಚ್ಚುಗಟ್ಟಾಗಿ ಕೇಳಿಸುವಂತೆ ಹೇಳುತ್ತಿದ್ದರು. ಒಂದುದಿನ ರಾಮಮಂದಿರದ ಜಗಲೀಮೇಲೆ ಎಲ್ಲರೂ ತಮಾಷೆಯಾಗಿ ಮಾತನಾಡುತ್ತಿದ್ದೆವು. ಅಗ ಅವರೇಕಾಯಿಕಾಲ ನಮ್ಮ ರೈತನು ತಾನು ಬೆಳದ ಬೂದುಗುಂಬಳಕಾಯನ್ನೂ ಅವರೇಕಾಳನ್ನೂ ಯಾರಕೈಲೋ

ಕೊಟ್ಟು ಹುಳೀ ಮಾಡಿಸಿ ಹೊಡೆದು ಗಟ್ಟಿಸಿ ಅಲ್ಲಿಗೆ ಬಂದು ಕೂತಿದ್ದ ; ಈ ಸಮಾಚಾರ ಹ್ಯಾಗೋ ಸಭೆಯಲ್ಲಿ ಹಾರಾಡಿತು. ರೈತನು ಅಯ್ಯೊ ನಾವು ಮಾಡಿತಿಂದ್ರೆ ಪಾಪ. ಯಾರೊ ಕೊಟ್ಟಿದ್ದು ತಿನ್ನೋಕೇನು ಅಂದ. ಅಲ್ಲಿಂದ ಗೌಡಗಳು ಬೂದುಗುಂಬಳಕಾಯಿ ಯಾತ್ಕೆ ತಿನ್ನೋಲ್ಲ ಅಂತ ಚರ್ಚೆಯಾಯಿತು. ಶ್ಯಾನುಭೋಗರು ಅಯ್ಯೋ ನಿಮಗೊಬ್ಬರಿಗೂ ತಿಳೀದು ನಾ ಹೇಳ್ತಿನಿಕೇಳಿ ಅಂದದ್ದೇ ಮಂದರ ಧ್ವನಿಯಲ್ಲಿ ಆರಂಭಿಸಿದರು. ರಾಮದೇವರು ಕಾಡಿಗೆ ಹೋದರು. ಭರತನು ತಾನೂ ಕಾಡಿಗೆ ಹೋಗಿ ಅಣ್ಣನನ್ನು ಹಿಂತಿರುಗಿ ರಾಜ್ಯಕ್ಕೆ ಬರಬೇಕೆಂದು ಪ್ರಾರ್ಥಿಸಿದನಷ್ಟೆ. ರಾಮರು ಬರುವುದಿಲ್ಲವೆಂದದ್ದೂ, ಕಡೆಗೆ ಭರತನ ಪ್ರಾರ್ಥನೆಯಂತೆ ತಮ್ಮ ಎರಡು ಪಾದುಕೆಗಳನ್ನು ಕೊಟ್ಟದ್ದೂ ಎಲ್ಲರಿಗೂ ತಿಳಿದ ವಿಷಯ. ಭರತನು ಮರಳಿ ನಂದಿಗ್ರಾಮಕ್ಕೆ ಬಂದ, ಪಾದುಕೆಗಳನ್ನು ಸಿಂಹಾಸನದ ಮೇಲಿಟ್ಟು ರಾಜ್ಯದ ವರದಿಯನ್ನು ಅದಕ್ಕೇ ಒಪ್ಪಿಸುತ್ತಾ ತಾನು ಸನ್ಯಾಸಿಯಂತೆ ಕಾಲಕಳೆಯುತ್ತಲಿದ್ದ. ಆಗ ರೈತರು ಮೆಲ್ಲಗೆ ಭರತನ ಸಮೀಪಕ್ಕೆ ಬಂದು ಪ್ರಭೋ-ಮಹಾಪ್ರಭೋ-ರಾಜಭಕ್ತಿಯಿಂದ ಕೂಡಿದ ನಾವು ತಮಗೆ, ಆರನೇ ಒಂದು ಭಾಗ ಫಸಲಿನ ಅಂಶವನ್ನು ರಾಜಾದಾಯವೆಂದು ಸಲ್ಲಿಸಬೇಕಷ್ಟೆ. ಈಸಲ ಕೀಳು ಪೈರನ್ನು ಹಾಕೋಣೋ ಮೇಲುಪೈರನ್ನು ಹಾಕೋಣೋ ಎಂದು ಕೇಳಿದರು. ಭರತನು ಮೇಲು ಪೈರನ್ನು ಹಾಕಿರಿ ಎಂದನು. ಸರಿ ರೈತರು ನೆಲಗಡಲೆ, ಗೆಣಸು, ಈರುಳ್ಳಿ, ಬೆಳ್ಳುಳ್ಳಿ ಮುಂತಾದ ಕೀಳುಪೈರನ್ನು (ಭೂಮಿಯ ಒಳಗಡೆ ಬೆಳೆಯುವ ಫಸಲು) ಹಾಕಿ ಭರತನ ಬಳಿಗೆ ಬಂದು ಸ್ವಾಮಿ ಈಸಲ ಮೇಲುಪೈರು ಫಲವನ್ನೇ ಕೊಡಲಿಲ್ಲ, ಎಲ್ಲವನ್ನೂ ಭೂಮಿತಾಯೇ ನುಂಗಿಬಿಟ್ಟಳು. ಈಸಾಲು ರಾಜಾದಾಯವನ್ನು ತೆಗೆದುಕೊಳ್ಳಕೂಡದು ನಾವು ಬಡವರು ಎಂದರು. ರಾಜಾದಾಯವನ್ನು ತ್ಯಜಿಸಿ, ರೈತರಿರಾ! ಈ ಸಲ ಕೀಳುಪೈರು ಮಾಡಿರಿ ಎಂದು ಹೇಳಿದನು. ಒಡನೇ ರಾಗಿ, ಭತ್ತ, ಕಬ್ಬು, ಜೋಳಾ, ಗೋಧಿಗಳನ್ನು ಬೆಳೆದು ಮೊದಲಿನಂತೆ ಬಂದು ಎಮ್ಮೊಡೆಯಾ—ಆಳುವ ದಣಿಯೇ! ಆ ಸಾರಿ ಭೂತಾಯಿಯು ನಮ್ಮ ಬೆಳೆಯನ್ನೆಲ್ಲಾ ಈಚೆಗೆ ಕಕ್ಕಿಬಿಟ್ಟಳು. ನಾವೇನೂ ಕೊಡಲಾರೆವು ಎಂದು ಮೊರೆಯಿಟ್ಟರು ಈ ಸಲವೂ ಕಂದಾಯ ರೂಪವಾದ ಫಸಲು ನಿಲ್ಲಿಸಲ್ಪಟ್ಟಿತು. ಹೀಗೆಯೇ ನಾಲ್ಕಾರು ವರ್ಷಗಳು ಕಳೆದವು. ರೈತರ ರಾಗೀಕಲ್ಲುಗೂಟವೂ ಚಿನ್ನವಾಯಿತು. ಕೊನೆಗೆ ಒಂದುದಿನ ಭರತನು ರಾಮಪಾದುಕೆಯನ್ನು ತಲೆಯ

ಮೇಲಿಟ್ಟುಕೊಂಡು ಜಂಬೂಸವಾರಿ ಹೊರಟನು. ಬೀದಿಯ ಜಗಲಿಯ ಮೇಲೆ ಗೌಡರು ಕಾಲುನೀಡಿ ಮಲಗಿಕೊಂಡಿದ್ದರು. ಜವಾನರು ಬಂದು ಎಳೈಯ್ಯ ಭರತಪ್ರಭುಗಳ ಸವಾರಿ ಬಿಜಮಾಡಿಸುತ್ತಿದೆ. ಎಂದು ಹೇಳಿದರೆ ಏನು ಹೇಳಬೇಕು ಗೌಡಪ್ರಜರು. ಹೋಗೊ ಅವ್ನೇ ಭರತೈಯ್ಯ ಅನ್ನೋಕೆ ಏನುಗುರ್ತು; ಏನಾರಾ ಗಂಟೇ ಕಟ್ಕೊಂಡಿದ್ದಾನಾ ಏಳೋಕೆ ಅಂದರು. ಅಂದಿನಿಂದ ಭರತನ ನಡುವಿಗೆ ಭಾರಿಗಂಟೆಯನ್ನೂ ಕಟ್ಟಿದರು. ಭರತನು ಯಾಕೆ ಸುಮ್ಮನಿದ್ದ ಹೀಗೆ ಅಪರಾಧ ಮಾಡಿದವರಿಗೆ ಯಾಕೆ ದಂಡದೋಷ ಹೊರಿಸಲಿಲ್ಲ. ಅವನು ಕೈಲಾಗದ ರಾಜ ಎನ್ನಬಹುದು. ಆದರೆ ನೋಡಿ ರಾಮನಿಗೆ ಪ್ರಜೆಗಳೇ ಪ್ರಾಣ. ಒಂದುವೇಳೆ ಇವರಿಗೆ ದಂಡ ಹಾಕಿ ಈ ಸಮಾಚಾರವು ರಾಮನು ಕಾಡಿನಿಂದ ಬಂದಮೇಲೆ ಅವನಿಗೆ ತಿಳಿದು ನೋಡಿದೆಯಾ ಭರತನೆ ನೀನು ನನ್ನನ್ನು ನೋಯಿಸಿದರೇನು? ನನ್ನ ಪ್ರಜೆಗಳಾದ ಒಕ್ಕಲಮಕ್ಕಳನ್ನು ನೋಯಿಸಿದರೇನು? ಅಂದರೆ ಭರತನು ಅಲ್ಲಿಗೆ ಸತ್ತಂತೆ ಆಯಿತೋ ಇನ್ನೇನಾರೂವೋ ಹೇಳಿ. ಅದಕ್ಕೋಸ್ಕರ ಭರತನು ಪಟ್ ಪಿಟ್ ಅನ್ನದೆ ಸುಮ್ಮನಿದ್ದನು.

ರಾಮನು ಬಂದನು, ತಮ್ಮನನ್ನು ಆಲಂಗಿಸಿಕೊಂಡನು. ಕುಶಲಪ್ರಶ್ನೆಗಳಾದವು. ಅರಮನೆಗೆ ಹೋಗುವಾಗ ಮಗು ಭರತ, ಇದೇನು ಗಂಟೆಯನ್ನು ಕಟ್ಟಿಕೊಂಡಿದ್ದಿ ಎಂದನು? ಭರತನು ರೈತರಿಗೂ ರಾಜನಿಗೂ ನಡುವೆ ನಿಂತು ರಾಯಭಾರಿತನವನ್ನು ನಡೆಸಿದನು. ರೈತರ ಅಪೇಕ್ಷೆಯಂತೆ ನಡೆದೆನು. ಅನ್ನುವುದೇ ಆ ರಾಯಭಾರದ ಸಾರಾಂಶ. ರಾಮನು ಬೆರಗಾಗಿ ಆದದ್ದಾಯಿತು ಎಂದು ತಾನೇ ಭರತನ ನಡುವಿನಲ್ಲಿದ್ದ ಭಾರವಾದ ಗಂಟೆಯನ್ನು ಬಿಚ್ಚಿ ತಮ್ಮನಿಗೆ ಮಂಗಳಸ್ನಾನ ಮಾಡಿಸಿದನು. ರಾಮರಾಜ್ಯವು ಪ್ರಾರಂಭವಾಯಿತು. ಒಂದು ದಿನ ತುಂಬಿದ ಆಸ್ಥಾನಕ್ಕೆ ರೈತರನ್ನು ಕರೆಸಿ ಈಸಲ ನೀವು ಈ ಬೂದುಗುಂಬಳಕಾಯಿ ಬಿತ್ತವನ್ನು ಹಾಕಿರಿ. ಇದು ದಕ್ಷಿಣದೇಶದಿಂದ ತಂದಿದ್ದು. ಬಂದದ್ದರಲ್ಲಿ ಆರನೆ ಒಂದು ಭಾಗ ಕೊಡಿ. ನಾವೂ ಸರಯೂನದೀ ದಡದಲ್ಲಿ ಬಿತ್ತುತ್ತೇವೆ ನೀವೇನಾದರೂ ಸರಿಯಾಗಿ ವ್ಯವಸಾಯ ಮಾಡದೆ ಬೀಜವನ್ನು ಹಾಳುಮಾಡಿದರೆ ಇದರಲ್ಲಿ ಬಿಡುವ ಫಲದ ತೂಕ ಚಿನ್ನವನ್ನು ಕೊಡಬೇಕಾಗುತ್ತದೆ ಎಂದು ರಾಮನು ಅಪ್ಪಣೆ ಮಾಡಿದನು. ರೈತರು ಒಪ್ಪಿಕೊಂಡರು. ಗಿಡವೋ ಮಹಮ್ಮೇರುವಾಗಿ ಬೆಳೆಯಿತು, ಫಲವು ಮಾತ್ರ ಕಚ್ಚಲಿಲ್ಲ, ರಾಮನ ಆರಂಬವು ತೋರತೋರವಾಗಿ

ಕಾಯಿ ಬಿಟ್ಟಿತು. ಕಂದಾಯದ ಕಾಲವು ಬಂದಿತು. ಮಾತಿನಂತೆ ರೈತರು ರಾಮನು ಬೆಳೆದಿದ್ದ ಬೂದುಗುಂಬಳಕಾಯಿ ತೂಕ ಚಿನ್ನವನ್ನು ಕೊಡಲು ತಕ್ಕಡಿಗೆ ಚಿನ್ನದ ಸಾಮಾನುಗಳನ್ನು ಹಾಕುತ್ತಾ ಬಂದರು. ಹೆಂಡತಿ ತಾಲಿಯೊಂದು ವಿನಾ ಬಾಕಿ ಎಲ್ಲವನ್ನು ಹಾಕಿದರೂ ತಕ್ಕಡಿ ಏಳಲಿಲ್ಲ. ಆಗ ಓಹೋ ನಾವು ಧನಮದದಿಂದ ಒಪ್ಪಿಕೊಂಡದ್ದು ತಪ್ಪಾಯಿತು. ಸ್ವಾಮಿ ಇದೆಲ್ಲವೂ ನಿಮ್ಮ ಮಾಯೆ. ನಮ್ಮ ಹೆಂಡಂದಿರ ತಾಳಿಯೊಂದನ್ನು ಉಳಿಸಿ ಕೊಡಬೇಕೆಂದು ಪ್ರಾರ್ಥಿಸಿ ಅಡ್ಡಬಿದ್ದರು. ಆಗ ರಾಮನು ಹೇಳಿದನು. ನೀವು ಏನೇ ಬೆಳೆಯಿರಿ ಬಂದ ಫಸಲಿನಲ್ಲಿ ನಮ್ಮ ತಂದೆಯವರ ದಿನದಂತೆ ಆರನೆ ಒಂದು ಭಾಗ ಕೊಡಿರಿ ಹೋಗಿರಿ ಎಂದನು. ಆಗ ರೈತರು " ಎಲ್ಲೋ ನಮಗೆ ಹುರಿದ ಬೂದುಗುಂಬಳದ ಬಿತ್ತವನ್ನು ಕೊಟ್ಟವರೆ; ನಾವು ನೋಡದೇ ಬಿತ್ತಿದ್ದು ತಪ್ಪು. ಬಡ್ಡೀದು ಈ ಬೂದುಗುಂಬಳಕಾಯಿಲ್ವ ನಮ್ಮನ್ನ ತೀರಿಸಿದ್ದು. ಇನ್ನುಮೇಲೆ ಇದನ್ನು ಮುಟ್ಟಲೇ ಬಾರದು. ಎಂದು ಕಟ್ಟುಮಾಡಿಕ್ಕೊಂಡು ಮನೆಗೆ ಬಂದರು. ಅಂದಿನಿಂದ ಇಂದಿನ ವರೆಗೂ ರೈತರು ಬೂದುಗುಂಬಳಕಾಯನ್ನು ತಿನ್ನುವುದಿಲ್ಲ. ಆದರೆ ಈಚೀಚೆಗೆ ಕೆಲವು ರೈತರು ಯಾರಾದರೂ ಬೂದುಗುಂಬಳಕಾಯಿ ಹುಳಿಯನ್ನು ಮಾಡಿ ಕೊಟ್ಟರೆ ತಿನ್ನುವ ವಾಡಿಕೆ ಇಟ್ಟುಕೊಂಡಿರುವರು. ಎಂದು ಹೇಳಿ ಮಾತು ನಿಲ್ಲಿಸಿದರು. ಆ ರೈತನು ಅವರ ಪೈಕಿ ನಾನೂ ಒಬ್ಬ ಎಂದು ಅಂದದ್ದೇ ಎದ್ದು ಹೊರಟು ಹೋದನು.

ಕುಲವಾಡಿ ಅದ್ಯಾರವ್ವ ಮನ್ಲಿ,-ಬೆಟ್ಟದೈನೋರು ಬಂದವ್ರೆ, ನಿಮ್ಮನ್ಲಿರೋ ಕಾಳು ಕಡ್ಡಿ, ಹುರುಳಿ, ಹುಚ್ಚೆಳ್ಳು ಏನಾರಾ ನಿಮ್ಮ ದುಡದಲ್ಲಿರೋದ ಕೊಟ್ಟು ಕಳ್ಸಿ.

ಯಜಮಾನ್ತಿ—ಲೊ. ಅಮಾಸೆ ನಾನ್ಯಾವ ವರ್ಸ ನಿಲ್ಸಿದ್ದೇನು, ಮಗ್ಗಲಮನೇವ್ರು ಊರಿಗೆ ಒಕ್ಕಲಾಗಿ ಮುಸಾಣ್ಕೆ ಹೆಣವಾಗಿಲ್ವಾ, ದಾಸ, ಪುರುಸ, ಪೂಜಾರಿ ಕಂದಾಯ ಬಡ್ಡೀ ಬಾಸ್ಗೆ ಇವೆಲ್ಲಾ ನೀಸ್ವೆ ಇದ್ಮೇಲೆ ಊರ ಲ್ಯಾಕಪ್ಪ ಹೊಗೇ ಹಾಕೋದು. ಅವಳ್ನ ಕೇಳ್ಲಾ ನಂದೇನು ಯಾವತ್ತಿದ್ರು ಬತ್ತದೆ.

ಕುಲವಾಡಿ — ಪೂಜಾರ್ರೈನೋರೆ ನೋಡಿ, ನಾಕೈದು ಹಳೇ ತಲೆ ಅವೆ. ಅವಿರೋ ಗಂಟ ನೀವು ಬರೀಕೈಲಿ ಹೋಗೋ ಹಂಗಿಲ್ಲ. ಆ ಮೇಲೇನೋ ನಾನ್ಹೇಳ್ಲಾರೆ.

ಮುಖಂಡ—ಏನೋ ನಿನ್ನಮೇಲೆ ಒಂದು ನ್ಯಾಯಾ ಬಂದದೆ ನಾಳೀಕೆ ಚಾವಡೀಮೇಕೆ ಬಾರ್ಲ್ಲಾ, ಹತ್ತೂ ಜನಕ್ಕೆ ಬಿದ್ದ ನ್ಯಾಯಾ ಬಿರ್ನೆ ಸಾಯೋಕಿಲ್ಲಾ ಕಾಣಪ್ಪಾ.

ರೈತ—(ದಿಗಿಲುಬಿದ್ದು) ನೋಡಿ ನೀವು ಪಕ್ಷಪರಪಕ್ಷ ವಹಿಸಿ ಮಾತಾಡಬೇಡಿ, ನಾನು ಸರಿಯಾದ ನ್ಯಾಯಾ ಸಿಗೋಗಂಟ ಪಟ್ಟೇಬಿಟ್ಟು ಏಳೋದಿಲ್ಲ. ಆಕಾಶವಾಣಿ ಭೂಮಿತಾಯಿ ಸತ್ತಾಗ್ಲೂ ನಾನು ಆ ಕೆಲ್ಸಾಮಾಡ್ಲಿಲ್ಲ. ಆಗ್ಲಿ ಬತ್ತೀನಿ. ನೂರೊಕ್ಕಲ್ಗೆ ನಿಷ್ಠೂರಾಗಿ ಊರಲ್ಲಿರೋಕಾಯ್ತುದಾ.

ಇನಾಂದಾರು—ಏನ್ನೈಯ್ಯಾ ಗೌಡ ನಿನ್ನ ಮಗನಿಗೆ ವಿದ್ಯಾಭ್ಯಾಸ ಮಾಡಿಸ ಬಾರದೆ.

ರೈತ—ಅಯ್ಯೋ ನಾನೋದಿ ಹುರುಳೀಹೊಲ ಕೆರೆಯೋದೇ ಸಾಕು. ರಾಮಾಯಣ ಭಾರತ ಭಾಗವತಕ್ಕೆಲ್ಲಾ ಅರ್ಥಾ ಮಾಡಿವ್ನಿ ಬ್ರಾಹ್ಮಣ್ರ ಸಭೇಲಿ ಅರ್ಥ ಒಡ್ಡಿವ್ನಿ. ಏಟೋದಿದ್ರೇನು ಮೇಣಿಮೇಲೆ ಕೈ ಮಡ್ಗೋದು ತಪ್ತಾ, ನೀವೋದೋದೇ ಸಾಕು ಸುಮ್ನೀರೊಲ್ರಾ.

ರೈತ—ಏನ್ಬುದ್ದೀ ಶ್ಯಾನುಭೋಗ್ರೆ, ನೀವು ಊರಿಗೆ ತಾಯಿತಂದೆ ಅಂತ ನಿಮ್ಮ ಕೈಲಿ ಕಂದಾಯ ಕೊಟ್ರೆ ರಶೀತೀನೆ ಕೊಡ್ದೆ ಗದ್ದೆ ಹರಾಜು ಮಾಡ್ಸಿದ್ದೀರಾ, ಹೋದಸಲ ಕೊಟ್ಕಂದಾಯ್ದು ರಶೀತೀಲಿ ಸಂವತ್ಸರಿಲ್ಲ. ಖಾತೆಇಲ್ಲ. ಎಕರೆ ಇಲ್ಲ. ನಂಬರಿಲ್ಲ. ಇದೇನ್ಬುದ್ಧಿ ನೀವೇ ಹಿಂಗ್ಮಾಡ್ತೀರಿ.

ಶ್ಯಾನು—ಲೌಡೀಮಗನೆ, ನಿಮ್ಮಪ್ಪ ಮಶೀಕಾಣ್ಕೆ ಕೊಡ್ತಿದ್ದ. ನೀನು ಅದ್ಕೇ ಸೊನ್ನೇಸುತ್ತಿದ್ದಿ, ನೀನು ಕಲ್ತ ಬುದ್ಧಿವಂತಿಕೆ ನೀ ಮಾಡು, ನಾ ಕಲ್ತಬುದ್ಧಿವಂತಿಗೆ ನಾ ಮಾಡ್ತೀನಿ.

ರೈತ—ಚಂದಾಯ್ತು. ನಿಮ್ಗೇಟ್ಕೊಟ್ರೂ ಕೈ ಮಡ್ಗೇ ಇರ್ತೀರಲ್ಲಾ, ಅದಲ್ವಾ. ಹೋಗ್ಲಿಕೊಳ್ಳಿ.

ಯಜಮಾನ—ಶ್ಯಾನುಭೋಗರೆ, ಈನ್ಯಾವ ತಾಂಬೂಲ ಎತ್ತಬೇಕು ?

ಶ್ಯಾ—ತಮಗೆ ತಿಳೀದೆ, ಕಾವೇರೀ ಸಂಧ್ಯಾ ಮಂಟಪದ್ದು ಎತ್ತಿದರೆ ಆಮೇಲೆ ಸಭೆಗೆ.

ಗ್ರಹಸ್ಥರೊಬ್ಬರು—ಎದ್ದುನಿಂತು ನೋಡಿ ಈ ಕಾವೇರೀ ಸಂಧ್ಯಾಮಂಟಪದ ವೀಳ್ಯ ಯಾಕೆ ನಾಲ್ಕಾಣೆ ದಂಡವಾಗಿ ತೆಗೆಯುತ್ತಾರೊ ನಂಗೊತ್ತಿಲ್ಲ. ಶ್ಯಾನುಭೋಗರು ತೆಗೆದುಕ್ಕೊಳ್ಳುತ್ತಾರೆ ಅಂತ ನಂಗೆ ಹೊಟ್ಟೇಕಿ

ಜ್ಚಿಲ್ಲ. ನಮ್ಮೂಳಿದಡದಲ್ಲಿ ಸಂಧ್ಯಾ ಮಂಟಪ ಇಲ್ಲದೆ ಇರೋಮಾತಿರಲಿ. ನೆಟ್ಟಗೆ ಒಂದು ಹೊಂಗೇ ಗಿಡದ ನೆರಳಾರೂ ಬ್ಯಾಡವೇ ಕೂತುಕೊಳ್ಳೋದಕ್ಕೆ.

ದಳ್ಳಾಳಿ—ಭತ್ತಾ ಕೊಡ್ತೀರೋ.

ಗೌಡ—ಇವತ್ತು ಮಂಗಳವಾರ ಇವತ್ತು ಬಿಟ್ಟುಕೊಂಡು ಬನ್ನಿ. ಪುನಃ ದಳ್ಳಾಳಿಯು ಬಂದು ಕೇಳಿದನು. ಅವ್ವಾ ಇವತ್ತು ಶುಕ್ರವಾರ ಆದ ರಲ್ಲೂ ಹೊತ್ಮುಳುಕೊ ಹೊತ್ತು. ಹೊತ್ತಾರೆ ಅಷ್ಟುಹೊತ್ತಿಗೆ ಬನ್ನಿ. ದಳ್ಳಾಳಿ ಶನಿವಾರ ಬಂದು ಅಳೆಸಿದನು. ಭತ್ತದ ರಾಶಿ ಹಾಕಿದ ಜಾಗದಲ್ಲಿ ಚೆಲ್ಲಿದ್ದ ೧--೨ ಸೇರು ಭತ್ತವನ್ನು ಬಳಿದುಕೊಳ್ಳುತ್ತಿದ್ದನು. ಗೌಡಿತಿಯು ಒಳಗಿಂದ ಬಂದ ವಳೆ ಚಂದಾಯ್ತು, ನಮ್ಮನೇ ಲಕ್ಷ್ಮೀಯ ಬಾಚ್ಕೋತೀರಾ ಬಿಡಿ ಬಿಡಿ ಎಂದು ಶಿಡಾರನೆ ಮಾತಾಡಿ ಅಷ್ಟನ್ನು ಉಳಿಸಿಕೊಂಡಳು.

ಮಗ—ಅಪ್ಪಾ ಎತ್ತರೋಕೆ ಹೇಮಗಿರಿ ಜಾತ್ರೇಗೆ ಹೋಯ್ತಾನಿ.

ತಂದೆ—ಣೇ, ಅದ್ಯಾರ್ಣೆ, ಒಳ್ಗೆ ರೊಟ್ಟೀ ಬುತ್ತಿ, ಬೆಳ್ಳುಳ್ಳಿ ಮೆಣ್ಸಿನಕಾರ, ಬೆಣ್ಣೆ, ಈರುಳ್ಳಿ ಕಟ್ಕೊಡ್ಣೇ. ಜಾತ್ರೆಗ್ಹೋಗಿ ಹೋರಿ ತತ್ತಾನಂತೆ ನಿನ್ಮಗಾ. ಲೋ ಮಗಾ, ನಡೂನಲ್ಲಿರೊ ಚೀಲಾ (ದುಡ್ಡಿನ ಚೀಲಾ) ಜೋಕೆ. ದನಾ ಪರೀಕ್ಷೆ ಮಾಡೋವಾಗ ಹೀನಸುಳಿ, ಪಾತಾಳಸುಳಿ, ದಾವಣಿ ಸುಳಿ ಪರ ಕಲ ಸುಳಿ, ನಮೂನಿ ಸುಳಿ. ಸಿಡಕ್ಲಾಲು, ಕೋರಬಗ್ರಿ, ಕೊಮ್ಮಲ್ಲು ಇವೆಲ್ಲಾನೂ ಚಂದಾಗಿ ನೋಡಿ ಒಳ್ಳೆಸುಳಿ ಇರೋದ ತತ್ತಾಲಾ (ಹಾಗೇ ಆಗಲೆಂದು ಜಾತ್ರೆಗೆ ಹೋದನು)

ಒಂದು ದಿನ ಬೆಳಿಗ್ಗೆ ಅಷ್ಟುಹೊತ್ತಿಗೆ ನಮ್ಮ ಬೀದಿಯ ಮುದುಕಿಯೊ ಬ್ಬಳು ಬೈಗಳ ಮಳೆಗಾರಂಭಿಸಿದ್ದಳು. ಕಾರಣ ವಿಚಾರಿಸಿದ್ದರಲ್ಲಿ ಎಲ್ಲೋ ಒಂದು ಕೋಳೀ ಮರಿ ಮಾಯವಾಗಿ ಬಿಟ್ಟಿದ್ದಿತಂತೆ.

"ಅಯ್ಯೋ ನಿನ್ಹಾಕಿಬರ, ನಿನ್ಹೂಳಿಬರ, ನಿಂಗೆ ದೊಡ್ಡರೋಗ ಬರ, ನಿಂಗೆ ಬಥಬಾರದ್ಬರ. ನಿಸ್ಕೇರಿ ಹಾಳಾಗ, ಹಾಳ್ಗೇರೀದೆ, ಬೀಳ್ಗೇರಿದೆ. ನಿನ್ಹೊಟ್ಟೆಗೆ ಗಾಳಿ ನುಗ್ಗ, ನಿಂಗೆ ಅವಧೀವಾಲೆ ಬರ, ನಿಂಗೆ ಶಿಡೀಗೂಡು ಬರು, ನಿನ್ನ ಹುತ್ಕಕ್ಕೆ ತುರಕ, ನಿನ್ನಸರು ಮುಚ್ಚ, ನಿಂಗೆ ಶಿಡಿಲು ಬಡಿಯ, ನಿನ್ನ ಮಾರಮ್ಮಮುರಿಯ, ಇತ್ಯಾದಿ. ಇತ್ಯಾದ್ಯನೇಕ **ಆಶೀರ್ವಾದಂಗಳು** ಕೋಳಿಯನ್ನುಮುರಿದವರ್ಗೆನಿತ್ಯಂ.

ಸ್ನೇಹಿತ—ಲ್ಹೋ, ಕೊಥಮ. ಅವ್ನ ಮನೇಗೇ ನುಗ್ಗಿ ಹಂಗೇ ಬರೋದಲ್ಲಾ.

ಕೊರಮ—ಸರಿಕಣ್ಸೈಯ್ಯನ, ನಾವು ಕಳ್ತಾದ್ರೆ ನಮ್ಗೇನು ಧರ್ಮ್ಮಕರ್ಮ್ಮ ಇಲ್ವಲ
ಪ್ಪೈನ. ನಾವು ಊರಿಗೊಂದು ತಾಯಿಮನೆ ಇಟ್ಕೊಂಡೀವಪ್ಪ, ಆ

ಮನೇಲಿ ಕದ್ರೆ ತಾಯಿ ಹತ್ತಿರಕ್ಕೋದಷ್ಟು ಪಾಪ. ಇನ್ನೂ ಇವತ್ತೇಳ್ದಲ್ಲ ಆ ಮನೆ ಪಾಡು ನಾಳೀಕ್ಕೋಡು. ಧನುರ್ಮಾಸದ ಕೊನೆ, ಪುಷ್ಯಮಾಸದ ಆದಿ. ಬೈತಡಲ್ಲಿ ಸ್ವಲ್ಪ ದೇಹಬಲವುಳ್ಳವರೂ ಸಹ ಹೊಲ ಗದ್ದೆಗಳಿಗೆ ಹೋಗಿದ್ದರು. ಕೆಲವರು ಮುದುಕರು ಎಲಡಕೆ ಚೀಲವನ್ನು ಸದ್ದುಮಾಡುತ್ತಾ ಒಂದು ಜಗಲಿಯ ಮೇಲೆ ಸೇರಿದರು. ಬೆಳಗಿನ ಎಂಟು ಗಂಟೆ ಬಿಸಿಲು ಇನ್ನೂ ಚುರುಚುರು ಅನ್ನು
ವುದಿಲ್ಲವಲ್ಲಾ ಎಂದು ವಟಗುಟ್ಟುತ್ತಿದ್ದರು.

ಒಬ್ಬ—ಏನೋಭಾವ ಕುಂಪಣ್ಯೋನು ರಾಜ್ಯಾ ಆಳ್ದಂಗೆ ಯಾವ್ನೋನೂ
ಆಳಲಿಲ್ಲಾ ; ರೈಲಲ್ಲಿ ಕೂತ್ರೆ ಒಂದು ನಿಮಿಷಕ್ಕೆ ಮೈಸೂರು.

ಇನ್ನೊಬ್ಬ—ಲೋ ಮಾವ, ಕುಂಪ್ಣ್ಯೋನು ಯಾರು ಅಂತಿ. ಸುಗ್ರೀವ
ಅಂಗದ ಇವ್ರು ಇದ್ರಲ್ಲಾ. ರಾಮದೇವ್ರು ಸುಗ್ರೀವನಿಗೆ

ಕಲಿಯುಗದಲ್ಲಿ ನೀವು ರಾಜರಾಗಿ ಎಂದು ವರಾಕೊಟ್ಟ, ಅವ್ರೇಯ ಈಗ ಕುಂ
ಪ್ಣ್ಯೋರು ಕಣ್ಸೈ.

ಮುದುಕ—ಲೋ ಮಗ, ಇನ್ನೂ ಮಲ್ಗಿದ್ದೀಲಾ. ತೋಟಾತುಡ್ಕೆ ಬಳಸ್ಕೊಂಡು
ಬರಾಕಿಲ್ವಲಾ ನಿತ್ಯ ಒಂದ್ಸಲಾ ಜಮೀನ್ಮೇಲೆ ತಿರ್ಗದೇ ಇದ್ರೆ
ಭೂಮಿತಾಯಿ ಮುನಸ್ಕೊಂಡ್ಬಿಟ್ಟಾಳು.

ಮಗ—ಇಟ್ಹೋತ್ಗೆ ಕಳ್ರು ಬಂದು ಸೋಗೆ, ತಳ್ಳು, ಬಾಳೇಗೊನೆ ಹೂಯ್ಕೊಂ
ಡು ಹೋದಾರಾ.

ಮುದುಕ—ಅದ್ಕೆ ಸೋಮಾರಿ ನನ್ನ ಮಗನ್ನೋಡಿ ಭೂಮಿತಾಯಿ ಏನೂ
ಕೊಡಲ್ಲ.

ಮುದುಕಿ—ಅಪ್ಪಾ ಗೌಡ, ಶಾನುಭೋಗ್ರೆ ನೀವು ಗ್ರಾಮದ ತಾಯಿತಂದೆ
ಗೋಳು. ನಾನು ಅಡಕುಮಡಕೆಸಾಲಲ್ಲಿ ಅಡೀ ಮಡ್ಕೇಲಿ

ಮೂರು ರಾಜರಗೋಳ ಮೂರುತಲೆ ರೂಪಾಯು ಬಟ್ಟೇಲಿ ಕಟ್ಟಿಟ್ಟಿದ್ದೆ. ಈ ನನ್ನ........ಮಗ ನೆನ್ನೆರಾತ್ರೆ ಹೊಡ್ದೂ ಬಡ್ದೂ ನನ್ನ ಸಿಕ್ಕಾಪಟ್ಟೆ ಬೈದು ಆ ರೂಪಾಯು ನಾನ್ಕಾಣದಹಂಗೆ ಹೊಡ್ದವ್ನೆ. ಹೆಂಗಾರ ಕೊಡ್ಸ್ಕೊಡಿ ನಿಮ್ದ
ಮ್ಮೈಯ್ಯ—,

ಶಕ್ಯಾ—||ಪ|| ಲೇ-ಲೆ, ನಿನ್ಗೇನು ಕಾಲ ಆಯ್ತು, ದೇಶ ಆಯ್ತು, ಇರುವ ಮಗ ನ್ಗೆತಾನೇ ಇದೆಲ್ಲಾ. ಲೌಡೀಮಗ ಕದ್ದರೆ ಕದ್ದ, ನಮಗೇನಾರಾ ದಾನಾ ಕೊಟ್ಟಾನಾ. ಮಡ್ಕೇಬಳ್ಗಿದ್ರೆ ರೂಪಾಯಿ ಮರೀಹಾಕ್ತಾದಾ ಹೊಗ್ಹೋಗು ನಾವು ವಿಚಾರಸ್ತೀವಿ.

(ಮುದುಕಿ ಉಸಿರಾಡುವ ತನಕ ರೂಪಾಯಿನ ಸುದ್ದಿಯನ್ನು ಹೇಳಿ ಕ್ಕೊಂಡು ಗೋಳಾಡುತ್ತಲೇ ಇದ್ದಳು.)

ವಾದಿ—ಇದೋ ನೀವು ಹತ್ತೂಜನ ಸೇರಿದ್ದೀರಿ. ನಾನು ಬಡವೆ ತಿರಕೊಂಡು ತಿಂಬೋಳು. ನನ್ನ ಕೋಳೀನ ನೆನ್ನೇ ರಾತ್ರಿ ಇವರಿಬ್ಬರೂ ಸೇರಿ ಮುರ್ದವ್ರೆ. ನ್ಯಾಯಾನಾ ನೀವೆ ಪರಿಹರಿಸಿ.

ಪ್ರತಿವಾದಿಗಳು—ನಾನಲ್ಲ ನಾನಲ್ಲ, ದೇವ್ರಾಣೆ, ನನ್ನಾಣೆ, ನಿಮ್ಮಾಣೆ ನಾವಲ್ಲ. ಮುಖಂಡರು ಕಾಗದಪನ್ನು ತರಿಸಿ ನೋಡಿ ಕೆಟ್ಹೋ ಗ್ತೀರಿ-ಬ್ಯಾಡೀ-ಬ್ಯಾಡೀ ಪೋಲೀಸಿಗೆ ಅರ್ಜೀ ಕೊಡ್ತೀವಿ ನಿಜಾಹೇಳಿ.

ಪ್ರತಿ—(ಮೆತ್ತಗೆ) ನಾವು ಬತ್ತಾ ಹರ್ಡಿದ್ಹೊ, ಮೇಯೋಕೆ ಕೋಳಿಗೋಳು ಬಂದೊ. ದೊಣ್ಣೇಲಿ ಹೀಗಂದೊ ನೆಗದು ಬಿದ್ಹೋದೋ. ಹೊತ್ತಾ ರೀಕೆ ಕೊಡೋನೆ ಅಂತ ರಾತ್ರಿ ಮನೇಲೇ ಮಡಗಿದ್ಹೊ.

ಮುಖಂಡರು—ನಾನಲ್ಲನಾನಲ್ಲ ಎಂದು ಸುಳ್ಳು ಹೇಳಿದ್ದಕ್ಕಾಗಿ ನಾಲ್ಕು ನಾ ಲ್ಕಾಣೆ ಜುಲ್ಮಾನೆ ವಿಧಿಸಿ ನಾಲ್ಕಾಣೆಯನ್ನೂ ಕೋಳಿಗಳನ್ನೂ ವಾದಿಗೆ ಕೊಡಿಸಿ, ಉಳಿದ ನಾಲ್ಕಾಣೆಯನ್ನು ಊರೊಟ್ಟಿನ ಹಣಕ್ಕೆ ಶೇರಿಸಿದರು.

ಸಭಿಕರಲ್ಲೊಬ್ಬ—ಹೋಗ್ರಯ್ಯ, ಎಂತಾ ನ್ಯಾಯ ಹೇಳಿದ್ರಿ. ಅವರಿಬ್ಬರ ಮೇ ಲೂ ಕೋಳೀ ಹೊರ್ಸಿ ಊರೆಲ್ಲಾ ಮೆರವಣಿಗೆ ಮಾಡಿಸೋದು ಬಿಟ್ಟು ಜುಲ್ಮಾನೆಯಂತೆ ಜುಲ್ಮಾನೆ.

ಮುಖಂಡರು—ಓಹೋ ಇಲ್ಲಿ ಸೇರಿರೋ ಜನವೇ ಊರೆಲ್ಲಾ ಆಯ್ತು. ಇನ್ನು ತಿರಗೀ ಬೇರೆ ಮಾನಾ ಹೋಗಬೇಕೋ.

ಸಭಿಕನಾದ ಮುದುಕ—ಈ ಹೆಣ್ಣು ಚೋಟುದ್ದ ಅವ್ಳೆ, ನನ್ನಗದ್ದೇಹತ್ರ ದನಾನಾ ಗದ್ದೇಲಿ ಮೇಯೋಕೆ ಬಿಟ್ಟಿದ್ದೆ ಅಂತ ಏಟು ಬೈದ್ಲು, ಹೊಲೆ ಯನ ಹೊಟ್ಟೇಲಿ ಹಾಕಿ ಮಾದಿಗನ ಹೊಟ್ಟೇಲಿ ತೆಗ್ದಲ್ಲಾ. ಕೋಳೀನ ತಲೇ ಮೇಲೆ ಹೊರಿಸಿ ಮೆರ್ವಣ್ಗೆ ಮಾಡ್ಸಿದ್ರೆ ಸರಿಯಾಗೋದು ನ್ಯಾಯ.

ಶ್ಯಾನುಭೋಗರು — ನಿನ್ಗೂ ಹೆಣ್ಣುಮಕ್ಳು ಗಂಡುಮಕ್ಳೂ ಇರುತ್ತಾರೆ. ನಡೆಯೋ ಕಾಲು ಎಡ್ವುತ್ತದೆ, ತಪ್ಪಿಗೆ ಸರಿಯಾದ ದಂಡಾ ಕಣಂತೆ ನಡಿಯೋ ಅಂದರು, ಸಭಿಕರು ಎದ್ದರು.

ಹಳಬ ರೈತ — ಹೋಯ್ತು ಸೋಮಿ ಹೋಯ್ತು, ನಮ್ಮೂರಿಗೆ ಏನೋ ಬಂದ್ಬುಡ್ತು.

ಅಂಥಾದ್ದೇನಪ್ಪ ಗೌಡ.

ನಿನ್ನೇದಿನ ಹದವಾದ ಮಳೆಯಾಗಿದೆ, ಏನಾರೂ ಹದಗುದಿ ಮಾಡಿ ಹೊಲ್ಕೆ ಕಾಳು ಬಿತ್ಗೋದು ಬಿಟ್ಟು ಆಟಾ ಆಡಿ ಮುಳಕ್ಕೊಂಡವ್ರಲ್ಲಾ, ಬೆಳೆ ಬಾ ಅಂದ್ರೆ ಏನು ಬಂದೀತು ? ಬದ್ಕೋದ್ ಹ್ಯಾಂಗೆ.

ಏನೋ ಬೇಜಾರಾಗಿ ಕರೀಬಂಟನ ಕತೆ ಆಡಿದ್ರೆ ನಿಂದೇನು ಗೊಣಗಾಟ ?

ಸರಿ ಸರಿ. ಹೊಳಿಂದಾಚೆ ಹಳ್ಳಿಗೋಳಲ್ಲಿ ಮಳೆ ಹದವಾದ್ದಿನ ಒಪ್ಪಾವಾ ಡೋಕ್ಕೊಗೋವಾಗ್ಲೇ ನೇಗ್ಲು ಎತ್ತು ಅಟ್ಕೊಂಟ್ಹೋಗೋವ್ರು ಹತ್ತಿರದ ನಂಟರು ಅತ್ಕೊಂಡು ಕರ್ಕೊಂಡು ಮನೇಗ್ಹೋದ್ರೆ ಬಾಕಿ ಜನ್ರು ಕೈಕಾಲು ತೊಳ್ಕೊಂಡು ಹೊಲಾ ಉತ್ತು ಸತ್ತವರ ಮನೇ ಹೊಲಾನು ಉತ್ತಿ ಮನೇಗ್ಹೋಗೋವ್ರು ಆರಂಬ ಅಂದ್ರೆ ಹಂಗೇ ಅಂತೀರಿ. ಬಲಗೈಲಿ ಬಿತ್ತಿದ ಕಾಳಿನ ಹೊರವೇ ಬೇರೆ. ಆಗಲೇ ಎಡಗೈಲಿ ಎರಚಿದ ಕಾಳಿನ ಪೈರೇ ಒಂದುತರಹ. ಅಷ್ಟು ಕಾಣ್ದೆ ಶಾಸ್ತ್ರಗಳು ನಮಗೆ ಹದಾ ನೋಡಿ ಬಿತ್ತೋಕ್ಕೆ ಎಷ್ಟು ಅನುಕೂಲಾ ಬೇಕೊ ಅಷ್ಟೂ ಮಾಡ್ಕೊಟ್ಟವ್ರಾ, ನೆನ್ನೆ ಹೊತ್ತಾರೆ ಅವರಿಬ್ರು ಬಿತ್ತಿದ್ರು ನೋಡಿ. ಇಬ್ಬರಿಗೂ ಎರಡು ಖಂಡುಗ ಎಳ್ಳು ನಾಗಂಡುಗ ಜೋಳ ಆಗೇ ಆಯ್ತು ಅಂತಾ ಇಟ್ಕೊಳಿ. ಅದ್ಕೇ ಹೇಳಿದ್ದು. ನಮ್ಕಾಲದಲ್ಲಿ ಬೈಲಾಯ್ತು ನಾವಾಯ್ತು. ಈಗೇನಪ್ಪಾ ಊರ್ಬಿಟ್ಟು ಕಡದರೆ ಸಳಿ ಅಂತವೆ ಬಡ್ಹತ್ಕೋವು.

ಈಗೆಲ್ಲಾ ಟೈಂ ಪ್ರಕಾರ ಕೆಲಸಾ ಕಣ್ಸಯ್ಯ ಗೌಡ — ನಿನ್ಮಾತು ಯಾರ್ಕೇಳ್ತಾರೆ. ಹಳಬರೇ ಹೀಗೆ ಏನಾದರೂ ಲೊಟಗುಟ್ಟುತಲೇ ಇರೋದು.

ಅಯ್ಯೋ ಮುಂಡ್ಹತ್ಕೋವು ಬೆಳ್ಕೊಂಡುಂಡ್ರೆ ನಂಗೇನಾದ್ರೂ ಕೊಟ್ಟಾವಾ-ಅಲ್ಲಾ-ಹಿಂಗಾಯ್ತಲ್ಲಾ ಎಂದು ಹೇಳಿದೆ.

ಸರಿ — ಅದೆಲ್ಲಾ ಅವರೇ ತಿದ್ದುಕ್ಕೊಳ್ಳಬೇಕು.

ಪಂಚಾಯ್ತುರು — ಲೇ-ಹೆಣ್ಣೆ, ಈಗ ವರುಷದಿಂದ್ಲ ಗಂಡನ್ನ್ಬಿಟ್ಟು ಎಲ್ಹೋಗಿದ್ದೆ. ನಾನೆಲ್ಹೋಗಿದ್ದೆ. ನಂತಂಗೀ ಮನೇಗ್ಹೋಗಿದ್ದೆ. ಸರಿ ತಂ

ಗೀಮನೇಗೋಗಿದ್ರೆ ಆ ತಂಟಮಾರಿ ಬಡ್ಡೀಮಗನ ಜಗ್ಲೀಮೇಲೆ ನೆರಕೆ ಯಾಕೆ ಕಟ್ಕೊಂಡಿದ್ದೆ (ಅವಳ ತಂಗಿಯನ್ನು ಕುರಿತು) ಲೇ—ನಿಮ್ಮಕ್ಕ ನಿಮ್ಮನ್ಲೀ ವರುಷದಿಂದ ಇದ್ಲೇನೆ ?—

ಇಲ್ಲಾ ಕಾಣ್ರಪ್ಪಾ-ಇಲ್ಲಾ. ಅವಳ ಗಂಡ ಹೊಡ್ದ್ರೂ ಬಡ್ದ್ರೂ ಅಂದೂ ಆಡಿ ಆಚ್ಗೆ ತಳ್ದ್ರೀ ಹೊತ್ಗೆ ಬಂಧೂ ಬಳ್ಗ ಅಂತ ನಮ್ಮೂರಲ್ಲೇ ಮರೆಮಾಡ್ಕೊಂಡವ್ನೆ.

ಪಂ— ಲೇ-ನೀನು ಬಿಮ್ಮನ್ಸೆ (ಬಸರಿ) ಯಾಗಿದ್ದೀಯಲ್ಲಾ ಯಾರ್ಗಾದೆ ನಿಜಾ ಹೇಳು ಉತ್ತರವೇ ಇಲ್ಲ.

ಗಂಡ—ಕೇಳಿ ಮುಂ........ನ, ಹಾಕಿ....ಉಗೀರಿ—ನನ್ಹಟ್ಟೀ ಬಾಗಿಲ್ಗೆ ಕೂಡೇನಾ.

ಪಂ— ನೋಡು ಮುಂದಿನ ಜೀವನದ ದಾರೀಗೆ ಕಲ್ಲು ಹಾಕ್ಕೋಬೇಡ ನೋಡು.

ಹೆಂಗಸು—ಅಯ್ಯೊ ಹುಲ್ಲಿರೋಕಡೆ ಮೇಯ್ಕೊಂಡೆ, ನೀರಿರೋಕಡೆ ಕುಡ್ಕೊಂಡೆ ಇನ್ನ್ಯಾಕ್ರಯ್ಯ ಕೆದ್ಕೀರಿ. ಏನೋ ನಿಮ್ಮ ಹೆಣ್ಮಗ್ಳು ಹೊಟ್ಟೀಪಾಡಿಗೆ ದಾರಿಮಾಡಿಬಿಡಿ.

ಪಂ— ಗಂಡನಿಗೆ ತಾಲೀ ಕಡಗ ಕೊಡಿಸಿ ತಂಟ್ಮಮಾರೀಗೇ ತಾಲೀ ಕಟ್ಟಿಬಿಟ್ಟರು,

ಗೌಡ—ಐನೋರೆ ಪಂಚಾಂಗ ಗಿಂಚಾಂಗ ನೋಡೋಕಿಲ್ವಾ. ಮಳ್ಯಾಕೊ ಹಾಕ್ಲಾಡ್ತತೆ. ಯಾಕೋ ಈ ಬಾರ್ಯೂವೆ ರೈತ್ರ ಮುಳ್ಗ್ಹೊಕೋ ಹಂಗೆ ಕಾಣ್ತದೆ.

ಐನೋರು—ಅಶ್ವಿನಿ ಮಳೆ ಮಂಗುಳುವಾರ ರಾತ್ರಿ ಹುಟ್ಟುತ್ತದೆ. ಆ ಮಳೆ ಆಗೇ ಆಗುತ್ತದೆ.

ಗೌಡ—ಈ ಕೋಟೆ ಮುಗಿಲು ಎದ್ದರೆ ಮಳ್ಯಾಯ್ತದೆ ಅಂತ ಹಿರ್ಯೋರು ಹೇಳುತ್ತಿದ್ದರು. ನೋಡಬೇಕು.

ಐ—ಇನ್ಯಾವ ಲಕ್ಷಣ ಇದ್ರೆ ಮಳೆಯಾಗುತ್ತದೆ ?

ಗೌ—ಕೋಟೆಮುಗಿಲು, ಕೆಮ್ಮೋಡ, ಬಿಳಿಮೋಡ, ಕಾರ್ಮೋಡ ಹಿಂಡುಮೋಡ ಇವಿದ್ದು ಚಿಟ್ಟೆಹುಳ ನೆಲಕಚ್ಚದೆ ಹಾರಾಡಿದರೆ ಮಳೆ ತಕ್ಕೋಳಿ ಕುರ್ತೇಟು ಬಂತು.

ಹಳೇಪಟೇಲ್—ಏನುಸ್ವಾಮಿ ನನ್ನ ಹೆಸರು ಬಲಾ ಹ್ಯಾಗಿಧೆ.

ಶನಿಬಲವಿದೆ. ಗುರುಬಲವಿಲ್ಲವಲ್ಲಾ.

ಸರಿ. ಅದಕ್ಕೇ ನಾನೇನು ಮಾಡಿದರೂ ನಡೆಯುವುದಿಲ್ಲ. ನನ್ನ ಗ್ರಹಚಾರ ಕೆಟ್ಟದ್ದಾದರೆ ಸುತ್ಮಲ ಹಳ್ಳಿಯವರದೆಲ್ಲಾ ಕೆಟ್ಟದ್ದೆ ?

ಹಳ್ಳಿಯವರದೆಲ್ಲಾ ಗ್ರಹಚಾರ ಯಾಕೆ ವಿಚಾರಿಸುತ್ತಿ.

ನೋಡಿ ಅರವತ್ತು ವರ್ಷದಿಂದ ಮುಂದಗೆರೆ ಉತ್ತರ ನಾಲಾ ಬರಬೇಕೆಂತ ಸರಕಾರದವರನ್ನ ಕೇಳಿಕೊಳ್ಳುತ್ತಾ ಇವ್ನಿ. ಅದಕ್ಕೆ ಬಿಡಗಂಡಿ ಆಗಿದೆ. ಸರ್ವೆ ಆಗಿದೆ, ಕೆಲಸ ನಿಂತು ಹೋಗಿದೆ. ಸುಮಾರು ಇಪ್ಪತ್ತು ಮೂವತ್ತು ಹಳ್ಳಿ ಬೆಂಗಾಡು ಸುಂಟೀ ಕೊಪ್ಲಾಗಿದೆ. ಈ ನಾಲೆ ಬಂದ್ರೆ ಇವೆಲ್ಲಾ ಸ್ವಲ್ಪ ಉಳ್ಕೋತವೆ. ಇಲ್ದಿದ್ರೆ ವಸೊಸಿಯಾಗಿ ಎಲ್ಲಾ ಕಾಪೀತೋಟ ನೋಡ್ಬೇಕಾಯ್ತದೆ. ನಾನೇನಂದಾ ಅನ್ನಿ ಇಲ್ಲಿ ವಸಾಹತ್ತೇ ಕಮ್ಮಿಯಾಗ್ತದೆ.

ಅರ್ಜಿಗಳನ್ನು ಮೇಲಕ್ಕೆ ಬರೆಯಪ್ಪಾ, ನಾನೂ ದೇವರ ಪಾದಕ್ಕೆ ಹೂವು ಹಾಕುತ್ತೇನೆ.

ದಾಸೈಯ್ಯ—ಲೋ ರೋಗವಿಲ್ಲದೆ ನೆರಳೋನೆ ಹಬ್ಕೆ ಒಟ್ಟೇಯು ಉಬ್ಬೇಕಾಯ್ಸೋದಿಲ್ವೋ.

ಅಗಸ—ಲೋ ಬಾಲವಿಲ್ಲದೆ ಬಗ್ಳೋನೆ ಬಟ್ಟೇ ಒಕ್ಕೊಟ್ಟೇನು ಮನೆಕಡೆ ಹೊತ್ನಂತೆ ಬಾರ್ಲೋ.

ಏಸೈಯ್ಯ ಗೌಡ, ಕೊಟ್ಟ ದುಡ್ಡು ಹಿಂತಿರುಗಿ ಬರುವುದೇ ಕಷ್ಟವಾಗಿದೆಯಲ್ಲಾ.

ಗೌಡ—ನಮ್ಮ ಹಿಂದ್ಲೋರು ಏನು ಹೇಳ್ತಿದ್ರು ಅಂತೀರಿ. ಬಲಗೈಲಿ ಒಂದು ಹಿಡಿ ರೂಪಾಯಿ ಸಾಲಾ ಕೊಡಬೇಕಾದ್ರೆ ಎಡಗೈಲಿ ಒಂದು ಹಿಡಿ ರೂಪಾಯಿ ಹಿಡ್ಡಿದ್ರೇ ಕೊಡ್ಬೇಕು. ಅದ್ಯಾಕೆ—?

ಗೌಡ—ಆ ಒಂದು ಹಿಡಿ ರೂಪಾಯಿ ವಸೂಲ್ ಮಾಡೋಕೆ ಮಾಡೊ ಖರ್ಚು ಸ್ವಾಮಿ (ಕೋರ್ಟು ಕಛೇರಿಗೆ) ಸರಿಯಪ್ಪಾ ಸರಿ. ಒಳ್ಳೇ ಸಂಪ್ರದಾಯ ಹೇಳಿದೆ.

ಏನಯ್ಯಾ ಮುದುಕಾ ಬಂದುಬಿಟ್ಟೆ ?

ಬೇಜಾರಾಯ್ತಾಯ್ತು ಬುದ್ಧಿ, ಹಂಗೇ ನೋಡ್ಕೊಂಡೋಗಾನಾ ಅಂತ ಬಂದೆ. ಕೂತುಕೋ.

ಕೂತುಕೋ.

(ಒಂದು ಕ್ಷಣವಾದ ಮೇಲೆ ನಸ್ಯಾಹಾಕಿಕೊಂಡು)

ಊರಿಗೆಲ್ಲ ಯಜಮಾನನ್ಯಾರು ?

ನನಗೆ ಗೊತ್ತಿಲ್ಲ.

ಕೋಳಿ—ಹ್ಯಾಂಗೆ ಅಂತೀರಿ ಊರಿನೋರನ್ನೆಲ್ಲಾ—ಎಳಿ ಹೊತ್ತಾಯ್ತು ಮೂರು ಜಾವವಾಯಿತು. ರಾಗೀಬೀಸಿ ಭತ್ತಾಕುಟ್ಟಿ ಬೈಲುಮೇಲ್ಹೋಗಿ ಎಂದು ಎಳಿಸುತ್ತದೆ. ಅಂತಾ ಯಜಮಾನ ಯಾವ್ನೋನಿದ್ದಾನು.

ಒಂದು ಪಟ್ನ ಎಷ್ಟುಸೇರು ?

ಒಳ್ಳೊಳ್ಳೆ ಪ್ರಶ್ನೆ, ನಂಗೆ ಗೊತ್ತಿಲ್ಲಾ ಅಂತೀನಿ.

ಐದುಸೇರು—ಹ್ಯಾಗೆ ಅಂತೀರೊ ಕಲ್ಲು ಮಣ್ಣು ಮರ ನೀರು ಲೋಹ ಇವೈದು ಸೇರಿದರೆ ತಾನೆ ಮನೆ, ಮನೆ ಸೇರಿದರೆ ಪಟ್ನ.

ನಮ್ಮಕಾಲದ ಮಾತು ಹೇಳ್ತೀನಿ ಕೇಳಿ—

ಸಂದೇ ಬಿಸಿಲು—ಹೋಮದ ಹೊಗೆ. ರಾತ್ರಿವೇಳ್ಯ ಹಾಲನ್ನದ ಊಟ ಎಳೇಪ್ರಾಯದ ಹೆಂಡತಿ ತಿಳಿನೀರು ಎಡಮಗ್ಗಲಿಗೆ ಮಲಗೋದು ಇವೆಲ್ಲಾ ಆಯಸ್ಸು ವೃದ್ಧಿಗಾಗಿ.

ಬೆಳಗಿನ ಬಿಸಿಲು—ಹೆಣದ ಹೊಗೆ ಕೊಳೆತ ಹಳ್ಳದ ನೀರು ರಾತ್ರಿ ಮೊಸರುಭೋಜನ ಮುದಿ ಹೆಂಗಸಿನ ಸಹವಾಸ ಬಲಮಗ್ಗಲಿಗೆ ಮಲಗುವುದು ಇವೆಲ್ಲಾ ಆಯುಸ್ಸು ಕ್ಷೀಣಕ್ಕಾಗಿ, ಓಹೋ. ಓಹೋ.

ಹೆತ್ತಸೂತಕ ಹತ್ತು ದಿವಸ, ಸತ್ತಸೂತಕ ಹನ್ನೊಂದು ದಿವಸ, ಮತ್ತೆ ಋಣದ ಸೂತಕ ಸಾಯುವ ತನಕ. ಆಹಾ! ಆಹಾ! ಚಿನ್ನದ ಪೈರಾವುದು ಗೊತ್ತೋ. ಊಹು. ರೈತರು ಸ್ವಾಮಿ ರೈತರು. ಅದಿರಲಿ. ಸುಂಡನ್ಗೆ ಶೂಲದ ಕತ್ತಿ. ತೋಡಗ್ಗೆ ಬಿಲ್‌ಬಾಣ, ಮುಂದ್ಹೋಗೋ ಹೆಣ್ಣಾನ್ಗೆ ನಾಗಸ್ವರದ ಕೊಳಲು

ಯೋಗವೇ ಕೇಳಿರಣ್ಣ ಎಲ್ಲಾರೂ ಸೋಜಿಗವ ಕೇಳಿರಣ್ಣ | ಆರುಸುಂಡ ಕೂಯಲಿ ಮೂರು ಸುಂಡ ಒಕ್ಕಲಿ ಎಪ್ಪತ್ತೇಳ್ಸುಂಡಾ ಕೌದಿಕಟ್ಟೆ ಹೇರಲಿ ||

ಯೋಗವೇ ಕೇಳಿರಣ್ಣ............|| ಪ ||

ಎಪ್ಪತ್ತೇಳ್ಳುಂಡಾ ಕೌದೀಕಟ್ಟಿ ಹೇರಿದ್ಮೇಲೆ ಮುಂಡ್ಗೇಮೂಗ್ಗ ರಂಡ್ಗೇ ನಾಗ್ಗ | ಮುಂಡೆಕುಟ್ದ ಅಕ್ಕಿಮೊಸೆ ಮುರ್ಕ್ವಾಮೇಲೆ ದಂಡತಕ್ಕೋಳೀ ನನ್ಗಂ ಡ್ಮೀಶೆ ಸುಂಡಣ್ಣಾ || ಯೋಗವೇ || ಪ ||

ಇದರರ್ಥವೇನು ಯೋಚಿಸಿ ಸ್ವಲ್ಪ ಸಿದ್ಧೇ ಮಾಡುವೆನು. ಒಳ್ಳೇಮು ದ್ಕ

## ಮದುವೆಯ ಹಾಡಿಗಾಗಿ ಮೊದಲು ದೇವತಾಪ್ರಾರ್ಥನೆ

(ರಂ. ವು. ಹೆ. ಬೋರಮ್ಮ ಗೌಡತಿಯಿಂದ)

ಮದುವೆ ಎನ್ನೋದಾ ಯಾರಮ್ಮಾಮಾಡ್ಡೋರು ಭೂಲೋಕಾದಲ್ಲೀ ಬಸ ವೈಯ್ಯಾ | ಭೂಲೋಕಾದಲ್ಲೀ ಬಸವೈಯ್ಯಾ ಕ್ತೂಕೊಂಡು ದೇವೀದೇವಾರಾ ಒಳಗೊಂಡೂ | ದೇವೀದೇವಾರಾ ಒಳಗೊಂಡು ಬಸವೈಯ್ಯ ಭೂಲೋಕಾದಲ್ಲೀ ಮದುವೇಯಾ | ತಾಯಿಯಾನೆನೆದಾರೇ ಬೇಗಾನೇಪದಬರ್ಲಿ ತಾಯವ್ವೇಗಂಗೇ ದಡದಲ್ಲೀ | ತಾಯವ್ವೇ ಗಂಗೇದಡದಲ್ಲಿ ಸರಸತಿಯು ಕಾಯಾಕುಂಡ್ಹೋಗೀ ಕರದಲ್ಲೀ | ಅಕ್ಕಾನಾನೆನೆದಾರೇ-ಗಕ್ಕಾನೇಪದಬರ್ಲಿ ಅಕ್ಕವ್ವೇಗಂಗೇದಡದಲ್ಲಿ| ಅಕ್ಕವಳೇ ಗಂಗೇದಡದಲ್ಲಿ ಸರಸತಿಯು ಅಕ್ಕೀಹೂದವಳಾಕರತನ್ನೀ | ಹಳ್ಳಾಕೊ ಳ್ಳಾದಲ್ಲೀ ಮುಳ್ಳಾಜೀವನದಲ್ಲೀ ಒಳ್ಳ್ಯೋಳೇನಿನ್ನಾಹರಸೀದೇ | ಒಳ್ಳ್ಯೋಳೆನಿ ನ್ನಾ ಹರಸೀದೇಸರಸತಿಯೆ ಎಲ್ಲೀಹೋದಮ್ಮಾ ಪದಬರಲಿ | ಅಟ್ಟಾಬೆಟ್ಟಾದಲ್ಲಿ ಪುಟ್ಟಾಜೀವನದಲ್ಲೀ ಸೆಟ್ಯ್ಯೋಳೆ ನಿನ್ನಾಹರಸೀದೇ | ಸೆಟ್ಯ್ಯೋಳೆ ನಿನ್ನಾಹರಸೀದೇ ಸರಸತಿಯೆ ಎತ್ತಾಹೋದಮ್ಮಾ ಪದಬರ್ಲಿ | ತಾಯಿಯಾಸರಸಾತೀ ಬಾಗ್ಲಲ್ಲೀಯಾ ಕ್ಷಿಂದೆ ತೋರೇನೂ ಬಾರೇನಿನಗಿಂಬಾ | ತೋರೇನೂಬಾರೇ ನಿನಗಿಂಬಾಯಾ ರ್ಮ್ಮಾನೇ ಸಾಲೂಮಂಚಾವೇ ಒರಗಮ್ಮಾ | ಅಕ್ಕಾಸರಸತಿಯೇ ಹಟ್ಟೀಲ್ಯಾಕೇ ನಿಂತೆ ಕೊಟ್ಟೇನೂಬಾರೇನಿನಗಿಂಬಾ | ಕೊಟ್ಟೇನೂಬಾರೇ ನಿನಗಿಂಬಾಸರಸತಿಯೆ ಪಟ್ಟೇಮಂಚಾವೇ ವರಗಮ್ಮಾ | ಅಗ್ಗೀಬುಡದಡಿಯು ಸೊಗಸೂಮಾಡೋಹೆಣ್ಣೆ ಅವಸರದಲ್ಬಂದೇ ನನಬಾಳೀಗೆ | ಅವಸರದಲ್ಬಂದೇನಿನ್ಬಳಿಗೆ ಸರಸತಿಯೇ ಕೆಲ್ಸಾ ಬಿಟ್ಲಾಡಾಕಲಿಸಮ್ಮಾ | ನಗ್ಗಾಲಾಮರದಡಿಯೆ ನಿದ್ರೇಯಾಮಾಡ್ಹೋಗಿ ಎಗ್ಗಿ ಲ್ದೇಬಂದೇ ನಿನಬಳೀಗೇ | ಎಗ್ಗಿಲ್ದೇಬಂದೇ ನಿನಬಳಿಗೇ ಸರಸತಿಯೆ ಚಂದುಳ್ಳಿ ಹಾಡಾಕಲಿಸಮ್ಮಾ | ಉದ್ದೀನ್ಹೊಲದಲ್ಲಿ ದೊಡ್ಹೋಟ್ಟೇಬೆನವಣ್ಣಾ ಉದ್ದೀನುಂಡಿ ಲಿಗೇ ಎರೆದುಪ್ಪಾಕೊಡುವೇವೂ ಇದ್ದಟ್ಟುಮತಿಯಾ ಕೊಡುನಾಮಾಗೇ |

(ಬರಕೋಡೂ)

ಎಳ್ಳೀನ್ನೊ ಲದಲ್ಲೀ ಉಳ್ಳಾಡೋಬೆನವಣ್ಣಾ ಎಳ್ಳೀನುಂಡಲಿಗೇ ಎರೆದುಪ್ಪಾ|ಎಳ್ಳೀನುಂಡಲಿಗೇ ಎರೆದುಪ್ಪಾಕೊಡುವೇವು ಎಳ್ಳೋಟೂ ಮತಿಯಾ ಬರಕೋಡೂ | ಎಳ್ಳಾನ್ಕರೀಎಳ್ಳು ಎಳ್ಳಾನೇಬಿಳೀಎಳ್ಳು ಎಳ್ಳಾನೇತೊಳೆದಾ ತಿಳಿನೀರು | ಎಳ್ಳೂತೊಳೆದಾತಿಳೀನಿರಾಕುಡ್ಯೋಕ್ಬಂದೂ ಪಕ್ಷೀಹೇಳೀದೋ ಶಕುನಾವಾ | ಉದ್ದಿನ್ಕರೀಯುದ್ದು ಉದ್ದಿನ್ಬಿಳೀಯುದ್ದು ಉದ್ದಾನ್ನೆತೊಳೆದಾ ತಿಳಿನೀರೂ | ಉದ್ದಾನೇತೊಳೆದಾ ತಿಳಿನೀರ್ಕುಡ್ಯೋಕ್ಬಂದು ಹಲ್ಲೀಹೇಳೀತೂ ಶಕುನಾವಾ | ಶಕುನಾನಮುಗಾದೊ ಸಾಲಾವಳಿನಿಮುಗಾದೋ ನಾಳೀಯುಲಗ್ನಾನಮುಗಾದೋ | ಇಪ್ಪತ್ತವರ್ಷಾಕೇ ಹುಟ್ಟೀತು ಈಲಗ್ನ ತುಪ್ಪಾದಾಭಾವೀನಡುವನ್ನಿ | ತುಪ್ಪಾದಾಭಾವೀನಡುಮನ್ನಿ ತೋಡ್ಕೊಂಡು ಅವರಪ್ಪಾ ಮಾಡಾನೂ ಮದುವೇಯಾ | ನಲ್ವತ್ತವರ್ಷಾಕೇ ಹುಟ್ಟೀತು ಈಲಗ್ನ ಎಣ್ಣೀಭಾವೀಯಾ ನಡುಮನ್ನಿ | ಎಣ್ಣೆ ಭಾವೀಯಾ ನಡುಮನ್ನಿ ತೋಡ್ಕೊಂಡು ಅವರಣ್ಣಾ ಮಾಡಾನೂ ಮದುವೇಯಾ ||

## ಭತ್ತಾಕುಟ್ಟುವಹಾಡು

ಮೊದಲು ಪೂಜೇಗೇ ಏನೇನಾಗಾಬೇಕೂ-ದೇವಲೋಕಾದಾ ಕಣಗಾಲೇ | ದೇವಲೋಕಾದಾ ಕಣಗಲೆ ಕೊಂಡಾವಾವು- ಮೊದಾಲಾ ಪೂಜೇಗೇ ಬರಬೇಕು || ಹಟ್ಟೀ ಚಂದಾಗೀ ಹರ್ಗ್ಯಾರು ಭತ್ತಾವ-ಅಕ್ಕತಂಗೀರ ಹುದಗೀನ | ಅಕ್ಕಾತಂಗೀರ ಹುದಗೀನ ಭತ್ತಾಕೆ-ಮಾಯಾದಾ ಗುಂಚೀ ಕೌದಾವೋ || ಹಾದೀಚಂದಾಕೆ ಹರ್ವ್ಯಾರು ಭತ್ತಾವ-ತಾಯಿಮಕ್ಕಾಳಾ ಹುದಗೀನ | ತಾಯಿಮಕ್ಕಾಳಾ ಹುದಗೀನ ಭತ್ತಾಕೆ-ಮಾಯಾದ ಗುಂಚೀ ಕೌದಾವೋ ||

## ಅರಿಶಿನ ಹಚ್ಚುವಹಾಡು

ಹೂವ್ವೀನ ತೋಟದಲ್ಲಿ ಹುಟ್ಟೀತೊಂದರಸಾಣ-ಚನ್ನಾಗಿ ಕೌದೀ ಬಿಗಿಸ್ಯಾರೆ | ಚನ್ನಾಗಿ ಕೌದೀ ಬಿಗಿಸ್ಯಾರು ಅರಸಣವ ಮುತ್ತಿನ ಗುದ್ಲಿಲ್ಲೀ ಅಗೆಸ್ಯಾರೋ || ಮುತ್ತಿನ ಗುದ್ಲಿಲ್ಲಿ ಅಗೆಸ್ಯಾರು ಅರಸಣವ ಬೆಳ್ಳೀ ಮಂಕ್ರೀಗೇ ಬವರ್ಸ್ಯಾರು | ಬೆಳ್ಳೀ ಮಂಕ್ರೀಗೇ ಬವರ್ಸ್ಯಾರು ಅರಸಣವ-ತುಂಡುತುಂಡಾಗೀ ಕಡಿಸ್ಯಾರು || ತುಂಡುತುಂಡಾಗೀ ಕಡಿಸ್ಯಾರೊಂದರಸಣವ-ಗಂದಿಗರಂಗ್ಡೀಗೇ ಕೆಡ್ವ್ಯಾರೋ | ಗಂದಿಗರಂಗ್ಡೀಲೀ ಕೆಡವಿರುವ ಅರಸಣವ-ನಾರೀರೂ ಹೋಗೀ ಬೆಲೆಮಾಡಿ || ನಾರೀರೂ ಹೋಗೀ ಬೆಲೆಮಾಡಿ ತಂದಾರು-ಒರಳಲ್ಲಿ ಹಾಕೀ ತಿರು

ವ್ಯಾರು | ಕಲ್ಲೊರಳಲ್ಲಿ ಹಾಕೀ ತಿರ್ರಾವ್ಯರು ಅರಸಣವ-ಕೊಪ್ಪರ್ಕಿಲ್ಲಾಕೀ ಕುದಿಸ್ಯಾರು | ಕೊಪ್ಪರ್ಕೀಲ್ಲಾಕೀ ಕುದಿಸ್ಯಾರು ಅರಸಣವ-ಮಾಳೀಗೇ ಮೇಲೇ ಹರಗ್ಯಾರೋ | ಮಾಳೀಗೇ ಮೇಲೇ ಹರಗೀದರಸಣತಂದು-ಕಂದಾನಾ ಮೈಗೆ ತೊಡೆದಾರು || ಕಂದಾನಾ ಮೈಗೆ ಏನೆಂದು ತೊಡೆದಾರು-ಶಾಪಾದ ಕಂದಾ ಸುಖಬಾಳೂ ||

## ಎಣ್ಣೀನೀರು ಹಾಕುವಹಾಡು

ಎಣ್ಣೀ ಶೀಗೇಕಾಯಿ ಸನ್ನೀನಾಡುತ ಬಂದೊ-ಇನ್ನೂ ಮಲಗ್ಯಾವ್ನೀ ಮದುವಣ್ಣಾ | ಇನ್ನೂ ಮಲಗವ್ನೆ ಮದುವಣ್ಣ ಎದೆಮೇಲೆ-ಸನ್ನೀ ನಾಡಾವೇ ಉಗುರೆಣ್ಣೆ || ಉಗುರೆಣ್ಣೆ ಹೋಗೀ ಗಗನಾಕೆ-ಶೀರ್ರ್ಯಾವು ಮಗನಾ ಮಂಡೇಲೀ ಒರೆಗ್ಯಾವೋ | ಅರಶಿನ ಸೀಗೇಕಾಯಿ ಸನ್ನೀ ನಾಡುತ ಬಂದೊ ಇನ್ನೂ ಮಲಗವ್ನೆ ಮದುವಣ್ಣ | ಉಗುರೆಣ್ಣೆ ಒಂದೂ ಬತ್ತೀಲಿ ಒದಗ್ಯಾವೇ-ಮರೆತೂ ಮಲಗ್ಯಾವ್ನೀ ಮದುವಣ್ಣ |

ಎಣ್ಣೆ ಒತ್ತೋರೆ ಕನ್ನೇರ್ನಿಮ್ಮ ಕೈಬೆರಳುಚನ್ನೀಗಾರಾಯಾರಾ ಎಲೆತೋಟ | ಚನ್ನಿಗಾರಾಯಾರಾ ಎಲೆದೋಟಾದೊಳಗಿರುವ-ಸೊನ್ನರದನವ್ನೂ ಕುಣಿದಾವೋ | ಅರಶಾಣೊತ್ತೋರೆ ಅರಸೇ ನಿಮ್ಮ ಕೈಬೆರಳು-ಅಳಸಿಂಗ್ರಾಯಾರಾ ಕೈದೋಟ | ಅರಸಿಂಗ್ರಾಯಾರಾ ಕೈದೋಟಾದೊಳಗಿರುವ-ಸರಸಾದಾ ನವ್ಲೂ ಕುಣಿದಾವೋ | ಕರೀ ಎಳ್ಳೀನೆಣ್ಣೆ ದುರುಗದ ಸೀಗೇಕಾಯಿ-ದೊರೆಗೋಳ ಸಂಗಾಡಾ ಮದುವ್ಯಣ್ಣ | ದೊರೆಗೋಳ ಸಂಗಡ ಮದ್ವ್ಯಣ್ಣ ಮಿಾದ್ನೀರು-ದುರ್ಗಾಕೆ ಕೋಡೀ ಹರಿದಾವೋ | ಅಚ್ಚೆಳ್ಳೀನೆಣ್ಣೆ ಗಟ್ಟದ ಸೀಗೇಕಾಯಿ-ಸೆಟ್ಟಿಗೋಳ ಸಂಗಾಡ ಮದ್ವ್ಯಣ್ಣ | ಸೇಟ್ಗೋಳ ಸಂಗಡ ಮದ್ವ್ಯಣ್ಣ ಮಿಾದ್ನೀರು-ಗಟ್ಟಾಕೆ ಕೋಡೀ ಹರಿದಾವೋ |

ಆಲಾದಾ ಮಣೆಬಂದೋ ಹೂವ್ವೀನ ಚೌರೀ ಬಂದೋ-ಹೆತ್ತವ್ಮ ನೀರಾ ಹದಮಾಡೀ | ಹೆತ್ತವ್ಮ ನೀರಾ ಹದಮಾಡ್ಯೇನೆಂದಾಳು-ಮುತ್ತೀನ್ಸಚ್ಲೀಗೇ ನಡಿಯಮ್ಮಾ | ಅತ್ತೀಮಣೇ ಬಂದೋ ಮುತ್ತಿನ ಚೌರೀಬಂದೋ-ಹಡೆದವ್ಮ ನೀರಾ ಹದಮಾಡೀ | ಹಡದವ್ಮಾ ನೀರಾ ಹದಮಾಡಿ ಏನಂದಾಳೂ-ಮುತ್ತಿನ ಬಚ್ಚಲಿಗೇ ನಡೆಯುಮ್ಮಾ | ನೀರಿಲ್ಲದ ತಾವು ನೀರ್ಯಾಕೆ ನಿಂದೂದು-ಊರೀಗೇ ದೊಡ್ಡವರ ಮಗಳಾದ | ಊರೀಗೇ ದೊಡ್ಡವರಾ ಮಗಳಾದಾ ತಾವ್ನೊಳಗೇ-ಬಾಳೇಮರ

ಅರಳೀ ಫಲವಾದೋ | ಹೆಸರಿಲ್ಲದ ತಾವು ಕೆಸರ್‍ಯಾಕೆ ನಿಂತಾದು ಹೆಸರೀಗೇ ದೊಡ್ಡ ವರಾ ಮಗಮಿಾದಾ | ಹೆಸರೀಗೇ ದೊಡ್ಡವರಾ ಮಗಮಿಾತ್ತಾವೀನಲ್ಲಿ ಹಸರು ಸಂಪೀಗೇ ಸುಳಿ ಒಡೇದೋ | ಹಸರೂ ಸಂಪೀಗೇ ಮರದಡಿಯೆ (ಲ್ದೋರೇಮಗ) ಮಿಾದಾನು ಬಾಳೇ ವಾಲಾಡೀ ಫಲವಾದೋ ||

## ಬಳೇ ತೊಡಿಸುವಹಾಡು

ಬಳೆಯಾ ತೊಡೂವಾಗ ಬಳಗಾಕ್ಕೆ ಹೆಚ್ಚಾಳಾ ಬಳೆಯಾ ತೊಟ್ಟೀಣ್ಣಾ ಒಳಗೊಂಡು ! ಬಳೆಯಾತೊಟ್ಟೀಣ್ಣಾ ಒಳಗೊಂಡುಹೋಗ್ವಾಗ ಅವರ ಬಳ್ಗಾಕ್ಕೆ ದುಃಖಾ ಎರಗ್ಯಾದೋ | ಬಳೆಯಾತೊಡೂವಾಗ ಅವರ ತಾಯಮ್ಮೆಗ್ಗೆ ಹೆಚ್ಚಾಳ ಬಳೆಯಾತೊಟ್ಟೀಣ್ಣಾ ಒಳಗೊಂಡು | ಬಳೆಯಾ ತೊಟ್ಟೀಣ್ಣಾ ಒಳಗೊಂಡುಹೋಗ್ವಾಗ ಅವರ ತಾಯಮ್ಮೆಗ್ಗೆ ದುಃಖಾ ಎರಗ್ಯಾದೋ ಅವರಾ ಅಣ್ಣೈಯ್ಯೆಗ್ಗೇ ದುಃಖಾ ಎರಗ್ಯಾದೋ |

ಬಳೆಗಾರಸೆಟ್ಟೀ ಬಂದಾನು ಅವರಮನೆಗೆ ಅರಿಸೀನ ಕುಂಕೂಮಾ ಮುಯಿ ಕೊಟ್ಟು | ಗೊನೆಯಾ ಬಾಳೇಹಣ್ಣು ಎಳೆಯಾ ತೆಂಗಿನಕಾಯಿ ಗಂಧಾ ಅಕ್ಷತೆಯಾ ಪೂಜೇಯಾ ಮಾಡೀ | ಗಂಧಾ ಅಕ್ಷತೆಯಾ ಪೂಜೇಯಾ ಮಾಡೀ ಮುತ್ತೀನಾ ಒಳೆಯಾ ಪೂಜೇ ಮಾಡ್ಯಾಬಾಲೆ ಮಾಲಾತ್ಕಿ (ಬಳೆಯರಾಶಿ) ಕೈಯ್ಯಾ ನೀಡ್ಯಾಳೊ |

ಮುತ್ತೈದ್ಪಟ್ಟೀಮುಂದೆ ಮುತ್ತಿನ ಚಪ್ಪರಹೂಡಿ ಸುತ್ತೀಬಾರ್‍ಯೈಯ್ಯಾ ಬಳೆಗಾರಾ | ಸುತ್ತೀಬಾರ್‍ಯೈಯ್ಯಾ ಬಳೆಗಾರ್‍ನಮ್ಮಟ್ಟೀಲಿ ಮುತ್ತೈದೇ ಬಳೆಯಾ ತೊಡುತಾಳೇ | ಅಚ್ಚಾ ಮುತ್ತೈದೇ ಕಂದಮ್ಮ ನಿನಕೈಲಿ ನಿಚ್ಚ ಚಂದಾದೋ ಹೊಸಬಾಳೇ | ಬಾಣಂತಿ ತಂಗ್ಯಮ್ಮ ಬಾಳೇಲೇಲಟ್ಟುಣ್ಣೆ, ಬಾಗೀ ಬಾರ್‍ಯೈಯ್ಯಾ ಒಳೆಗಾರ | ಬಾಗೀ ಬಾರ್‍ಯೈಯ್ಯಾ ಬಳೆಗಾರ್‍ನಮ್ಮಟ್ಟೀಲಿ ಬಾಣಂತೀ ಬಳೆಯಾ ತೊಡುತಾಳೇ | ಊರಿಗೆ ಬಳೆ ಬಂದೊ ಹೂಡಮ್ಮ ಜೋಽತೀಯ, ಎತ್ತೀನಾ ಕೊಂಬಲ್ಲೀ ಶಿವದೇವೀ ||

## ಗಂಡು ಒರುವಾಗ ಹೇಳುವಹಾಡು

ಒಂಟೀಮೇಲ್ಬರುವ ಬಂಟಾನಾ ನೋಡೀರೀ, ಎಂಟಾಳೀಗಿಂತಾ ಚಲು ವಾನಾ | ಎಂಟಾಳೀಗಿಂತಾ ಚಲುವಾ ಘುದುವಣ್ಣಾನಾ, ಸೊಂಟಾನೋಡ್ಲೇಣ್ಣಾ

ಕೊಡಿರಮ್ಮಾ | ಆನೇಮೇಲ್ಬರುವ್ರೋ ಅರಸಾನಾ ನೋಡೀರೀ ಆರಾಳಿಗಿಂತಾ ಚಲುವಾನಾ | ಆರಾಳಿಗಿಂತಾ ಚಲುವಾ ಮದುವಣ್ಣಾನಾ ತೋಳಾನೋಡ್ಣಿಣ್ಣಾ ಕೊಡಿರಮ್ಮಾ | ಶೆಟ್ಟೀಗೋಳಾ, ಕುದ್ರೇ ಹೋಗೀ, ಮುತ್ತೀನಾ ತೋಟಾವಾ ನುಗ್ಗೀ, ಮುತ್ತೆಲ್ಲಾ ನುಗ್ಗೀ ನುರಿಯಾದೋ | ಮುತ್ತೆಲ್ಲಾ ನುಗ್ಗೀ ನುರ್ಯಾದೋ ನನ್ನೂರ, ಶೆಟ್ಗೋಳ್ದೊರ್ಡೂವಾ ರಭಸೀಗೇ | ರಾಯ್ಗೋಳ್ಕುದ್ರೇಹೋಗೀ ಹೂವ್ವಿನ್ತೋಟವಾನುಗ್ಗೀ, ಹೂವ್ವೆಲ್ಲಾ ನುಚ್ಚುನುರಿಯಾದೋ ಹೂವ್ವೆಲ್ಲಾ ನುಚ್ಚುನುರಿಯಾದೋ ನನ್ನೂರ ರಾಯಾರೊದ್ರಟಾವ್ರೇ ಮದುವೀಗೇ | ದೊಡ್ಡಾದೊಡ್ಡೇರೇ ದೊಡ್ಡಾಮಗ್ಗೀನೋರೇ ದೊಡ್ಡಾ ಬೀದೀಲೀ ತೆರೆ ಹೋದೋ | ದೊಡ್ಡಾ ಬೀದೀಲೀ ತೆರೆಹೂಡಗ್ದಾರ್ದ್ಡಿ ದೊಡ್ಡೋರಾ ಮದುವೇ ಬರುತಾದೇ | ಚಿಕ್ಕೋರ ಮದುವೇ ಬರುತಾದೆ |

ರಾಯ್ಗೋಳ್ಗವಾತಾರ ರಾಯ್ಗೋಳ್ಗಿ ಇವುತಾರ, ರಾಯ್ಗೋಳ್ಗಿ ಹೊನ್ನಿನಾಶಿವದಾರಾ | ರಾಯ್ಗೋಳ್ಗಿ ಹೊನ್ನೀನಾಶಿವದಾರ ನನ್ನೂರ ರಾಯ್ಗೋಳ್ದೊಂಟವ್ರೇ ಮದುವೀಗೇ | ಶೆಟ್ಗೋಳ್ಗಿ ಹೊನ್ನಿನಾ ಶಿವದಾರಾ | ಶೆಟ್ಗೋಳ್ದೊಂಟವ್ರೇ ಮದುವೀಗೇ |

ಶೆಟ್ಗೋಳ್ದೋಗೂವಾಗ ಹಟ್ಟೀದಾನ್ಬ್ಯಾದ್ರ್ಯಾವು ಹಟ್ಟೀ ಹರಿವಾಣಾಗಲಿರೆಂದೋ | ಹಟ್ಟೀ ಹರಿವಾಣಾಗಲಿರೆಂದೊ ನಮ್ಮೂರ ಶೆಟ್ಗೋಳೂ ವೀಳ್ಯಾಕೆ ಹೋಗ್ವಾಗಾ | ರಾಯ್ಗೋಳ್ದೋಗ್ವಾಗಾ ಹಾದೀದನ್ಬ್ಯಾದ್ರ್ಯಾವು ಗಾಲೀ ಹರಿವಾಣಾಗಲಿರೆಂದೊ | ಗಾಲೀ ಹರಿವಾಣಾಗಲಿರೆಂದೊ ನನ್ನೂರ ರಾಯ್ಗೋಳ್ವೀಳ್ಯಾಕೇ ಹೊರಟಾಗಾ ||

## ವಸ್ತ್ರಗಾರ ಪೆಟ್ಟಿಗೇ ತರುವಾಗ ಹೇಳುವಹಾಡು

ವಾಲೇ ತಂದೀವೀ ವಾಲೇಯಾ ನೋಡ್ಕೊಳ್ಳಿ ವಾಲೇಯಾ ಮೇಲೇ ಬರ್ಕೋಳ್ಳೀ | ವಾಲೇಯಾ ಮೇಲೇ ಬರ್ಕ್ಕೋಳ್ಯಾ ವಾಲೇಯಾ, ವಸ್ತ್ರಾಗ್ರಪ್ಪೆಟ್ಗೀಲೀ ಇರ್ಸೀವೀ | ಬುಗ್ಡೀ ತಂದೀವೀ ಬುಗ್ಡೀಯಾ ನೋಡ್ಕೊಳ್ಳೀ ಬುಗ್ಡೀಯಾ ಮೇಲೇ ಬರ್ಕೊಳ್ಳೀ | ಬುಗ್ಡೀಯಾ ಮೇಲೇ ಬರ್ಕೊಳ್ಳೀ ಈ ಮನೆಯ ವಸ್ತ್ರಾಗ್ರಪ್ಪೆಟ್ಗೀಲೀ ಇರ್ಸೀವಿ | ಗುಂಡೂ ತಂದೀವೀ ತಾಲೀಯಾ ತಂದೀವೀ ತಾಲೀಯಾ ಮೇಲೇ ಬರ್ಕ್ಕೋಳ್ಳೀ ತಾಲೀಯಾ ಮೇಲೇ ಬರ್ಕ್ಕೋಳ್ಳೀ ನಿಮ್ಮಾನೇ ಪಾಲೀಗೇ ನೀವೂ ಇಟ್ಗೋಳ್ಳೀ ||

# ಹಸೆಯನಿಕ್ಕುವ ಹಾಡು

ಹೆಣ್ಣುಚಿಕ್ಕವ್ವಾ ಹೆಣ್ಣೋರದೊಡ್ಡವ್ವ ಸಣ್ಣಕ್ಕೀಹಂಗೇ ಅವರವ್ವ | ಸಣ್ಣಕ್ಕೀಹಂಗೇ ಆವರವ್ವಕೂತ್ಗೊಂಡು ಚನ್ನಾಗೀ ಬರಿಯೆಂದಾಳ್ಹಸೆಗೋಳಾ | ಗಂಡೋರಚಿಕ್ಕವ್ವ ಗಂಡೋರ ದೊಡ್ಡವ್ವ ದಪ್ಪಕ್ಕೀಹಂಗೇ ಅವರವ್ವಾ | ದಪ್ಪಕ್ಕಿಹಂಗೇ ಅವರವ್ವಕೂತ್ಗೊಂಡೂ ಚನ್ನಾಗೀ ಬರೀರೆಂದಾಳ್ಹಸೆಗೋಳಾ | ಹಸೆಯಾಬರ್ಯೋರೀಮನ್ನಿ ಕಸವಿಲ್ಲ ಮುಸರಿಲ್ಲ ಹಸಿಯುಡಿಕೆ ಸಿಪ್ಪೇ ಮೊದಲಿಲ್ಲ | ಹಸಿಯುಡಿಕೆಸಿಪ್ಪೇ ಮೊದಲಿಲ್ಲಾದಾಮಲ್ಲೆ ಚನ್ನಾಗೀ ಬರಿಯೆಂದಾಳ್ಹಸೆಗೋಳಾ | ಹಣ್ಣಡಕೇಸಿಪ್ಪೇ ಮೊದಲಿಲ್ಲಾ ಆಮನ್ನಿ ಹಸೆಗೋಳಾ ಚನ್ನಾಗೀ ಬರಿಯೆಂದಾಳೂ | ಹಸೆಯಾಬರಿಯೋರೂ ಕುಸಲೀಸೀ ಬರಿರಮ್ಮಾ ಸಣ್ಣಾಮುತ್ತೀನಾ ತಳಿಕೋಡೀರಮ್ಮಾ | ಸಣ್ಣಾಮುತ್ತೀನಾತಳಿಕೊಡೀರೀಮನೆಯಾ ಸಿಸುವಾಕುಳ್ಳಿರುವಾ ಜಗಲೀಗೇ | ಬಾಲಾಕಂಡಿರುವಾ ಜಗಲೀಗೇ || ಸಣ್ಣಕ್ಕಿಹಸೆಯಾ ಚನ್ನಾಗೀ ಬರೀರಮ್ಮಾ ಚಿನ್ನಾದಾಗೊಂಡೇಯಾ ನೆರಿಗ್ಯೋರೂ | ವಜುರದ ಗೊಂಡೇಯಾ ನೆರಿಗ್ಯೋರೂ | ಚಿನ್ನಾದಾಗೊಂಡೇಯಾ ನೆರೆಗ್ಯೊಳೆ ಸರಸತಿಯೆ ಚನ್ನಾಗೀತುಂಬೇ ಚೌಕಾವಾ | ಚೌಕಾತುಂಬ್ಯಾರೇ ಕಲಕಲನೆಸಕ್ಕಾರೆ ಅದ್ಕೇ ಹೊಸಮುತ್ತ್ಯಾಬೆರ್ಸ್ಯಾರೆ | ಅದ್ಕೇ ಹೊಸ್ಮುತ್ತ್ಯಾ ಏಸೆಂದೂ ಬೆರ್ಸ್ಯಾಳೇ ಮಾವಾನಾ ಮಾಗಾ ಬರಲೆಂದೂ | ಮಾವಾನಾಮಾಗಾ ಬರಬೇಕಾವನಾಕ್ಕೈಯ್ಯಾ ಹೂವೀನುಂಗುರ ವಾಗೆಲಬೇಕೂ | ದೊಡ್ಡಕ್ಕೀಹಸೆಯಾ ಒಡ್ಡಾಗೀಬರೀರಮ್ಮಾ ವಜ್ರದ್ಗೊಂಡೇಯಾ ನೆರಿಗ್ಯೋರೂ | ವಜ್ರದ್ಗೊಂಡೇಯಾ ನೆರಿಗೇಯು ಸರಸತಿಯೇ ಒಡ್ಡಾಗಿತುಂಬೇ ಚೌಕಾವಾ | ಒಡ್ಡಾಗೀತುಂಬೀ ಕಲಕಲನೆ ನಾಗೂತಾ ಅದ್ಕೇ ಹೊಸಮುತ್ತ್ಯಾ ಬೆರ್ಸ್ಯಾಳೂ | ಅದ್ಕೇ ಹೊಸ್ಮುತ್ತ್ಯಾ ಬೆರ್ಸೊತೇನೆಂದಾಳೂ ಅತ್ತೇಯಮಾಗಾ ಬರಲೆಂದೂ | ಅತ್ತೇಯಾಮಾಗಾ ಬಂದಾರಾವನಾಕ್ಕೈಯ್ಯಾ ಮುತ್ತೀನುಂಗರ ವಾಗೆಲಬೇಕು | ಬಾಗಿಲಿಗಿದರಾಗೀ ಬರೀರಮ್ಮಹಸೆಗೋಳಾ ಬಾಗೀಲಲ್ಲಾವೇ ಗಿಣಿಗೋಳೂ | ಬಾಗೀಲಲ್ಲಾವೇ ಗಿಳಿಗೋಳೂ ನಮ್ಮಾನೇ ಭಾಗ್ಯಾದಾನುಡಿಯಾನುಡಿದಾವೂ | ಕಂಫಕ್ಕಿದಿರಾಗೀ ತುಂಬೀರೀಹಸೆಗೋಳಾ ಕಂಭಾದಲ್ಲಾವೇ ಅರಗೀಣೀ | ಕಂಭಾದಲ್ಲಾವೇ ಅರಗೀಣೀಸಮ್ಮಸೆಯ ಪುಣ್ಯಾದಾನುಡಿಯಾನುಡಿದಾವೂ ||

## ಮಣೀ ಹಾಕುವಾಗ ಹೇಳುವ ಹಾಡು

ಆಲಾದಮಣೆಗೆ‌್ಹೋಳೀ ಆರೇಳು ದಿನವಾಯ್ತ್ತು ಆಲಾದಾಮಾಣೀ ಬರಲಿಲ್ಲಾ | ಆಲಾದಾಮಾಣೀ ಬರಲಿಲ್ಲ ಬಡಗೀಮಾನೆ ಎತ್ತ್ಬಿಟ್ಟೆಮ್ಮೀ ಹೊಡತನ್ನೀ | ಎಮ್ಮೀಹೊಡ್ಯೋಕೇ ತಪ್ಪೇನು ತ್ಯಾಗೇನು ಚಿತ್ರಾತುಂಬೋಕೇ ಬೆಳಗಾದೋ | ಅತ್ತೀಮಣೀಗ್ಹೋಳಿ ಹತ್ತೆಂಟು ದಿನವಾಯ್ತು ಅತ್ತೀಯಾಮಾಣೀಬರಲಿಲ್ಲಾ | ಅತ್ತೀಯಾಮಾಣೀ ಬರಲಿಲ್ಬಡಗೀಮಾನೆ ಹಸ್ವಾಬಿಟ್ಕರ್ವಾಹೊಡತನ್ನೀ | ಹಸ್ವಾಬಿಟ್ಕರುವಾ ಹೊಡ್ಯೋಕೆ ತ್ಯಾಗೇನು ಚಿತ್ರಾಕೆತ್ತೋಕೇ ಬೆಳಗಾದೋ ||

## ಗಂಡು ಹಸೇಮಣೆಗೆ ಬರುವಾಗ ಹೇಳುವುದು

ಮಣೆಯಾಹತ್ತೋವಾಗ ಮನ್ಯೋರಾನೆನಕೊಂಡ ಮನ್ಯೋರಪಾದಾ ಗತಿಯೆಂದೂ | ಮನ್ಯೋರಾ ಪಾದಾಗತಿಯೆಂದೂ ಗೌಡಾನಾ (ರಾಮಾನಾ) ಶಿಶುವೇಬಾರ್ಹಸೆಯಾ ಜಗುಲೀಗೇ | ಹಸೆಯಾಹತ್ತೋವಾಗಾ ಋಷಿಗೋಳಾ ನೆನಕೊಂಡ ಋಷಿಗೋಳಾ ಪಾದಾಗತಿಯೆಂದೂ | ಋಷಿಗೋಳ್ಪಾದಾವೂ ಗತಿಯೆಂದು ರಾಮಾನಾ ಶಿಶುವೇ ಬಾರ್ಹಸೆಯಾ ಜಗುಲೀಗೇ ||

## ಗಂಡು ಹೆಣ್ಣು ಮೊಕ ನೋಡುವ ಹಾಡು

ಹಟ್ಟೀಕಲ್ಲೂದಾಟೀ ಹರಿಯಾಸಮುದ್ರಾದಾಟಿ ಮತ್ತೆಜಾನಾಕೀಮನೆದಾಟೀ | ಮತ್ತೀಜಾನಾಕೀ ಮನೆದಾಟೀಬಂದಿವ್ನೀ ಅತ್ತೀಮಾಗಾಳೇ ಮೊಕತೋರೇ | ಅತ್ತೀಯಾಮಗಳೇ ಮೊಕತೋರೇ ನಿನ್ನಿಂದ ತಾಯಿಮಕ್ಕಾಳಾತೊರೆದೀವ್ನಿ | ಹಾದೀಕಲ್ಲೂದಾಟೀ ಹತ್ತೂಸಮುದ್ರಾದಾಟಿ ಮತ್ತೀ ಜಾನಾಕೀಮನೆದಾಟೀ | ಮತ್ತೀಜಾನಾಕೀಮನೆದಾಟೀ ಬಂದಿವ್ನಿ ಮಾವಾನಾಮಗನೇ ಮೊಕತೋರೋ | ಮಾವಾನಾಮಗನೇ ಮೊಕತೋರೊ ನಿನ್ನಿಂದ ತಾಯಿತಂದೇಯಾ ತೊರೆದಿವ್ನಿ ||

## ದಾರೇಹೊಯ್ಯುವಾಗ ಹೇಳುವ ಹಾಡು

ಯದುಗೀರೀಪರ್ವಾತಾಯತ್ಲಾಗೀ ಇದ್ದೀತು ಪುತ್ರಾಮಲ್ಲೈನಾಮದು ಏಗೇ | ಪುತ್ರಾಮಲ್ಲೈನಾಮದುವೀಗೇ ಸುತ್ತಾಲೂ ಜಂಗಮರೂ ಬಂದೂತಳ್ಯಾರೋ | ಯದುಗೀರೀಪರ್ವಾತಾ ಹಾಗ್ಹ್ಯಾಗೆ ಇದ್ದೀತೂ ಶೀಮೋ ಜಂಗ

ಮರೂತಳಗ್ಯಾವ್ರೆ | ಶೀಮೇ ಜಂಗಮರೂ ತಳಗ್ಯಾವ್ರೆ ಬೆಟ್ಟದಪುರದ ಭೋಗೀ ಮಲ್ಲೈನಾ ಮದುವೀಗೇ | ಮೂಡಾಲಾಸೀಮಿಂದ ಮುತ್ತೀನೈರಣೆಬಂದೋ ಕೆತ್ತೀದಾಬಾಸಿಂಗಾ ಸಹಿವಾಗೀ | ಕೆತ್ತಿದಬಾಸಿಂಗಾ ಸಹಿವಾಗಿ ಬೆಟ್ಟಾದ್ಪುರದ ಭೋಗೀಮಲ್ಲೈನಾ ಮದುವೀಗೇ | ತೆಂಕಾಲಾಸೀಮಿಂದ ತೆಂಗೀನೈರಣೆ ಬಂದೊ ತೋ(ಹೆ)ರಾದ ಬಾಸಿಂಗ ಸಹಿವಾಗೀ | ಹೆ............................ಗೇ |
ಹಸುಮಕ್ಳು ಹಿಂದಾಗಿ ಸುಸುಮಕ್ಳು ಮುಂದಾಗಿ ಬಸವಣ್ಣ ಮಡದೀ ಸಹಿವಾಗೀ |
ಬಸವಣ್ಣ ಮಡದೀ ಸಹಿವಾಗ್ಬೆಟ್ಟಾದ್ಪುರದ ಭೋಗೀಮಲ್ಲೈಯ್ಯನಾಮದುವೀಗೆ |
ಮೊಮ್ಮಕ್ಳುಮುಂದಾಗಿ ಮುಮ್ಮಕ್ಳುಹಿಂದಾಗಿ ಈರಣ್ಣನ ಮಡದೀ ಸಹಿವಾಗೀ |
ಈ.................................................................................... ಗೇ |
............................ ಪುತ್ರಾಮಲ್ಲೈಯ್ಯನಾ ಕೈಗೇ ದಾರೇ ?
ಪಟ್ಟೇಸೀರೇನುಟ್ಟು ಕುದುನೀಕುಪ್ಪುಸತೊಟ್ಟು ಪಟ್ಟೊ ರಾಮರಾ ಮಡದೀ ಸೀತಮ್ಮ ತಾಯಿಗಾಗೇ | ಹಣ್ಣೂಕಾಯಿಗಾ ಮಡಲಾತುಂಬೀ ಸೀತಾದೇವೀಗೇ | ಜಾನಕಿ ತಾಯಿಗಾಗೇ | ಪಾರ್ವತ್ಯಮ್ಮಾಗೇ ||

## ಚೆಂಡಾಡುವ ಹಾಡು

ರಾಯರಮಾನೇಯಾ ಪಟ್ಟೇಮಂಚದ ಮೇಲೇ ಚಲುವೈಯ್ಯ ಚಂಡಾಮರೆತಾನೂ | ಚಲುವೈಯ್ಯ ಚಂಡಾಮರೆತೂ ಏನಂದಾನೂ ವರನಂದೀ ಚಂಡಾ ಕೊಡುಬಾರೇ | ಚಂಡಾಕಂಡಿದ್ರೇ ತಾಯಾಣೆ ತಂದ್ಯಾಣೆ ಜಂಗೂಮರಾಣೇ ಜನರಾಣೇ | ಜಂಗೂಮರಾಣೇ ಜನರಾಣಾಡೀಬರುವ ಸೂರೀಂದ್ರಾನಾಣೇ ಚಂಡ್ಕಾಣೇ ||

## ಆರತಿ ಎತ್ತುವಾಗ ಹೇಳುವಹಾಡು

ಆರತಿ ಎತ್ತೀರೇಸೇರಿ ವದನೀನಲ್ಲಾಗೇ ಫುಲ್ಲಾಪುತ್ರಾಗೇ ಪಲ್ಲಾವಾನೀಗೇ ಎಲ್ಲಾ ಜಾಜೀಹೂವೀನ ವದನಾನೀಗೇ || ಹರಡೇಕಂಕಣ ಕಮಲಾದೇವೀ ಒಂಕೀ ಬಾಪೂರೀ ನಿಟ್ಟೀನೊಳಗೇ ಕುಪುಸಾವೂ | ಚಿನ್ನಾದಾಬಟ್ಟಲಿಗೇ ಶಾಲ್ಯಾದಕ್ಕೀ ಇರಿಸಿ ಮೇಲೆರುಕ್ಮಿಣಿ ದೇವೀಯಾಕುಂಡಿರಿಸೀ | ಬಾಲಾಕೃಷ್ಣನ ಮಗನಾ ಬಲದಲ್ಲಿ ಇರಿಸೀ ಬಾಳೇಯಾ ಫಲಮಾಡೀ ಜಯಮಂಗಾಳಂ || ಮಂಗಳಂ ಗಣನಾದ್ರಿಮಂಗಳಂ ಮಾರ್ಬಲಗೆ ಮಂಗಳಂ ಈರ್ಭದ್ರಸಾವಿಗಾಗೇ | ಮಂಗಳಂ ಭೂಮಂಟಿ ಹನುಮಂತರಾಯಗಾಗೆ ನಿತ್ಯಮಂಗಾಳಂ ನಿತ್ಯಶುಭಮಂಗಾಳಂ ||

(ಈ ಹಾಡು ಸ್ವಲ್ಪ ಬುದ್ಧಿ ವಿಕಲ್ಪವುಳ್ಳ ಹೆಂಗಸು ಹೇಳಿದ್ದರಿಂದ ಪ್ರಾಸಗಳು ಸರಿಯಾಗಿಲ್ಲ, ಇಲ್ಲಿ ಬರೆದಿರುವ ಮದುವೆಯ ಹಾಡುಗಳಿಗೆ ತುದಿಯಿಲ್ಲ ಮೊದಲಿಲ್ಲ. ಅವರು ಹೇಳಿದ್ದನ್ನು ಬರೆದುಕೊಂಡು ಅದರ ಅರ್ಥದ ಮೇಲೆ ವಿಭಾಗ ಮಾಡಿದೆ)

## ಬೀಗರನ್ನು ಹಾಸ್ಯಮಾಡುವಹಾಡು

ಆನಾರಾ ಎಡತನ್ನೀ ಈನಾರಾ ಎಡತನ್ನಿ ಬಾಳೇಯನಾರಾ ಎಡತನ್ನೀ | ಬಾಳೇಯನಾರಾ ಎಡತನ್ಹೆಣ್ಣೋರನ್ನ ಬಾನೊಟ್ಟೇಮೇಲೇ ಬಿಗಸೇನು || ರಾಗೀ ಯಾಕಲ್ಲಾ ಕಿವಿಗಿಕ್ಕೇನ್ಹೆಣ್ಣಿನವ್ವ ರಾಜ್ಯಾನೋಡಾಕೇಬರಹೇಳೀ | ಸಾಲಾಸಾಲಾ ತೆಗೆದು ಸೂಳೇಯಾಕರಕೊಂಡು ಸಾಲ್ದೋರುಬಂದೂ ಒದೆವಾಗ | ಸಾಲ್ದೋರು ಬಂದು ಒದೆವಾಗನಮ್ಮುಂದೆ ಸೂಳೆಗೆ ದಮ್ಮಯ್ಯಾ ಹೊಣೆಯಾಗೇ | ಅಡ್ಡಬಡ್ಡೀ ತೆಗೆದು ಒಡ್ಯಾಣಮಾಡ್ಸಿಟ್ಟು ದೊಡ್ಡೋರಮುಗಳೆಂದು ಕರ್ಯಾಲೆಂದು | ಬಡ್ಡೀ ಕೊಡೆಂದೂ ಗಂಡೈಯ್ಯ ಒದೆವಾಗ ಒಡ್ಯಾಣಗಿತ್ತೀ ನೀ ಹೊಣೆಯಾಗು ||

ಅಕ್ಕೀಕೊಮ್ಮೇಗೇ ಬೆಟ್ಟಿಟ್ಟಿನೋಡೋಳೆ ಹಟ್ಟೀಗೆ ಮನೆಗೇ ತಿರುಗೋಳೆ | ಹಟ್ಟೀಗೇ ಮನೆಗೇ ತಿರಗೂವಬೀಗಿತ್ತಿ ನಾವ್ಹತ್ತೇಜನಕಾಣೇ ಅಳಬೇಡ | ಬೇಳೆಕೊಮ್ಮೇಗೇ ಬೆಟ್ಟಿಟ್ಟುನೋಡೋಳೆ ಬೀದೀಗೆ ಮನೆಗೇತಿರುಗೋಳೆ|ಬೀದೀಗೇ ಮನೆಗೇ ತಿರುಗೋಬೀಗಿತ್ತೀ ನಾವಾರೇ ಜನಕಾಣೇ ಅಳಬೇಡ | ಸಂಡಾನಮೇಲೆ ಖಂಡು ಗದಕ್ಕೀಹೇರಿ ಸುಂಡಾನೀಮುಂದೇನಡೆಯೆಂದೇ | ಸುಂಡಾನೀಮುಂದೇನಡೆಯೆಂದೆ ಬೀಗೂತಿ ಹುಂಡೀಗೆ ಮಾಡ್ಯಾಳೇ ಮದುವೇಯ | ಚೂಜೀತೋರಾಕೇ ಚೂಜೀಯ ಉದ್ದಾಕೆ ಬಗಿಬಗ್ಗೀ ತುಪ್ಪಾಬಿಡುವೋಳೇ | ಬಗಿಬಗ್ಗೀ ತುಪ್ಪಾಬಿಡುವಾ ಬೀಗಿತ್ತೀ ನಿನ್ನಾಣೆ ನಾವೂ ಉಣಲಿಲ್ಲ | ಬಗಿಬಗ್ಗೀ ಎಣ್ಣೇಬಿಡುವಾ ಬೀಗಿತ್ತೀ ನಿನ್ನಾಣೆನಾವೂ ಉಣಲಿಲ್ಲ | ನಮ್ಮಬೀಗೂತಿ ಒಳ್ಳೇಳು ಅನುತಿದ್ದೆ ಕಳ್ಳೀದೊಣ್ಯಾವಳಾ ಹೆಗಲಲ್ಲಿ | ಕಳ್ಳೀದೊಣ್ಣ್ಯಾವಳಾ ಹೆಗಲಲ್ಲಿಮಡಗೀ ಕಳ್ಳರ್ನಾಡವ್ರೇ ಮದುವೇಯ | ನಮ್ಮಾಬೀಗೂತಿ ಒಳ್ಳೇಳು ಅನುತಿದ್ದೆ ಒಡ್ಡಿನ್ಕೋಲವ್ರಾ ಹೆಗಲಾಲ್ಲಿ | ಒಡ್ಡಿನ್ಕೋಲವ್ರಾ ಹೆಗಲಲ್ಲಿ ಇಟ್ಕೊಂಡು ಒಡ್ಡರ್ಬತರ್ಾರೆ ಮದುವೇಗೆ | ಬೀಗತಿ ಬೀಗುತ್ತೀ ವಾಣ್ಯೆಲ್ಲಾ ಸೈಕಾಣೆ ಕೋಣೇಲಿ ಗುಂಡೀ ಮೊಳದುದ್ದ|ಕೋಣೇಲಿ ಗುಂಡೀ ಮೊಳದುದ್ದಬೀಗೂತೀ ಮಣ್ಣಾಕೊಟ್ಟೇನೂ ಮೆರಕೊಳ್ಳೆ|ಸಗಣೀಕೊಟ್ಟೇನೂ ಸಾರಿಸಿಕೊಳ್ಳೀ | ಬೀಗಿತಿಬೀಗಿತ್ತೀ ವಾಣ್ಯೆಲ್ಲಾ ಸರಿಕಾಣೆ ಮಾಡಾಕೆ ಬಂದೂ ಮಡಕೀ

ಲ್ಲಾ | ಮಾಡಾಕೆ ಒಂದೂ ಮಡಕಿಲ್ಲಬೀಗೂತಿ ಕುಂಬಾರ್‍ಗೆನಿಂಗೇ ಮೊಕಮುನ್ಸೇ | ಕುಂಬಾರ್‍ಗೆನಿಂಗೇ ಮೊಕಮುನ್ಸೆಬೀಗೂತಿ ಕುಂಬಾರ್‍ಗೊಂದಿಳ್ಳೂ ನಡಕೊಳ್ಳೇ |

(ಹೀಗೆಯೇ ಮೊರ ಕುಕ್ಕೆ ರಾಗೀಕಲ್ಲುಗಳ ಹಾಸ್ಯಗಳೂ ಮುಂದೆಮುಂದೆ ಹೇಳುವ ವಾಡಿಕೆ, ಅದು ಸ್ವಲ್ಪ ರೇಗಿಸುವ ಹಾಗಿರುವುದರಿಂದ ನಿಲ್ಲಿಸಿದೆ)

ಓಲೇತರ್ತೀನೆಂದೂ ಒಹಳ ಓದೀಹೋದಾ ವಾಲೇತರುವಾ ಪೋಲೂ ವೋರೇಯಾರೂ ಕಾಣಾರೋ | ಗುಂಡೂ ತರ್ತೀನೆಂದೂ ಬಹಳ ಓಡೀನಿಂದ ದುಡ್ಕೀಹೋದ ಗುಂಡೂತರುವ ಗುಂಡೂವೋರೇ ಯಾರೂ ಕಾಣಾರೋ | ಹರಡೀ ತರ್ತೀನೆಂದೂ ಬಹಳ ದುಡುಕಿನಿಂದ ಓಡೀಹೋದ ಹರಡೀತರುವ ಕರಡೀವೋರೆ ಯಾರೂ ಕಾಣಾರೋ ||

ಕೋಲಾಟದ ಪದ್ಯ, ರಾಗೀಬೀಸುವ ಮತ್ತು ಮದುವೆಯಹಾಡು. ಇವುಗಳನ್ನು ಹಳಬರ ಕೈಲಿ ಹೇಳಿಸಿಕೊಂಡು ಮುಮ್ಮೇಳ ಹಿಮ್ಮೇಳಗಳ ರೀತಿಯನ್ನು ತಿಳಿದುಕೊಳ್ಳುವುದು ಒಳ್ಳೆಯದು. ಕೆಲವು ಕಡೆ ಹೇಳುವ ರೀತಿಯನ್ನು ಬಿಟ್ಟಿರಬಹುದು-ತಿದ್ದಿರಬಹುದು. ಗತ್ತಿಗೆ ಸರಿಯಾಗಿ ತಿರಗಿಸಿರಬಹುದು. ಅದನ್ನೇ ಒಂದು ಪ್ರಮಾದವೆಂಬುದಾಗಿ ಭಾವಿಸಿ ಇದೆಲ್ಲಾ ತಪ್ಪು, ಇದೆಲ್ಲಾ ಈಗಿನವರ ಕವಿತೆ ಎಂದು ಬೇಜಾರು ಮಾಡಿಕೊಳ್ಳಕೂಡದು. ಮುಖ್ಯವಾಗಿ ಹಳ್ಳಿಗರ ಹಾಡುಗಳು ಶುದ್ಧವಾಗಿ ವಿಷಯುಸರಣಿಗಳು ಸರಪಣಿಯಂತೆ ಹೆಣದುಕೊಂಡು ಓದುಗರ ಮತ್ತು ಕೇಳುವರ ಮನಸ್ಸಿಗಾನಂದವನ್ನುಂಟುಮಾಡುವಂತಿರಬೇಕು. ಕಿನ್ನರಿ, ತಂಬೂರಿ, ಕಿರುಗೆಜ್ಜೆಗಳನ್ನು ಹಿಡಿದು ಗತ್ತಿಗೆ ಸರಿಯಾಗಿ ಹಾಡುವ ಹಳ್ಳಿಯ ಹಳಬರ ಹತ್ತಿರ ಕೂತುಕೊಂಡು ಪಾಮರಸಾಹಿತ್ಯವನ್ನು ಕೇಳುವ ಪಂಡಿತನು ಅದರ ನಿಜವಾದ ಆನಂದವನ್ನನುಭವಿಸಬಲ್ಲನು. ರಸಿಕನಿಗೆ ಹೂವು ಕಾಡಿನದೆಂದು ತಿಳಿದರೂ ಸುವಾಸನೆಯು ಮುಖ್ಯ.

## ಮುಗಿಸುವ ಮಾತು

ನಮ್ಮ ಕಡೆ ಹಳ್ಳಿಗಳಲ್ಲಿ ಯಾರಾದರೂ ಸ್ವಲ್ಪ ತಿಳಿದವರಿದ್ದರೆ ಅಯ್ಯೋ ಹಳ್ಳಿಗಳಲ್ಲಿ ಇಂತವರಿರಬಾರದು. ಪೇಟೆಸ್ಥಳಗಳಲ್ಲಿದ್ದರೆ ವಜ್ರಕ್ಕೆ ಪ್ರಕಾಶ ಬರುತ್ತಿತ್ತು ಎನ್ನುತ್ತಿದ್ದರು. ಕುಗ್ರಾಮವಾಸವೂ ಕುಲಹೀನನ ಸೇವೆಯೂ ಬ್ಯಾಡಪ್ಪಾ ಬ್ಯಾಡ ಎಂದು ಒಬ್ಬ ಕವಿಯು ನುಡಿದಿರುವನು. ಒಳ್ಳೆಯವರ ಮಾನ ಹಳ್ಳೀಲಿ ಹೋಯಿತು. ಎನ್ನುವ ಗಾದೆಯೂ ಹಳ್ಳಿಯ ವಾಸವನ್ನು ಹೀಯಾಳಿಸು

ತ್ತದೆ. ಹಾಗಾದರೆ ಹಳ್ಳಿಯಲ್ಲಿ ವಾಸಮಾಡುವುದು ಯಾವುದೋ ಪಾಪದ ಪ್ರಾಯಶ್ಚಿತ್ತಕ್ಕಾಗಿಯೋ? ಏಸು; ಹಿಂದಣ ಕಾಲದಲ್ಲಿ ಜ್ಞಾನಿಗಳು ವಿದ್ಯಾವಂತರು ಅಗ್ರಹಾರಗಳಲ್ಲಿ ಗ್ರಾಮಗಳಲ್ಲಿ ಇದ್ದುಕೊಂಡೇ ಸಂತೋಷವಾಗಿ ಕಾಲ ಕಳೆಯುತ್ತಿದ್ದರು. ಈಚೀಚೆಗೆ ಹಳ್ಳಿಯ ವಾಸವೂ ಹೋಯಿತು ಜೊತೆಯಲ್ಲಿ ಆತ್ಮಬಲವೂ ಹೋಯಿತು. ಆದದ್ದಾಯಿತು; ಇನ್ನುಮೇಲಾದರೂ ಹಳ್ಳಿಗರನ್ನು ತಿದ್ದುವ ಕೆಲಸವನ್ನು ಕೈಕೊಳ್ಳುವುದು ಒಳ್ಳೆಯದು. ವಿದ್ಯಾವಂತರು ಹಳ್ಳಿಗಳಲ್ಲಿ ನಿಲ್ಲಬೇಕಾದರೆ ಸುತ್ತಲ ಸನ್ನಿವೇಶವೂ ಸ್ವಲ್ಪ ವಿದ್ಯಾಬುದ್ಧಿಯುಳ್ಳದ್ದೂ ವಿನಯ ಮಾನ ಮರ್ಯಾದೆಯುಳ್ಳದ್ದೂ ಆಗಿದ್ದರೆಮಾತ್ರ ಸಾಧ್ಯವೆನ್ನಬಹುದು. ಹಳ್ಳಿಗಳಲ್ಲಿರುವ ಉಪಾಧ್ಯಾಯರುಗಳು ಈ ಪವಿತ್ರ ಕಾರ್ಯವನ್ನು ಕೈಕೊಳ್ಳಬೇಕು. ಹುಡುಗರಿಂದಲೇ ಮಾನ ಮರ್ಯಾದೆ ವಿನಯಗಳ ಕಡೆ ದೃಷ್ಟಿಯನ್ನು ತಿರಗಿಸಬೇಕು. ಹಳ್ಳಿಗರನ್ನು ಕೆಲವರು ತಂತ್ರದಿಂದಲೇ ಆಳಬೇಕು ಎನ್ನುವ ಅಭಿಪ್ರಾಯ ಪಡುವರು. ಸ್ವಲ್ಪ ಓದುಬರಹ ಬಂದರೆ ಸರಿ, ಆಗಲೇ ಅವನ ಮೇಲೆ ಅರ್ಜಿ ಇವನ ಮೇಲೆ ಫಿರ್ಯಾದು ಕೃತ್ರಿಮ ಬರಹ ಇವೆಲ್ಲಾ ಜೊತೆಯಲ್ಲೇ ಬರುತ್ತವೆ. ಹೀಗೆ ಎಷ್ಟೋಜನ ಒಬ್ಬರಮೇಲೊಬ್ಬರನ್ನು ಕೆಡುಹಿ ಅವರನ್ನು ಪಾಪರು ಮಾಡಿ ತಾವೂ ಹಾಳಾಗುತ್ತಾರೆ. ಇಂತವರನ್ನು ಕಂಡರೆ ಹಳ್ಳಿಗರಿಗೆ ಹೆದರಿಕೆಯೂ ಅದರಿಂದ ಭಯಭಕ್ತಿಯೂ ಹುಟ್ಟುತ್ತದೆ. ಅಂತಹ ಚಾಣಿಕ್ಯನನ್ನು ಕಂಡರೆ ಒಕ್ಕಲ ಮಕ್ಕಳು ಅಯ್ಯೆ, ಅವೈಯ್ನ ಸಹವಾಸ ಬಲು ಕಷ್ಟ ತಲೇಮೇಲೆ ಕೈಯಿಟ್ರೆ ಇನ್ಯಾಕೆ-ಭಸ್ಮಾಸುರ ಅನ್ನುವರು. ಇದೆಲ್ಲಾ ಯೋಚನೆ ಮಾಡಿದರೆ ನಮ್ಮ ಮನೆಗೇ ನಾವೇ ಬೆಂಕಿಯನ್ನಿಟ್ಟುಕೊಂಡಂತೆ ತೋರುವುದು. ವಿದ್ಯಾವಂತರಿಗೆ ಹಳ್ಳಿಗರ ಸಹವಾಸವು ಅವರ ಸೇವೆಯು ಬೇಸರ. ಖಂಡಿತವಾಗಿ ಬೇಸರ. ಕೆಲವರಿಗೆ ಒಂದೇ ಪಟ್ಟಿಗೆ ಹಳ್ಳಿಯನ್ನು ಉಜ್ಜಯಿನೀ ಪಟ್ಟಣವನ್ನಾಗಿ ಮಾಡಬೇಕೆಂದು ಇಷ್ಟ. ಇದೂ ದೂರದಮಾತು. ನಮ್ಮ ವಿದ್ಯೆಯು ನಮ್ಮ ಪಾಂಡಿತ್ಯವು ನಮ್ಮ ಪದವಿಯು ಎಷ್ಟೇ ಉನ್ನತವಾಗಿರಲಿ, ಅದೆಲ್ಲವನ್ನೂ ಹಳ್ಳಿಗರ ಬುಡಕ್ಕೇ ಕೊಡಲಿ ಕಾವಿನಂತೆ ಉಪಯೋಗಿಸದೆ ಸನ್ಮಾರ್ಗದಲ್ಲಿ ಉಪಯೋಗಿಸಬೇಕು. ನ್ಯಾಯವಾದ ಅರ್ಜಿಗಳನ್ನು ಬರೆಯೋಣ, ಸತ್ಯವಾದ ಪತ್ರಗಳನ್ನು ಬರೆಯೋಣ, ಆದರೆ ಸತ್ತ ಹೆಣದ ಹೆಬ್ಬೆಟ್ಟಿನ ಗುರ್ತನ್ನು ಹಾಕಿ ಮಗನಿಗೆ ಆಸ್ತಿಯನ್ನು ತಪ್ಪಿಸಿ ಚಲ್ಲುಚಾಲಿನ ಬಜಾರಿಗೆ ಸ್ವತ್ತು ಸೇರುವಂತೆ ಮಾಡಬಾರದು.

ನಾವಾಗಿ ಪ್ರೇರೇಪಿಸಿ ಅಸತ್ಯಪ್ರಚಾರವನ್ನು ಈ ಜಗತ್ತಿನಲ್ಲಿ ಅದ್ಯಾಕೆ ಮೂರು ಲೋಕದಲ್ಲೂ ಮಾಡಬಾರದು. ಹಳ್ಳಿಗರನ್ನು ಸೇವಿಸುವಾಗ ನಮ್ಮ ಜ್ಞಾನಾಭಿವೃದ್ಧಿಗೆ ತೊಂದರೆಯಾಗುವುದು. ಪುಸ್ತಕ ಭಂಡಾರಗಳಿರುವುದಿಲ್ಲ. ನಮಗೆ ಸಮಾನರಾದ ಸರಸಿಗಳಿರುವುದಿಲ್ಲ. ಕೊನೆಗೆ ಹತ್ತುಮಾರಿನ ಆಚೆ ಸಮಾಚಾರವೇ ತಿಳಿಯದೆ ಭಾವಿಯಲ್ಲಿ ಬಿದ್ದಂತೆಯಾಗುವುದು. ಏನು ಕಷ್ಟವಾದರೂ ಆಗಲಿ. ಹಳ್ಳಿಯವರಿಗೆ ಅಕ್ಷರಜ್ಞಾನವನ್ನುಂಟುಮಾಡಿರಿ. ಕ್ಷರ ಎಂದರೆ ನಾಶ ಅಕ್ಷರ ಎಂದರೆ ನಾಶವಿಲ್ಲದ್ದು ಅರ್ಥಾತ್ ನಾಶವಿಲ್ಲದ ಪರಬ್ರಹ್ಮ ಎಂದರ್ಥ. ಅಂತಹ ಪರಬ್ರಹ್ಮಜ್ಞಾನವನ್ನುಂಟುಮಾಡುವ ಯೋಗಿಗಳಾಗಿರಿ.

ಹಳ್ಳಿಗರನ್ನು ಅಭಿವೃದ್ಧಿಗೆ ತರಲು ಮೂರು ತೆರನಾದ ಮಾರ್ಗವಿರುವುದು. ಒಂದು ಸ್ವತಂತ್ರವಾದ ತನು ಮನ ಧನಸಹಾಯದಿಂದ, ಇದೇ ಕಾರ್ಯಸಿದ್ಧಿಪ್ರದಾಯಕವಾದ ದಾರಿ. ಎರಡನೇಯದು ಸ್ವತಂತ್ರ ರಾಜಕೀಯಮಾರ್ಗ, ಅದರಿಂದ ಆಡಳಿತಗಾರರಿಗೆ ಕೆಲವು ವಿಚಾರಗಳಲ್ಲಿ ಸರಿಬೀಳದು. ಇನ್ನು ಆಡಳಿತಗಾರರ ಹಿಂಬಾಲತನ, ಇದರಲ್ಲಿ ಫಲ ಬಲುನಿದಾನ, ಆದ್ದರಿಂದ ಸೇವಾಧರ್ಮದಿಂದ ಜನತಾರೂಪೀ ಜನಾರ್ದನನ ಸೇವೆಮಾಡಲಿಚ್ಛಿಸುವರು ಹಳ್ಳಿಗಳಲ್ಲಿ ಒದಗಬಹುದಾದ ಸಮಸ್ತ ಕಿರುಕುಳಗಳನ್ನೂ ನುಂಗಿ ನೀರು ಕುಡಿದು ಮುಂದಡಿಯಿಡಬೇಕು. ದೇಶಸೇವೆಯಲ್ಲಿ ಆಗುವ ಆನಂದವು ನಿರತಿಶಯವು.

ಸಾರಾಂಶ ನಮ್ಮ ವಿದ್ಯೆಯನ್ನು ನಮ್ಮ ದೇಶದ ನಾಶಕ್ಕೆ ಉಪಯೋಗಿಸದೆ, ವಿಶ್ವದ ಮೇಲ್ಮೆಗಾಗಿ ಉಪಯೋಗಿಸಬೇಕೆನ್ನುವುದೇ ಆಗಿದೆ. ಎಷ್ಟೋ ಜನರು ಹಳ್ಳಿಗರು ಕೋರ್ಟು ಕಛೇರಿ ಮುಂತಾದ ಕಡೆಗಳಲ್ಲಿ ನಡೆದುಕೊಳ್ಳುವ ರೀತಿಯನ್ನೂ ಮಾತಾಡುವ ಸ್ವಭಾವವನ್ನೂ ಆಡಿಕೊಳ್ಳುತ್ತಾ ಗೇಲೀಮಾಡುವುದುಂಟು. ಆರುಸಾವಿರ ವೈಲಿ ಆಚೆಯ ಸಂಪ್ರದಾಯವೂ ನಡವಳಿಕೆಯೂ ಹಿಂದೂಸ್ಥಾನದ ಹಳ್ಳಿಗನಿಗೆ ಹೊಸದು. ಅಲ್ಲದೆ ಅವನು ನಮ್ಮಂತೆ ನಾಗರಿಕನಲ್ಲವಲ್ಲಾ ಇದಕ್ಕೆ ನಕಲಿ ಏಕೆ? ಟಿಕೀಟು ತೆಕ್ಕೊಡುವ ಮಾತು ಹಾಗಿರಲಿ. ಅವನು ಕೊಳಕ ಅವನಮೇಲಿನ ಗಾಳೀ ಬೀಸಬಾರದೆಂಬ ಭಾವನೆಯೂ ಅನೇಕರಿಗಿದೆ. ನಮ್ಮ ಸಮಸ್ತ ಅಭ್ಯುದಯಗಳಿಗೂ ಅವರು ಬೇಕು. ನಮ್ಮಂತೆ ಅವರೆಂದು ಮಾತ್ರ ಅರಿಯಬಾರದು. ಇದಲ್ಲವೇ ನ್ಯಾಯ? ಇಂದಿನ ತರುಣರು ಹಳ್ಳಿಗಳನ್ನು ಅಸಹ್ಯ ದೃಷ್ಟಿಯಿಂದ ನೋಡಿದ್ದಕ್ಕೆ ಎಂದಾದರೂ ಪಶ್ಚಾತ್ತಾಪ ಪಡಲೇ ಬೇಕಾಗುವುದು.

ನಮ್ಮ ಹಳ್ಳಿಗೆ ಪದೇಪದೆ ಕಾಫಿ, ಟಿ, ವ್ಯಾಪಾರಸ್ಥರು ಸಿಗರೇಟಿನ ವ್ಯಾಪಾರಸ್ಥರು ಕ್ರಿಸ್ತಮತ ಬೋಧಕರು ಮುಂತಾದವರು ತಮ್ಮತಮ್ಮ ಮೋಟಾರುಗಳಲ್ಲಿ ಬಂದು ಸರ್ವಸನ್ನಾಹಮಾಡಿ ಸ್ವಲ್ಪವಾದರೂ ಲಾಭವನ್ನು ಹೊಂದುತ್ತಿದ್ದರು ಹರಕು ಬಟ್ಟೆಯನ್ನುಟ್ಟು ತಲೆಯನ್ನು ಕೆದರಿಕೊಂಡು ಮೈಮೂಳೆಗಳನ್ನು ಬಿಟ್ಟು ಕೊಂಡು ಅವರೆರಚುವ ಸಿಗರೇಟು, ಟೀ ಪೊಟ್ಟಣಗಳನ್ನು ಆಯ್ದುಕೊಳ್ಳಲು ಓಡಿ ಹೋಗುವ ನಮ್ಮ ಜನರನ್ನು ನೋಡಿ ಇದೇನು ದೈವಶಾಪವೊ ನಮ್ಮವರ ಮೇಲಿನ ದೇವರ ಕೋಪವಿನ್ನೂ ಶಾಂತವಾಗಿಲ್ಲವೋ ? ಎನ್ನುವಂತಾಗುತ್ತಿತ್ತು. ಹಿಂದೆ ನಮ್ಮೂರಿನ ರೈತರು ಗದ್ದೇ ಕೆಲಸಗಳಿಗೆ ಹೋಗುವಾಗ ಉದ್ದಿನ ಹಿಟ್ಟನ್ನು ಬೇಯಿಸಿ ತುಪ್ಪದಲ್ಲಿ ಕಲಸಿಕೊಂಡು ತಿಂದು ಹೋಗುತ್ತಿದ್ದರಂತೆ. ನಮ್ಮ ಕಾಲದಲ್ಲಿ ರಾಗೀಹಿಟ್ಟಿಗೂ ಬಂಡಾಟವಾಗಿ ಹೋಗಿತ್ತು. ಕೆಲಸದ ಆಳುಗಳು ಕೆಲಸವನ್ನು ನೋಡಿ ಹೆದರುತ್ತಿದ್ದರು. ಇಷ್ಟು ಬಡತನವು ಬಂದಿದ್ದರೂ ಸ್ವಲ್ಪ ಆಲಸ್ಯವಾದರೆ ಕಾಫಿ ಟೀಗಳ ಸೇವನೆಯು ನಡೆಯುತ್ತಿತ್ತು. ಹಳ್ಳಿಗರು ಮೊದಲಿಗಿಂತ ಹೆಚ್ಚು ದುಡಿಯುತ್ತಿರುವರು. ಹೊಟ್ಟೆಗೂ ಸರಿಯಾಗಿ ತಿನ್ನುವುದಕ್ಕೆ ಭಯಪಡುವರು ಕಾಡುಮೇಡುಗಳನ್ನೆಲ್ಲಾ ಉತ್ತು ಪೈರುಬೆಳೆಯುವರು ಇಷ್ಟಾದರೂ ಇಷ್ಟು ಈಜಿದರೂ ಬಡಸ್ತನವು ಇಂಗಲೇ ಇಲ್ಲ. ಸಾವಿರದವರೆಗೆ ಪ್ರಜೆಗಳಿರುವ ನಮ್ಮೂರಿನಲ್ಲಿ ನಾಲ್ಕೈದು ಮನೆಗಳಿಗೆ ಮಾತ್ರ ವರ್ಷಕ್ಕಾಗುವ ದಿನಸಿ ಬರುತ್ತಿತ್ತಲ್ಲಾ. ಇದರಂತೆ ತಾನೇ ಬಾಕಿಯ ಹಳ್ಳಿಗಳು. ಹಳ್ಳಿಗರ ಶ್ರಮವನ್ನೂ ಅವರ ಬಡತನವನ್ನೂ ಯೋಚಿಸಿ ನೋಡಿದರೆ ಅದಕ್ಕೆ ಕಾರಣವೇ ಹೊಳೆಯದೆ ಬುದ್ಧಿಯು ಮಂಕಾಗಿದೆ. ಕೆರೆಯು ತುಂಬುತ್ತದೆ. ನೀರು ನಿಲ್ಲುವುದಿಲ್ಲ. ಮೋಳೆಯು ಗೊತ್ತಾಗುವುದಿಲ್ಲ. ಹಿಂದಣ ಕಾಲದಲ್ಲಿ ಎಂತಹವರ ಮನೆಯಲ್ಲಿಯೂ ಸ್ವಲ್ಪ ದಿನಸಿ ಸ್ವಲ್ಪ ಆಪದ್ಧನಗಳನ್ನು ಬಚ್ಚಿಟ್ಟು ಪ್ರಾಣ ಹೋಗುವಾಗಲೂ ಅದನ್ನು ತೆಗೆಯಲು ನಿದಾನಿಸುತ್ತಿದ್ದರು. ಈಗ ಮುಂದಿನ ವರ್ಷದ ಬಿತ್ತನೆಗೆಂದು ಬಚ್ಚಿಟ್ಟಿದ್ದ ಕಾಳುಗಳನ್ನೂ ಮಡಕೆಗಳಿಂದ ಕಿತ್ತು ತಿನ್ನುತ್ತಿದ್ದಾರಲ್ಲಾ. ಹಳ್ಳಿಗರ ಬಡತನ ಅಜ್ಞಾನಗಳನ್ನು ನೆನಸಿಕೊಂಡರೆ ವ್ಯಸನವಾಗುತ್ತದೆ. ಅವರು ನಡೆಯುವ ನೀತಿಯೂ ಆಡುವ ಮಾತೂ ಅಂದೊಂದು ವಿಧವಾಗಿದೆ. ವಿದ್ಯಾವಂತರನ್ನು ಕಂಡರೆ ಚಾಡಿಕಾರರನ್ನು ಕಂಡಂತೆ ನಡುಗುವವರೂ ಇರುವರು. ಪ್ರಕೃತಸ್ಥಿತಿಯಲ್ಲಿ ಹಳ್ಳಿಗಳ ಸ್ಥಿತಿಯು ಸುಧಾರಣೆ ಹೊಂದಿಲ್ಲ. ಈಗಿರುವ ಅಲ್ಪಸ್ವಲ್ಪ ವಿಷಯಗಳು

ಪ್ರಾಚೀನ ಭರತಖಂಡದ ಆಡಳಿತದ ಧುರಿ. ಸಮಾಜ ಸುಧಾರಕರೂ ರಾಜಕೀಯ ಧುರಾರಿಗಳೂ ಇನ್ನೂ ಇತರ ಪುಣ್ಯಾತ್ಮರು ಹಳ್ಳಿಗಳ ಪರೀಕ್ಷಣಕ್ಕಾಗಿ ಪ್ರಯತ್ನಪಡುತ್ತಿರುವರು ಅವರೆಲ್ಲರಿಗೂ ಭಗವಂತನು ಆಯುರಾರೋಗ್ಯ ಐಶ್ವರ್ಯಾಭಿವೃದ್ಧಿಗಳನ್ನು ಕೊಡಲಿ. ಪೂರ್ವಕಾಲದಲ್ಲಿ ದಿಲೀಪಮಹಾರಾಜನು ಒಂದು ದಿನ ವಸಿಷ್ಠರ ಆಶ್ರಮವನ್ನು ಕುರಿತು ಹೋಗುತ್ತಿದ್ದನು. ರಾಜಧಾನಿಯಿಂದ ಆಶ್ರಮದವರಗಿರುವ ರಸ್ತೆಯು ಬಹಳದೂರ. ದಾರಿಯ ಅಕ್ಕಪಕ್ಕಗಳಲ್ಲಿ ಅನೇಕ ಹಳ್ಳಿಗಳಿದ್ದವು. ಪ್ರಭುವು ಆ ಮಾರ್ಗವಾಗಿ ಬರುವುದನ್ನು ತಿಳಿದು ಹಳ್ಳಿಗರು ಆಗ ತಾನೆ ಕಡೆದ ಬೆಣ್ಣೆಯನ್ನು ತೆಗೆದುಕೊಂಡು ಹೋಗಿ ಮಹೀಪಾಲನಿಗದನ್ನು ಸಮರ್ಪಿಸಿದರು. ಸ್ವಾಮಿಯು ಅದನ್ನು ಅಕ್ಕರೆಯಿಂದ ಸ್ವೀಕರಿಸಿ ಆನಂದಪಟ್ಟನು. ನಮ್ಮ ಹಳ್ಳಿಯವರು ಎಷ್ಟೇ ವಿದ್ಯಾವಂತರೂ ಐಶ್ವರ್ಯವಂತರೂ ಅನುಕೂಲಶಾಲಿಗಳೂ ಆದರೂ ಹಿಂದಣವರ ರಾಜಪ್ರಜೆಗಳ ಪ್ರೀತಿವಿಶ್ವಾಸಗಳನ್ನು ಮರೆಯದಿರಲಿ. ಅವರ ಹೃದಯವು ಬೆಣ್ಣೆಯಂತೆ ಸ್ವಚ್ಛವಾಗಿರಲಿ. ಮನಸ್ಸು ಮೃದುವಾಗಿರಲಿ. ಸ್ನೇಹವು ಸುವಾಸನೆಯುಳ್ಳದ್ದಾಗಿರಲಿ. ಅನ್ಯರ ಕಷ್ಟದಲ್ಲಿ ಅವರ ಕಟುಭಾವವು ಬೆಣ್ಣೆಯಂತೆ ಕರಗಲಿ. ರಾಜರನ್ನು ಸೇವಿಸುವಾಗ ಅವರ ಭಕ್ತಿಯು ಬೆಣ್ಣೆಯಂತೆ ನಿರ್ಮಲವಾಗಿರಲಿ. ದಿಲೀಪಮಹಾಪ್ರಭುವಿನ ರಥವನ್ನು ನಿಲ್ಲಿಸಿಕೊಂಡು ನನ್ನ ದೇಶದ ಹಳ್ಳಿಗರು ಯಾವ ಕೋಮಲವಾದ ನವನೀತವನ್ನರ್ಪಿಸಿ ಪೃಥ್ವೀಪತಿಯನ್ನು ಹಸನ್ಮುಖನನ್ನಾಗಿ ಮಾಡಿದರೋ ಅಂತಹ ಪರಿಶುದ್ಧವಾದ ವಾತಾವರಣವೇ ಪ್ರಪಂಚದಲ್ಲಿ ನಲಿದಾಡಲಿ.

## ಹೇಮಗಿರಿ

ಹಳ್ಳಿಗರು ಜ್ಞಾನದ ಬೆಳಕನ್ನು ಕಾಣಲಿ.
ಅವರಲ್ಲಿ ಪ್ರಾಚೀನ ಭರತಖಂಡದ ಸಭ್ಯತನವೂ ಪರಾಕ್ರಮವೂ ಪ್ರಕಾಶಿಸಲಿ.
ಪಟ್ಟಣಿಗರೂ ಹಳ್ಳಿಗರೂ ಮೈತ್ರಿಯಿಂದ ಬಾಳಲಿ.
ಕರ್ಣಾಟಕ ಸಿಂಹಾಸನಾಧೀಶರಿಗೆ ಸಕಲ ಸನ್ಮಂಗಳವುಂಟಾಗಲಿ.

## ರಂಗಪ್ರಾರ್ಥನೆ

ಭಗವನ್ ಪುಂಡರೀಕಾಕ್ಷ ಮುಕುಂದ ಮುರಮರ್ದನ | ಭೃಗ್ವರ್ಚಿತ ಮಹಾಬಾಹೊ ದೇವದೇವ ನಮೋಽಸ್ತುತೇ || ನಮ್ಮ ಪಿತ್ರಾದಿಗಳಿಂದ ಅರ್ಚಿಸಲ್ಪಟ್ಟ

ಸ್ವಾಮಿಯೇ ನಿನಗೆ ನಮಸ್ಕಾರ ಮಾಡುತ್ತೇನೆ. ಪುರಾಣದೃಷ್ಟಿಯಿಂದ ನೀನು ಕೇಶವನು, ಸಂಕಲ್ಪರೀತಿಯಿಂದ ವೇಂಕಟೇಶನು, ಭಕ್ತಾಗ್ರಣಿಗಳು ನಿನ್ನನ್ನು ರಂಗನೆನ್ನುವರು. ಸಹಸ್ರನಾಮಗಳಿಂದ ಅಲಂಕೃತನಾದ ನಿನಗೆ ಎಲ್ಲವೂ ಒಪ್ಪುವುವು. ನೀನು ಭಕ್ತರ ಪ್ರಾರ್ಥನೆಯನ್ನಾಲಿಸಿ ಈ ಸುವರ್ಣಗಿರಿಯಲ್ಲಿ ನೆಲಸಿರುವೆ. ನೀನಿಲ್ಲಿ ನೆಲಸಿರುವ ಸಂಗತಿಯನ್ನು ತಿಳಿದು ಹೇಮಾವತಿಯು ನಿನ್ನದರ್ಶನದಿಂದ ಧನ್ಯಳಾಗಬೇಕೆಂದು ಸದಾ ಸುವರ್ಣಗಿರಿಯ ಸಮೀಪದಲ್ಲೇ ಪ್ರವಹಿಸುತ್ತಿರುವಳು. ಆದಿಯಲ್ಲಿ ನೀನು ನಮ್ಮ ಪೂರ್ವಿಕರಾದ ಋಷಿಗಳೊಡನೆ ಮಾತನಾಡುತ್ತಿದ್ದೆ ಕ್ರಮೇಣ ಸ್ವಪ್ನಗೋಚರನಾದೆ ಇತ್ತೀಚೆಗೆ ಭಕ್ತಗೋಚರನಾಗಿರುವೆ. ಸ್ವಾಮಿ, ಭಕ್ತರಿಗೆ ಶ್ರಮವಾಗಬಾರದೆಂದು ಈ ಪುಟ್ಟಪರ್ವತವನ್ನು ಆಶ್ರಯಿಸಿರುವೆ. ಇದರಲ್ಲಿನ ಕೋಡುಗಲ್ಲುಗಳು, ಗುಹೆಗಹ್ವರಗಳು, ತಪ್ಪಲುಪ್ರದೇಶಗಳು ಮಹಾಪರ್ವತದ ಲಕ್ಷಣಗಳಿಂದಲೇ ಕೂಡಿವೆ. ನಿನ್ನ ಸಾನ್ನಿಧ್ಯದಿಂದ ಮಹಾತ್ಮೆಪಟ್ಟ ಸ್ವಜಾತೀಯನಾದ ಹೇಮಗಿರಿಯನ್ನು ಗೌರವಿಸಲು ಜಗತ್ತಿನ ಇತರ ಪರ್ವತಗಳು ಸಾಲಾಗಿ ಬರುತ್ತಿರುವಂತೆ ಸುತ್ತಲಿನ ಪರ್ವತಪಙ್ಕ್ತಿಯು ಕಾಣುವುದು. ಬೆಟ್ಟದ ಮೇಲೆ ನಿಂತು ಸುತ್ತಲೂ ನೋಡಿದರೆ ಪ್ರಕೃತಿ ಸೌಂದರ್ಯವು ಬಲು ರಮಣೀಯವಾಗಿ ಕಾಣುತ್ತದೆ. ಸ್ವಲ್ಪ ವಿಚಾರದೃಷ್ಟಿಯಿಂದ ನೋಡಿದರೆ ಪ್ರಕೃತಿಗೂ ಪ್ರಾಣಪ್ರಾಯನಾದ ನಿನ್ನ ರೂಪವು ಹೊಳೆಯದೇ ಇರದು. ಇಂತಹ ಶಾಂತವನವನ್ನು ನಿನ್ನ ಆವಾಸಸ್ಥಾನವನ್ನಾಗಿ ಮಾಡಿಕೊಂಡಿರುವೆ. ನಿನ್ನಪರ್ವತಚ್ಛಾಯೆಯನ್ನು ಆಶ್ರಯಿಸಿಕೊಂಡಿರುವ ಗ್ರಾಮಗಳಿರುತ್ತವಲ್ಲಾ ಅಲ್ಲಿನ ಸುಗ್ಗಿಯು ನಾಲ್ಕುಮೂಲೆಗಳಲ್ಲೂ ತುಂಬಿರಲಿ. ಆ ಗ್ರಾಮಗಳ ಸುಗ್ಗಿಯ ಕುಣಿತವು ಸಂತೋಷದಿಂದ ಕೂಡಿರಲಿ. ಅವರು ನಿನಗಾಗಿ ತಮ್ಮ ಹೊಲ ಗದ್ದೆಗಳಲ್ಲಾದ ಕಾಳುಗಳಲ್ಲಿ ಪ್ರಥಮ ಫಲವನ್ನರ್ಪಿಸುವರು. ನಿನ್ನನ್ನು ಹನ್ನೆರಡು ಗಾವುದದ ಒಡೆಯನೆನ್ನುವರು. ಅಲ್ಲಿನವರೆಲ್ಲಾ ನಿನಗಾಗಿ ಪ್ರಥಮಫಲವನ್ನರ್ಪಿಸುವರು. ನಿನ್ನಭಕ್ತರಾಗಿ ಅವರಿರುವ ಗ್ರಾಮಗಳಲ್ಲಿ ಅತಿವೃಷ್ಟಿಯಾಗಲೀ ಅನಾವೃಷ್ಟಿಯಾಗಲೀ ಆಗದೆ ಸುವೃಷ್ಟಿಯಾಗಲಿ. ಅವರ ತೋಟತುಡಿಕೆಗಳು ಹಣ್ಣುಹಂಪಲುಗಳಿಂದ ತುಂಬಿ ತುಳುಕಲಿ. ಸ್ವಾಮಿ, ಇದೋ ಈ ಕುಸುಮ ಸಮೂಹವನ್ನು ನಿನ್ನಪಾದಾರವಿಂದಗಳಿಗರ್ಪಿಸುವೆನು. ಅಲ್ಲಿನ ಮಕ್ಕಳು ತಮ್ಮ ತೊಟ್ಟಿಲುಗಳಲ್ಲಿ ಸುಖವಾಗಿ ಮಲಗಿ ನಿದ್ರಿಸಲಿ, ಅವುಗಳ ಗುಂಗುರು ಗುಂಗುರಾದ ಮುಂಗುರಳುಗಳಿಂದಲಂ

ಕೃತವಾದ ಶಿರಸ್ಸು ಸದಾ ಸುಗಂಧತೈಲಗಳಿಂದ ಸುವಾಸಿತವಾಗಿರಲಿ, ಅವುಗಳ ಮನಸ್ಸು ಮಳೆಹೊಯ್ದು ಬೆಳಗಣ ಸೂರ್ಯನ ಕಿರಣಗಳೊಡನೆ ಹಸುರು ಪೈರುಗಳಾಡುವಂತೆ ನಿನ್ನ ಪಾದಾರವಿಂದದೊಡನೆ ಆಟವಾಡುತ್ತಿರಲಿ, ಪ್ರಭೋ! ಧ್ರುವನಿಗೆ ಯಾವ ಸೌಮ್ಯರೂಪದಿಂದ ದರ್ಶನವಿತ್ತು ಹರಸಿದೆಯೋ ಅದೇ ರೂಪದಿಂದ ನಿನ್ನ ಗ್ರಾಮದ ಮಕ್ಕಳುಗಳನ್ನು ಹರಸು. ನಿನ್ನ ಹೆಸರಿನ ಮೇಲೆ ಭರವಸೆಯಿಟ್ಟು ಯಂತ್ರ ಮಂತ್ರಗಳನ್ನು ನೆರವೇರಿಸುತ್ತೇನೆ. ಅವುಗಳನ್ನು ಧರಿಸಿದವರು ಪೂರ್ಣಮನೋರಥರಾಗಲಿ, ನಿನ್ನ ಸಾನ್ನಿಧ್ಯ ಪರ್ವತಪ್ರದೇಶದಲ್ಲಿ ನಡೆಯುವ ವಿವಾಹಗಳ ವಧೂವರರನ್ನು ಹರಸಿ ಅವರಿಗೆ ಆಯುರಾರೋಗ್ಯಗಳನ್ನು ದಯಪಾಲಿಸು. ನನ್ನ ಸ್ಥಾನವು ಜಗತ್ತಿಗೇ ಮಂಗಳವನ್ನು ಕೋರುವುದಾಗಿರುವುದು. ಆದುದರಿಂದ ಸ್ವಾಮಿ, ಗ್ರಾಮರಾಷ್ಟ್ರಗಳಿಗೂ ದೇಶ ವಿದೇಶಗಳಿಗೂ ಮಂಗಳವಾಗಲಿ. ನಮ್ಮೂರಿನ ವೃತ್ತಿವಂತರು ಸ್ನಾನಸಂಧ್ಯಾದಿಗಳಿಂದ ಶುಚಿರ್ಭೂತರಾಗಿ ನಿನ್ನ ಸಾನ್ನಿಧ್ಯದಲ್ಲಿ ನಿಂತು ಕರ್ಣಾಟಕ ಪ್ರಭುಗಳನ್ನುದ್ದೇಶಿಸಿ ಯಾವ ಶ್ರೇಯಃಪ್ರಾರ್ಥನೆ ಮಾಡುವರೋ ಅದೆಲ್ಲವೂ ಶತಗುಣವಾಗಿ ಫಲಿಸುವಂತೆ ಕೃಪೆಮಾಡು. ಸ್ವಾಮಿ, ನಿನ್ನ ಸಾನ್ನಿಧ್ಯಪರ್ವತದ ಸಮೀಪದಲ್ಲಿ ಕಾವೇರ್ಣೀಡದಂತಿರುವ ವೃಕ್ಷಗಳು ವೈಕುಂಠದಿಂದ ಸಮಾಚಾರ ತಂದಿರುವ ದೇವದೂತರ ವಿಮಾನಗಳಂತಿವೆ. ತಪಸ್ಸಿದ್ಧರಾದ ಋಷಿಗಳು ನಿನ್ನ ಪಾದಪದ್ಮವನ್ನು ತೊಳೆಯಲು ಹೇಮಾವತೀ ಜಲವನ್ನು ಎಳನೀರೆಂಬ ಕೊಡಗಳಲ್ಲಿ ತುಂಬಿ ತಲೆಯಮೇಲಿಟ್ಟುಕೊಂಡು ನಿಂತಲ್ಲಿಂದಲೇ ಬಾಗಿ ಕೊಡದ ನೀರನ್ನು ಸುರಿಯುತ್ತಿರುವಂತೆ ಕಾಣುವುದು. ಸುತ್ತಲೂ ಇರುವ ಈ ತೆಂಗಿನ ತೋಟ, ಯಮುನೆಯಂತೆ ಕಪ್ಪಗಿರುವ ಹೇಮಾವತಿ, ಗಂಗೆಯಂತೆ ಸ್ವಚ್ಛವಾಗಿರುವ ಮಳಲಿನ ಮೈದಾನ, ತರು, ಲತೆ ಗುಲ್ಮಾದಿಗಳಿಂದ ನಿಬಿಡವಾದ ನಿನ್ನ ಬೀಡು. ಇದನ್ನು ನೋಡಿದರೆ ಇದೊಂದು ದಕ್ಷಿಣ ದೇಶದ ಪ್ರಯಾಗಕ್ಷೇತ್ರವೋ ಎನ್ನಿಸುತ್ತದೆ. ದೂರದಿಂದ ನೋಡಿದರೆ ನಿನ್ನ ಆಲಯವು ನಾಗರತ್ನದಂತೆಯೂ, ಪರ್ವತವು ಆದಿಶೇಷನ ಹೆಡೆಯಂತೆಯೂ ತೋರುವುದು. ದಯಾನಿಧೆ! ನಿನ್ನ ಹೆಸರನ್ನು ಮುಂದಿಟ್ಟು ಪ್ರಥಮ ಫಲವನ್ನು ತರಲು ಹಳ್ಳಿಗಳಿಗೆ ಹೋದಾಗ ಅಲ್ಲಿನವರು ನಿನ್ನನ್ನು ಕಂಡಂತೆ ಪಾಮರನಾದ ನನ್ನನ್ನು ಸನ್ಮಾನಿಸುತ್ತಿರುವರಲ್ಲಾ, ಇದು ನಿನ್ನ ದಿವ್ಯಚಿತ್ತಕ್ಕೆ ಬರಲಿ. ಕೊಪ್ಪಲಹಳ್ಳಿ (ಕುಪ್ಪಹಳ್ಳಿ) ಯೆಂಬ ಗ್ರಾಮವು ನಿನಗಾಗಿ ಮಂಗಳದ್ರವ್ಯಗ

ಳನ್ನೂ ಫಲಕುಸುಮಗಳನ್ನೂ ಸೆಡಗರದಿಂದ ತಂದುಕೊಟ್ಟಿರುವುದು ನಿನ್ನ ಜ್ಞಾಪಕದಲ್ಲಿರಲೆಂದು ಪ್ರಾರ್ಥಿಸುವೆನು.

ಆ ಊರಿನ ಮಂಗಳಸೂತ್ರವು ಭದ್ರವಾಗಿರಲಿ, ಅಲ್ಲಿನ ಫಲವೃಕ್ಷಗಳು ಸಮೃದ್ಧಿಯಿಂದಿರಲಿ, ಅಲ್ಲಿನ ಸುಮಂಗಲೆಯರು ನಿನ್ನಮೇಲೆ ಕವನಕಟ್ಟಿ ಆನಂದದಿಂದ ಪಾಡುವುದು ನಿನಗೆ ಕೇಳಿಸುತ್ತಲೇ ಇದೆ ಭಕ್ತವತ್ಸಲ! ಇದೋ ಈ ಪುಷ್ಪಾಂಜಲಿಯು ನಿನಗರ್ಪಿತವಾಗಲಿ. ನಿನ್ನ ಹಳ್ಳಿಯ ಮಕ್ಕಳನ್ನು ಆಶೀರ್ವದಿಸು. ನಿನಗಾಗಿ ಪ್ರಥಮ ಫಲವನ್ನರ್ಪಿಸುವ ಗ್ರಾಮಗಳಲ್ಲಿನ ಆಕಳುಗಳಿಗೆ ತಿನ್ನಲು ಹುಲ್ಲೂ ಕುಡಿಯಲು ನೀರೂ ಹೋದಲ್ಲಿ ದೊರಕಲಿ. ಅಲ್ಲಿನವರ ಹಿರಿಯರು ಯಾವ ವಿಧವಾದ ಅಕಾಲಮರಣಕ್ಕೆ ತುತ್ತಾಗಿ ಗತಿಯಿಲ್ಲದೆ ಅಲೆಯುತ್ತಿದ್ದರೂ ಅವರಿಗೆ ಸದ್ಗತಿಯುಂಟಾಗಲಿ. ಅವರ ಆತ್ಮಗಳಿಗೆ ಶಾಂತಿಯುಂಟಾಗಲಿ. ನಿನ್ನ ಸಾನ್ನಿಧ್ಯಪರ್ವತದ ಸುತ್ತಲೂ ಇರುವ ಹಳ್ಳಿಗಳನ್ನು ನೋಡಿ ನನಗೆ ಹಿಂದೆ ರಾಮಚಂದ್ರನು ಚಿತ್ರಕೂಟಪರ್ವತದಲ್ಲಿ ನೆಲಸಿರುವಾಗ ಋಷಿಗಳು ಹೀಗೆಯೇ ಗುಡಿಸಲುಗಳನ್ನು ಕಟ್ಟಿಕೊಂಡು ನಿರ್ಭಯರಾಗಿ ವಾಸಿಸುತ್ತಿದ್ದರೇನೋ ಅನ್ನುವ ಹಾಗಾಯಿತು. ಹೇಮಾವತಿಯು ತನ್ನ ದಡದಲ್ಲಿರುವ ಗ್ರಾಮಗಳಿಗೆ ನೀವು ಹೆದರಬೇಡಿರಿ. ಹೇಮಗಿರೀಶನ ಕೃಪಾಜಲವು ನಿಮಗಿರುವುದು, ಆತನನ್ನು ಸ್ತುತಿಸಿರಿ. ಆ ಮಹಾಪ್ರಭುವಿನ ಹೆಸರನ್ನು ಹೇಳಿಕೊಂಡು ನಲಿಯಿರಿ. ಎಂದು ಕೈ ನೀಡಿ ಹೇಳುವಳೋ ಅನ್ನುವಹಾಗಿವೆ. ಎರಡು ಕಡೆಯ ನಾಲಗೆಗಳು ಸ್ವಾಮಿಾ, ಆಕಾಶವೇ ಮುಚ್ಚಳ, ಭೂಮಿಯೇ ತಳಪೀಠ, ದಿಕ್ಕುಗಳೇ ಚೌಕಟ್ಟುಗಳು. ಇಂತಹ ವಿಸ್ತಾರವಾಗಿಯೂ ಭದ್ರವಾಗಿಯೂ ಇರುವ ಪೆಟ್ಟಿಗೆಯುಲ್ಲಿ ನಮ್ಮನ್ನಿರಿಸಿ ಸೂರ್ಯಚಂದ್ರರೆಂಬ ಎರಡು ದೀಪಗಳನ್ನು ಕೊಟ್ಟಿರುವೆ. ಈ ಉಪಕಾರಕ್ಕೆ ಪ್ರತಿಯಾಗಿ ಇದೋ ಈ ಪುಷ್ಪಾಂಜಲಿಯು. ಆಕಾಶವೇ ಪುರುಷನು, ಭೂಮಿಯು ಸ್ತ್ರೀ, ವರ್ಷಾಕಾಲವೇ ಇವರ ಸಂಬಂಧ ಸೂಚಕ ಸಾಮಗ್ರಿ. ಕಾಮನಬಿಲ್ಲು ಆ ಮಹಾಪುರುಷನ ಹುಬ್ಬು, ಗುಡುಗು ಅಟ್ಟಹಾಸ, ಶಿಡಿಲು ಕೋಪಧ್ವನಿ, ಇದೇನು ಪ್ರಪಂಚ ಸೃಷ್ಟಿಗೆ ಮೊದಲು ಇದನ್ನು ಸೃಷ್ಟಿಸಿ ನೋಡಿಕ್ಕೊಂಡೆಯಾ. ಇದರ ಅಣುರೂಪವೇ ಮಾನವನೇನು? ಸ್ವಾಮಿಾ, ನಿನ್ನ ಲೀಲೆಯು-ವಿಚಿತ್ರ, ತೆಂಗಿನ ಕಾಯಿಯು-ನಮ್ಮ ಹೃದಯ, ಎಳನೀರು-ಭಕ್ತಿಜಲ, ಕಾಯಿಯನ್ನು ಇಬ್ಭಾಗ ಮಾಡಿದಂತೆ ನಮ್ಮ ಹೃದಯವನ್ನು ತೆರೆದು ನಿನ್ನಮುಂದಿಟ್ಟು ಭಕ್ತಿಜಲವನ್ನು ನಿನ್ನ

ಪಾದದ ಮೇಲೆ ಚಲ್ಲಿರುವೆವು. ಕಾಯಿಯ ಒಳಭಾಗವು ನಿನ್ನ ಕೃಪಾಬಲದಿಂದ ಎಷ್ಟು ಶುದ್ಧವಾಗಿದೆಯೋ ಅದರಂದದಿ ಮಾನವರಾದ ನಮ್ಮ ಹೃದಯವನ್ನೂ ಶುದ್ಧಿ ಮಾಡು. ದವನವು ಪೂರ್ವಜನ್ಮಗಳ ಸಂಸ್ಕಾರವಾಸನೆ. ಹಣ್ಣು ಈಗ ಅನುಭವಿಸಲು ಸಿದ್ಧವಾಗಿರುವ ಕರ್ಮಫಲ. ಈ ಎರಡನ್ನೂ ಹಣ್ಣೂ ದವನವೆಂದು ನಿನಗರ್ಪಿಸುವೆವು. ಸಂಚಿತ ಅನುಭವಗಳೆರಡೂ ಹೋದವು. ನಿನ್ನ ಕರುಣೆಯಿಂದ ಆಗಾಮಿನಿಯೂ ಅಡಗಿತು. ಇದೋ ನಿನ್ನ ರಥದಲ್ಲಿ ಜೀವಾತ್ಮರಾದ ನಮ್ಮನ್ನು ಎಳನೀರುಗಳನ್ನು ನೇತುಹಾಕಿರುವಂತೆ ತೂಗುಕಟ್ಟಿಕೊಂಡು ನಡಿ ಸ್ವಾಮಿ, ಹೋಗುವ. "ರಥಸ್ಥಂ ಕೇಶವಂ ದೃಷ್ಟ್ವಾ ಪುನರ್ಜನ್ಮನವಿದ್ಯತೆ" ಎನ್ನುವ ವಾಕ್ಯವು ಸಾರ್ಥಕವಾಗಲಿ. ಪುಂಡರೀಕಾಕ್ಷ, ನಮ್ಮ ಹೃದಯಧ್ವನಿಯೇ ನಿನ್ನ ದೇವಸ್ಥಾನದಲ್ಲಿರುವ ಕಂಚಿನ ಗಂಟೆ. ನಿನಗೆ ಬೆಳಗುವ ಕರ್ಪೂರಾರತಿಯೇ ನಮ್ಮ ಹೃದಯದಲ್ಲುದಯಿಸುವ ದಿವ್ಯಜ್ಞಾನ. ಈ ದೇಹವೇ ದೇವಸ್ಥಾನ. ಯೋಗಿಯು ಈ ದೇಹದಲ್ಲಿ ನಿನ್ನನ್ನು ನೋಡುವನು. ನಾವು ಬಾಹ್ಯಪ್ರಪಂಚದಲ್ಲಿ ನಿನ್ನನ್ನು ನೋಡುತ್ತಿರುವೆವು. ಇಂತಹ ನಮ್ಮ ಅಪರಾಧಗಳು ಏನಿದ್ದರೂ ಕ್ಷಮಿಸು.

ನಮ್ಮ ಹಿರಿಯರು ಹೇಳುತ್ತಿದ್ದರು. ಬೆಟ್ಟದ ಹತ್ತಿರ ಧರ್ಮದ ಸೂರೆ. ಯಾರು ಬೇಕಾದರೂ ಬಾಚಿಕೊಳ್ಳಿ ಎಂದು, ಅಂದರಂತೆ ಅನೇಕರು ತೋಪು ಮಂಟಪ ಸೋಪಾನಗಳನ್ನು ಕಟ್ಟಿಸಿದರು. ಅನ್ನದಾನ ಮಾಡಿದರು. ಮಾಡುತ್ತಿರುವರು. ಅವರ ಇಷ್ಟಾರ್ಥವು ಸಫಲವಾಗಲಿ. ಅವರ ಸಂತಾನವೂ ದಾನಧರ್ಮ ಪರೋಪಕಾರಗಳಿಂದ ಆಚಂದ್ರಾರ್ಕವಾಗಿ ಬದುಕಿ ಬಾಳಲಿ. ಸ್ವಾಮಿ, ರಣರಂಗದಲ್ಲಿಯೂ ಔಷಧಶಾಲೆಗಳಲ್ಲಿಯೂ ನರಳುವವರು ಗುಣಮುಖರಾಗಲಿ. ಕಾಡಿನಲ್ಲೂ ಕತ್ತಲೆಯಲ್ಲೂ ಕತ್ತಿಯ ಪೆಟ್ಟಿಗೂ ಹಸುವಿನ ಆರ್ಭಟಕ್ಕೂ ಸಿಕ್ಕಿರುವವರನ್ನು ನಿನ್ನ ದಿವ್ಯ ಚಿತ್ತಕ್ಕೆ ತರಲು ಸಾಹಸವುಳ್ಳವನಾಗಿರುವೆನು. ಅನಾಥರಕ್ಷಕ ಅಂತವರ ರಕ್ಷಣೆಗೆ ನಿನ್ನ ಚಕ್ರವು ಸಿದ್ಧವಾಗಿಯೇ ಇದೆ.

ನೀನು ಭೂಲೋಕದಲ್ಲಿಳಿದು ಬಂದಾಗ ಭೂದೇವಿಗೆ ಗೌರವಾರ್ಥವಾಗಿ ಕೊಟ್ಟ ಪೀತಾಂಬರವನ್ನು ಮೇದಿನಿಯು ಈಗ ಧರಿಸಿ ನಲಿಯುವಳೋ ಎನ್ನುವಂತಿದೆ. ಸುತ್ತಲೂ ಕಾಣುವ ಹೊಂಬಣ್ಣದ ಪೈರು ಈ ಪರ್ವತದಲ್ಲಿರುವ ಗಿಣಿ ನವಿಲು ಕೋಗಿಲೆಗಳೇ ನಿನಗೆ ಸುಪ್ರಭಾತವನ್ನು ಹೇಳುವ ಊಳಿಗಗಳು. ನೀನು ಯಾವಾಗಲೂ ಭಕ್ತರ ಮೊರೆಯನ್ನಾಲಿಸುವವನಾದ್ದರಿಂದ ನಿದ್ರೆ ಯಾವಾಗಲೋ

ಎಚ್ಚರವಾಗ್ಯಾವಾಗಲೋ ನಮಗದು ತಿಳಿಯದು. ಆದ್ದರಿಂದಲೇ ನಿನ್ನ ಸಾನ್ನಿಧ್ಯ ಪರ್ವತದ ಬಳಿಯಲ್ಲಿ ತಿರುಗುವಾಗ ಹೇಮಾವತಿಯು ತನ್ನ ಸ್ವಭಾವಸಿದ್ಧವಾದ ಸಡಗರವನ್ನೂ ಬಿಟ್ಟು ಸದ್ದಿಲ್ಲದೆ, ಹೋಗುವುದು ಕೂಡಾ ತಿಳಿಯದಂತೆ ಮುಂದಡಿ ಇಡುತ್ತಿರುವಳು. ದಶರಥನು ಕೃತಕೃತ್ಯನಾಗಿ ಅವಭೃತಸ್ನಾನಮಾಡಿಕೊಂಡು ಸರಯೂದಡದಿಂದ ಅಯೋಧ್ಯೆಗಭಿಮುಖನಾಗಿ ಬರುತ್ತಿರುವುದನ್ನು ಆಗಿನ ನನ್ನ ದೇಶದ ಪ್ರಜೆಗಳು ನೋಡಿ ಸಂತೋಷಪಟ್ಟರು. ಈಗಲೂ ಸಹ ದೇಶಸೇವಾ ದೀಕ್ಷಿತರಾದ ಮಹಾತ್ಮರು ಕೈಗೂಡಿದ ಕೆಲಸವುಳ್ಳವರಾಗಿ ಹಸನ್ಮುಖರಾಗಿ ಬರುವುದನ್ನು ನನ್ನ ದೇಶಬಾಂಧವರು ನೋಡಿ ನಲಿಯುವ ಸುಯೋಗವನ್ನೊದಗಿಸು. ಭಗವಂತನೆ, ನಿನಗೆ ತಿಳಿಯದೇ ಇರುವುದು ಯಾವುದಿದೆ. ಆದರೂ ನೀನು ಆರ್ತತ್ರಾಣಪರಾಯಣನೆಂದು ತಿಳಿದಿದ್ದರೂ ನನ್ನ ಕರ್ತವ್ಯದಂತೆ ನಿನ್ನನ್ನು ಪ್ರಾರ್ಥಿಸಿರುತ್ತೇನೆ ನಿನ್ನ ಪರ್ವತವನ್ನೂ ನಿನ್ನ ಆಲಯವನ್ನೂ ಶುಚಿಯಾಗಿ ಸುಗಂಧದ್ರವ್ಯಗಳಿಂದ ಗಮಗಮಿಸುವಂತೆ ನಿನ್ನ ಭಕ್ತರು ಧೂಪ ಹಾಕುತ್ತಿರುವರು. ಒದ್ದೆ ವಸ್ತ್ರಗಳಿಂದ ಉರುಳುಸೇವೆ ಮಾಡುವರು. ನಿನಗೋಸ್ಕರ ಹರಕೆ ಹೂಡುಗಳನ್ನು ಕಟ್ಟುವರು. ಸ್ವಾಮಿ ನಿನ್ನ ದಿವ್ಯನಾಮದ ಶಕ್ತಿಯು ಆ ಭಕ್ತರ ಇಷ್ಟಾರ್ಥವನ್ನು ನೆರವೇರಿಸಲಿ ದೇಶವಿದೇಶಗಳಲ್ಲಿ ಶಾಂತಿಯು ನೆಲೆಗೊಳ್ಳಲಿ. ಸತಿಪತಿ ಪ್ರೀತಿಯು ನಿಷ್ಕಲ್ಮಶವಾಗಿರಲಿ. ಧೇನುಗಳು ಮಧುವಿನಂತಹ ಹಾ[illegible] ಕರೆಯಲಿ ಜನಗಳು ಕಪಟಭಕ್ತಿಯುಳ್ಳವರಾಗದೆ ಕೋಪವನ್ನು ತಡೆ[illegible] ವವರೂ ದ್ವೇಷವನ್ನು ಹತ್ತಿರ ಸೇರಿಸದವರೂ ಶುದ್ಧಭಕ್ತಿಯುಳ್ಳವರೂ ಆ[illegible] ಭಗವನ್ ! ನಿನ್ನನ್ನ ಆದಿಶೇಷನೇ ಸ್ತೋತ್ರಮಾಡಲು ಶಕ್ತನಲ್ಲ. ಇನ್ನು ನನ್ನ ಪಾಡೇನು. ಆದರೂ ಇದೋ ಅನಂತಪ್ರಣಾಮಗಳು ನಿನಗೆ. ನಿನ್ನ ಸಾನ್ನಿಧ್ಯದಲ್ಲಿ ಮಾಡಿರುವ ಈ ವಿಧವಾದ ಪ್ರಾರ್ಥನೆಯು ನಿನ್ನ ದಿವ್ಯಚಿತ್ತಕ್ಕೆ ಬಂದು ಅವುಗಳಲ್ಲಿ ನಿನ್ನ ಕೃಪಾಬಲವಿರಲಿ. ನಿನ್ನ ಪಾದಗಳಿಗೆ ಪುನಃ ಪುನಃ ನಮಸ್ಕಾರವು.

ಮೂಡಣದಿಕ್ಕಿನಿಂದ ನೋಡಿದರೆ ನಿನ್ನ ಆಲಯದ ಬಾಗಿಲು-ಬಾಯಿಯಂತೆಯೂ, ಮೆಟ್ಟಲುಗಳು-ನಾಲಿಗೆಯಂತೆಯೂ, ಪರ್ವತವೇ ವಿಶ್ವರೂಪಧಾರಿಯಾದ ನಿನ್ನ ಶಿರಸ್ಸಿನಂತೆಯೂ ತಂಡೋಪತಂಡವಾಗಿ ನಿನ್ನಸೇವೆಗೆ ಬರುವ ಜನರು ನಾಲಿಗೆಯ ಮೂಲಕ ಬಾಯನ್ನು ಹೊಂದಿ ಅಲ್ಲಿಂದ ಹದಿನಾಲ್ಕು ಲೋಕಗಳಷ್ಟಿರುವ ನಿನ್ನ ಉದರದಲ್ಲಿ ನೆಲಸುವುದಕ್ಕಾಗಿ ಹೋಗುತ್ತಿರುವರೋ ಅನ್ನುವ

ಹಾಗೆ ಕಾಣುವುದು. ದೀನಜನ ಬಂಧುವೇ! ನನ್ನ ಹಳ್ಳಿಯು ನಿನ್ನ ಆವಾಸಪರ್ವತದ ಹಿಂಭಾಗದಲ್ಲಿರುವುದು. ಮರೆಬಿದ್ದವನನ್ನು ಬೆನ್ನಿಗೆ ಕಟ್ಟಿಕೊಳ್ಳುವುದು ಸ್ವಭಾವ. ಆದುದರಿಂದ ನಾನೂ ನನ್ನ ಹಳ್ಳಿಯುವರೂ ನಿನ್ನ ಮರೆಹೊಕ್ಕಿರುವೆವು. ನಮ್ಮ ಪಾಪಗಳನ್ನು ಕ್ಷಮಿಸು. ನಮಗೆ ಸದ್ಗತಿಯನ್ನು ದಯಪಾಲಿಸು. ತಂದೆಯು ಮಕ್ಕಳ ತಪ್ಪನ್ನು ಎಷ್ಟೆಂದು ಎಣಿಸಲು ಸಾಧ್ಯ. ಲೋಕರೀತಿಯಲ್ಲಿ ಮೋಹವೆಂಬುದು ತಂದೆಗೆ ಮಗನ ತಪ್ಪನ್ನು ಸ್ಪಷ್ಟಪಡಿಸುವುದಿಲ್ಲ. ಆದರೆ ಲೋಕಕ್ಕೆಲ್ಲಾ ತಂದೆಯೇ! ನಿನ್ನಮಕ್ಕಳಾದ ನಾವು ಯಾವ ಸತ್ಕಾರ್ಯಗಳಿಂದ ನಿನ್ನ ಆದರಕ್ಕೆ ಪಾತ್ರರಾಗಿರುವೆವು? ಯಾವ ಕ್ರಿಯಾಶುದ್ಧಿಯನ್ನು ನೋಡಿ ನಮ್ಮ ತಪ್ಪನ್ನು ಲೆಕ್ಕಮಾಡಲಾರೆ? ಅದೆಲ್ಲಾ ಅಸಂಭವ. ನಮ್ಮ ಕೈಗಳು ಹಿಂಸೆಯಿಂದ ಅಪವಿತ್ರಗಳಾಗಿವೆ ಮಾತುಗಳು ಕ್ರೂರಮೃಗಗಳಂತಿವೆ. ಮನಸ್ಸು ಕಲಕಿದ ಸರೋವರದಂತಿರುವಾಗ ನಮ್ಮಮೇಲೆ ದಯೆಯೆಲ್ಲಿಂದ ಬರಬೇಕು. ಆದರೂ ಮೋಕ್ಷಸ್ವಾಮಿಯೇ, ನಾವು ಮೊಂಡಾಟದಿಂದ ಅಲ್ಪಸೇವೆ, ಅಷ್ಟೇ ಭಕ್ತಿಗಳಿಂದ ನಿನ್ನಪಾದದ ಮೇಲೆ ಬಿದ್ದು ನಿನ್ನನ್ನು ಬೇಡಿಕೊಳ್ಳುತ್ತೇವೆ. ನಮ್ಮನ್ನು ಕತ್ತಲೆ, ಯಾತನೆ, ಭಯ, ಕಠೋರಧ್ವನಿ, ದುರ್ಗಂಧಗಳಿಂದ ಕೂಡಿರುವ ಪಾತಾಳ ನರಕದಲ್ಲಿ ತಳ್ಳಬೇಡ. ಅಕಾರಣಬಂಧುವೇ, ನಮ್ಮನ್ನು ಉದ್ಧರಿಸು. ನಮ್ಮ ದೈನ್ಯದ ಗ[illegible]ಡಿಯನ್ನು ಆಲಿಸು. ಧರ್ಮಸ್ವರೂಪನಾದ ಹೇಮಗಿರಿಗಧಿನಾಯಕನೆ, ನಿನ್ನಲ್ಲಿ ಬೇಡುತ್ತೇನೆ. ಸನಾತನಧರ್ಮವು ಬಹಳ ಕಂದಿಕುಂದಿ ಹೋಗಿದೆ. ಕಲಿಪು[illegible] ಅದನ್ನು ಅಷ್ಟದಿಕ್ಕುಗಳಿಂದ ಅಟ್ಟಿಕೊಂಡು ಬರುತ್ತಿರುವನು. ನೀನೇ ಧರ್ಮರಕ್ಷಕನು, ನೀನು ಉಪದೇಶಿಸಿದ ಸನಾತನ ಧರ್ಮವನ್ನು ಕಾಪಾಡು, ನಿನಗಾಗಿ ಪ್ರಥಮ ಫಲವನ್ನು ಕೊಡುವ ಗ್ರಾಮದ ಜನರು ಧರ್ಮವನ್ನು ಬಿಡದೇ ಕಾಪಾಡಿಕೊಂಡು ಬರಲಿ, ರಾಜರು ಪ್ರಜೆಗಳನ್ನು ಆದರಿಸಲಿ, ಸನಾತನಧರ್ಮವೂ ರಾಜ ಪ್ರಜೆಗಳ ವಿಶ್ವಾಸವೂ ಕುಂದದೇ ಇರುವಂತೆ ಅನುಗ್ರಹಿಸು ಸ್ವಾಮಿ.

ಇದು ಲಕ್ಷ್ಮೀನಿವಾಸಸ್ಥಾನವೆಂದು ಕವಿಗಳು ಪಾಡಿರುವ ನನ್ನ ದೇಶದಲ್ಲೀಗ ನನ್ನ ಗ್ರಾಮದಲ್ಲೀಗ ಬಡತನದ ಬೊಬ್ಬೆಯು ಎದ್ದಿದೆ. ಲಕುಮಿಯು ಮುನಿಸಿಕೊಂಡಳೊ? ಭಗವನ್, ನೀನು ಮುನಿಸಿಕೊಂಡರೆ ತಾಯಿಯಾದ ಲಕ್ಷ್ಮಿಯಲ್ಲಿ ಮೊರೆಯಿಟ್ಟು ನಿನ್ನ ಪ್ರಸನ್ನತೆಯನ್ನು ಸಂಪಾದಿಸಿಕೊಳ್ಳುತ್ತಿದ್ದೆವು. ಈಗ ತಾಯಿಯೇ ಮುನಿಸಿಕೊಂಡಳು. ಇನ್ನಾರಲ್ಲಿ ಮೊರೆಯಿಡೋಣ?

ನನ್ನ ಗ್ರಾಮದ ಜನಗಳ ಮೈಮೂಳೆಗಳು ನನ್ನ ಕಣ್ಣನ್ನು ಚುಚ್ಚುತ್ತಲಿವೆ. ಅವರ ಬಡತನವು ನನ್ನ ಮನಸ್ಸನ್ನು ಅಲ್ಲೋಲಕಲ್ಲೋಲ ಮಾಡುತ್ತಿವೆ. ಹೇಮಗಿರೀಶನೆ! ನಿನ್ನ ಕೋಪವನ್ನೂ ಹಿಂತಿರುಗಿಸು. ಈ ಬಡತನದಲ್ಲೇ ನಾವು ಒದ್ದಾಡುತ್ತಿದ್ದರೆ ನಿನ್ನನ್ನು ಸಂತೋಷದಿಂದ ಭಜಿಸುವುದ್ಯಾವಾಗ? ಬಡತನವು ಪಾಪದ ಹೆದ್ದಾರಿ. ನಮ್ಮನ್ನು ಸನ್ಮಾರ್ಗದಲ್ಲಿ ನಡೆಸಿಕೊಂಡು ಹೋಗು ಸ್ವಾಮಿ. ನಮ್ಮ ಪಿತೃಗಳಲ್ಲಿಟ್ಟಿದ್ದ ವಾತ್ಸಲ್ಯವನ್ನೇ ನಮ್ಮ ಮೇಲೆ ತೋರು. ಮುಕುಂದ, ಮುರಮರ್ದನ, ವಾಸುದೇವ, ರಂಗನಾಥ, ಶ್ರೀನಿವಾಸ ನಾನು ಹಳ್ಳಿಯ ಜನರಿಗಾಗಿ ಬರಿಯ ಐಹಿಕಫಲವನ್ನನುಗ್ರಹಿಸುವ ಸಲುವಾಗಿ ಮಾತ್ರ ನಿನ್ನನ್ನು ಸ್ತುತಿಸಲಾರೆ ಅವರಿಗೆ ಆಮುಷ್ಮಿಕ ಸೌಖ್ಯವನ್ನೂ ದಯಪಾಲಿಸಬೇಕೆಂದು ನಿನ್ನಲ್ಲಿ ಮೊರೆಯಿಡುತ್ತೇನೆ ಸ್ವಾಮಿ. ನಾವು ಕರ್ಮದ ಮೂಟೆ ಹೊತ್ತುಕೊಂಡು ನಿನ್ನ ಬೆಟ್ಟವನ್ನು ಹತ್ತಲಾರೆವು. ಆ ಮೂಟೆಯನ್ನು ನಾವು ಹೇಮಾವತಿಯಲ್ಲಿ ಸ್ನಾನ ಮಾಡುವಾಗ ಅಲ್ಲೇ ತಳ್ಳಿಬಿಡು. ನೀನು ಕರ್ಮಗಳನ್ನು ಗದರಿಸಿದರೆ ಅವು ಮಾಯವಾಗುವುವು. ನೀನು ಕರ್ಮಾತೀತನು. ನಿನ್ನ ರಥೋತ್ಸವಸಮಯದಲ್ಲಿ ಕುಂಟರು, ಕುರುಡರು ಹೆಳವರು ಮತ್ತಿತರ ಕಷ್ಟಜೀವಿಗಳು ನಿನ್ನ ಹೆಸರನ್ನು ಹೇಳಿ ಜೀವನಯಾತ್ರೆಯನ್ನು ಜರುಗಿಸುತ್ತವೆ. ಅವುಗಳ ಕಷ್ಟನಿವಾರಣೆಯಾಗಲಿ. ಮುಂದಣ ಜನ್ಮವು ಶ್ರೇಷ್ಠವಾಗಿಯೂ ಭಕ್ತಿಯುಕ್ತವಾಗಿಯೂ ಇರಲಿ.

ನಾನೂ ಅನ್ನುವುದೇನೂ ಎಂಬುವುದನ್ನೂ ನೀ ತಿಳಿಸೋರಂಗ
ಕನ್ನಡನಾಡಿನ ಪ್ರಭುಗಳ ಕೈ ನಿನ್ನ ಕೈಯ್ಯೊಳಗಿರಲೋ ದೇವ
ಎನ್ನಯ ಹಳ್ಳಿಗೆ ಪುಣ್ಯಭೂಮಿಗೆ ವಿಶ್ವದ ವಿಶ್ವಕೆ ಶುಭವೋ ಸ್ವಾಮಿಾ
ನಿನ್ನನಾಮಕೆ ಜಯವೋ ಸ್ವಾಮಿ ನಿನ್ನಪಾದಕೆ ನಮವೊ

ನಾನು ಪುಸ್ತಕದ ಹಾಳೆಗಳನ್ನು ತಿರುವಿ ಹಾಕುವಂತೆ ನನ್ನ ಆಯುಸ್ಸಿನ ದಿನಗಳು ಮಗುಚಿ ಹಾಕಲ್ಪಡುತ್ತಿವೆ. ಆಯಾ ದಿನಗಳೆಂಬ ಹಾಳೆಗಳಲ್ಲಿ ನನ್ನ ಎಲ್ಲಾ ಪಾಪಪುಣ್ಯಗಳು ಬರೆಯಲ್ಪಟ್ಟು ದೇಹಾಂತ್ಯದಲ್ಲಿ ನಿನ್ನ ಮುಂದೆ ಅವು ಓದಲ್ಪಡುತ್ತವೆ. ಸ್ವಾಮಿ, ನಿನ್ನಯ ಜನದಲ್ಲಿ ನಾನು ಶ್ರದ್ಧೆವಿತ್ತ ವಿಧಿಗಳ ಲೋಪದಿಂದ ಏನೇನು ಮಾಡಿರುವೆನೋ ಅವುಗಳನ್ನು ಕ್ಷಮಿಸು ಪ್ರಕೃತಿಯ ಆಕ್ರಮಣ ಕರ್ಮದ ಸೆಳೆತಗಳಿಂದ ಏನೇನು ಅಪರಾಧಗಳೊದಗಿ ನಿನ್ನ ಮನಸ್ಸಿಗೆ ಬೇಜಾರಾಗಿದೆಯೋ ಅವೆಲ್ಲವನ್ನೂ ಕ್ಷಮಿಸು. ನಿನ್ನ ಸಾನ್ನಿಧ್ಯಪರ್ವತವನ್ನು ಪವಿತ್ರವಾಗಿ

ಡಲು ನನ್ನ ಕೈಲಾದಷ್ಟು ಸಾಹಸಪಡುತ್ತಿರುವೆನು. ನಿನ್ನ ಭಕ್ತರೂ ಈ ವಿಷಯದಲ್ಲಿ ಗಮನವಿಡಲಿ. ನಿನ್ನ ಸೇವೆಗಾಗಿ ಬರುವ ಎಲ್ಲಾ ವೈದಿಕ ಲೌಕಿಕವರ್ಗದವರಿಗೆ ಆಯುರಾರೋಗ್ಯ ಐಶ್ವರ್ಯಾಭಿವೃದ್ಧಿಯುಂಟಾಗಲಿ. ಸೃಷ್ಟಿಯಿಂದ ಇದುವರೆಗೆ ಪರಮಭಾಗವತರು ನಿನ್ನನ್ನು ನಾನಾ ವಿಧವಾಗಿ ಸ್ತುತಿಸಿ ಒಲಿಸಿಕೊಂಡಿರುವರು. ವಿಭೀಷಣನು ಶರಣಾಗತಿಯಿಂದ, ಜಯವಿಜಯರು ಪರಾಕ್ರಮಪ್ರದರ್ಶನದಿಂದ, ಸನಕಾದಿಗಳು ತಪಸ್ಸಿನಿಂದ, ನಾರದಾದಿಗಳು ಗಾನದಿಂದ, ಲಕುಮಿಯು ಸೇವೆಯಿಂದ. ನಿನ್ನನ್ನು ಹೂವಿನಿಂದ ಅರ್ಚಿಸೋಣವೆಂದರೆ ಉದರದಲ್ಲೇ ಪುಷ್ಪವೆಂಬುದಾಗಿ ಭಕ್ತರು ನಿನ್ನ ಸಾನ್ನಿಧ್ಯಾಲಯದಲ್ಲಿ ಪಾಡುವುದನ್ನು ಕೇಳುತ್ತಿರುವೆನು. ಭಕ್ತವತ್ಸಲ, ಇದೋ ನಿನಗೆ ನಮಸ್ಕಾರವು. ಎಲ್ಲವೂ ನೀನೆ. ಬಾಲ್ಯದ ಅಪರಾಧಗಳು ಅಜ್ಞಾನಮೂಲಕವೆಂದು ಕ್ಷಮ್ಯಗಳಾಗಿವೆ ಆದರೆ ಯೌವನದ ಅಪರಾಧಗಳಿಗವಕಾಶವೇ ಬೇಡ. ಅವು ಮುಪ್ಪಿನಲ್ಲಿ ನಿನ್ನ ಸ್ತೋತ್ರಕ್ಕೆ ಅಡ್ಡಿಯಾದಾವು. ಮಗುವನ್ನು ತಂದೆಯು ಕೈಹಿಡಿದು ತೊಡೆಯಮೇಲೆ ಕುಳ್ಳಿರಿಸಿಕೊಳ್ಳುವಂತೆ ನನ್ನನ್ನು ಬಾಲ್ಯಾವಸ್ಥೆಯಿಂದ ಕೈಹಿಡಿದುಕೊಂಡು ಯೌವನದ ಹೆದ್ದಾರಿಯಲ್ಲಿ ಬಿಟ್ಟಿರುವೆ. ಈಗ ನನ್ನ ಇಂದ್ರಿಯಗಳು ಸ್ಫುಟವಾಗಿವೆ. ಇಂತಹ ಸಮಯದಲ್ಲಿ ಪರಿಶುದ್ಧವಾದ ಮನಸ್ಸಿನಿಂದ ನಿನಗೆ ನಮಸ್ಕಾರ ಮಾಡುತ್ತೇನೆ. ಮುಂದಿನ ಕ್ಷಣದಲ್ಲಿ ನನಗೆ ನಂಬಿಕೆಯಿಲ್ಲ. ಸ್ವಾಮಿ, ಇದೋ ಪುನಃ ನಮಸ್ಕರಿಸುತ್ತೇನೆ. ವಿಶ್ವದ ಹೃದಯವು ಶುದ್ಧವಾಗಲಿ. ಪರಸ್ಪರಪ್ರೇಮವು ಬೆಳಗಲಿ. ಅಖಿಲಲೋಕನಾಯಕನೆ, ಭೃಗುಮಹರ್ಷಿಗೆ ಪ್ರತ್ಯಕ್ಷನಾದ ಸ್ವಾಮಿಯೆ, ನಿನ್ನ ರಥೋತ್ಸವಕ್ಕಾಗಿ, ನಿನ್ನ ದರ್ಶನಾಕಾಂಕ್ಷಿಗಳಾಗಿ ಬರುವ ಸಮಸ್ತರಿಗೂ ಸಕಲಸನ್ಮಂಗಳಗಳನ್ನು ಕೊಟ್ಟು ಸಲಹೋರಂಗ. ಹೇಮಗಿರೀಶನೆ, ನಿನಗೆ ಹುಟ್ಟಿದ ಹಳ್ಳಿಗರಪರವಾಗಿ ಈ ದೀನನ ವಂದನೆಯು.

ಓಂ ಶಾಂತಿ ಶ್ಶಾಂತಿ ಶ್ಶಾಂತಿಃ



